BANASHANKARI— A novel in Kannada by
Publisher : Tejaswini Niranjana, Kathaa Saahitya
5th Block, Jayanagar South, Bangalore-56
Pages viii+220 Price: Rs. 6-00



First Edition 1954
Second Edition 1959
Third (Revised) Edition 1976





ಮುದ್ರಕರು :
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ (ಪ್ರೈ.) ಲಿಮಿಟೆ
12/13 ಲಾಲ್‌ಬಾಗ್ ಫೋರ್ಟ್ ರೋಡ್, ಬೆಂಗಳೂರು–560 004

Paper used for printing this book was made available by th
ment of India at concessional rate through t nataka
and Booksellers Association.

# ಪ್ರಕಾಶಕರ ನುಡಿ

ನಿರಂಜನರ ಪ್ರಥಮ ಕಾದಂಬರಿ ‘ ವಿಮೋಚನೆ ’ ಯಿಂದ ಆರಂಭವಾಗಿ ಹೊಸ ಕಾದಂಬರಿ ‘ ಮೃತ್ಯುಂಜಯ ’ದ ತನಕ ಒಟ್ಟು ೧೦ ಕಾದಂಬರಿಗಳನ್ನು ಕಥಾಸಾಹಿತ್ಯದ ಈ ಸರಣಿಯಲ್ಲಿ ಈ ವರ್ಷ ಹೊರತರುತ್ತಿದ್ದೇವೆ. ಈಗಾಗಲೇ ಪ್ರಕಟವಾಗಿರುವ ಕೃತಿಗಳು: ‘ ವಿಮೋಚನೆ ’, ‘ ರಂಗಮ್ಮನ ವಠಾರ ’, ‘ ನೋವು ’, ‘ ನಂದಗೋಕುಲ ’, ‘ ಅಭಯ ’ ಮತ್ತು ‘ ಕಲ್ಯಾಣ ಸ್ವಾಮಿ ’. ಏಳನೆಯದು ‘ ಬನಶಂಕರಿ ’. ಮುಂದಿನವು : ‘ ಬಂಗಾರದ ಜಿಂಕೆ ’, ‘ ಸ್ವಾಮಿ ಅಪರಂಪಾರ ’ ಮತ್ತು ‘ ಮೃತ್ಯುಂಜಯ ’.

‘ ಬನಶಂಕರಿ ’ ಯ ಪ್ರಥಮ ಆವೃತ್ತಿ ಪ್ರಕಟವಾದದ್ದು ೧೯೫೪ ರಲ್ಲಿ, ಮೈಸೂರಿನ ವಿದ್ಯಾನಿಧಿ ಬುಕ್‌ಡಿಪೋ ಅವರಿಂದ. ಎರಡನೇ ಮುದ್ರಣ ೧೯೫೯ ರಲ್ಲಿ ತಿಪಟೂರಿನ ಸುದರ್ಶನ ಪ್ರಕಾಶನದವರಿಂದ ಹೊರಬಂತು.

ಇಲ್ಲಿ ಬಳಸಿರುವ ಮುದ್ರಣ ಕಾಗದವನ್ನು ಪಡೆಯಲು ನೆರವಾದ ಕರ್ನಾಟಕ ಪ್ರಕಾಶಕರ ಮತ್ತು ಪುಸ್ತಕವ್ಯಾಪಾರಿಗಳ ಸಂಘದ ಅಧ್ಯಕ್ಷ ಶ್ರೀ ಎಚ್. ಕಮಲಾನಾಥ್ ಅವರಿಗೂ ಸೊಗಸಾದ ಮುದ್ರಣಕ್ಕೆ ಕಾರಣರಾದ ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಸಂಸ್ಥೆಯ ಮ್ಯಾನೇಜಿಂಗ್ ಡೈರಕ್ಟರ್ ಶ್ರೀ ಎಂ. ಎಚ್. ಕೌಜಲಗಿ ಅವರಿಗೂ ಕಥಾ ಸಾಹಿತ್ಯ ಋಣಿಯಾಗಿದೆ.

**ತೇಜಸ್ವಿನೀ ನಿರಂಜನ**
ಕಥಾಸಾಹಿತ್ಯದ ಪರವಾಗಿ

ಆಗಸ್ಟ್ ೩೦, ೧೯೭೬
೫೧೫, ೭ನೇ ಮುಖ್ಯ ರಸ್ತೆ
೫ನೇ ಬ್ಲಾಕ್
ಜಯನಗರ ದಕ್ಷಿಣ
ಬೆಂಗಳೂರು – ೫೬೦ ೦೪೧

## ೧

"ಅಮ್ಮೂ, ದೇವರ ಮನೆಗೆ ಹೋಗಿ ಹಣತೆ ಹಚ್ಚಿಕೊಂಡು ಬಾರೇ."

"ಹೂಂ ಅತ್ತೆ."

ಪ್ರೀತಿಯ ಮಗುವಿಗೆ ಹೇಳಿದ ಹಾಗಿತ್ತು ಅತ್ತೆಯ ಮಾತು. ಸೊಸೆಯೂ ಅಷ್ಟೆ. ಹೂವಿನಷ್ಟು ಕೋಮಲ ಆ ಮಾರುತ್ತರದ ಧ್ವನಿ.

ಮೊಗಸಾಲೆಯಲ್ಲಿ ಮಾವ ಕುಳಿತಿದ್ದರು. ಅವರೆದುರಿಂದ ಹಾದು ಹೋಗಿ ಆ ಹಣತೆಯನ್ನೆತ್ತಿಕೊಳ್ಳಬೇಕು. ಹನ್ನೆರಡು-ಹದಿಮೂರರ ಆ ಪುಟ್ಟ ಹುಡುಗಿ ಮೈತುಂಬ ಸೆರಗು ಹೊದೆದುಕೊಂಡು ವಿನೀತಳಾಗಿ ಮಾವನೆದುರು ನಡೆದು ಬಂದಳು.

ಶಾಂತವಾದ ಸ್ವರದಲ್ಲಿ ಅವರು ಕೇಳಿದರು :

"ಸಾಲು ದೀಪ ಹಚ್ತೀಯೇನಮ್ಮಣ್ಣಿ ?"

"ಹೂಂ, ಮಾವಯ್ಯ."

"ಹೌದು, ಹಚ್ಚಿಡಿ. ಆಗ್ನಿಂದ ಪಟಾಕಿ ಸುಡೋಕೆ ಹುಡುಗರು ಕಾಯ್ತಾ ಇದಾರೆ."

"ಹೂಂ..."

ಪಟಾಕಿಯ ಪದೋಚ್ಚಾರ ಅಮ್ಮುವ ಲಗುಬಗೆಯಿಂದ ನಡೆಯುವಂತೆ ಮಾಡಿತು. ಎಣ್ಣೆ ತುಂಬಿದ್ದ ಹಣತೆಯನ್ನೆತ್ತಿಕೊಂಡು ಅವಳು ದೇವರ ಮನೆಗೆ ಹೋದಳು. ಹೊಸತಾಗಿ ಹೊಸೆದಿದ್ದ ಅರಳೆಯ ಬತ್ತಿ ಸೊಗಸಾಗಿ ಆ ಹಣತೆಯಲ್ಲಿ ಎಣ್ಣೆಯೊಡನೆ ಬೆರೆತು ಒರಗಿಕೊಂಡಿತ್ತು. ಒಂದು ವಾರಕ್ಕೆ ಹಿಂದೆಯೇ ದೀಪಾವಳಿಯ ಹಬ್ಬಕ್ಕೆಂದು ಅತ್ತೆಯೂ ಸೊಸೆಯೂ ಜತೆಯಾಗಿ ಕುಳಿತು ಬತ್ತಿ ಹೊಸೆದಿದ್ದರು—ಮೆಲುದನಿಯಲ್ಲಿ ದೇವರ ನಾಮ ಹೇಳುತ್ತ.

ಸಿಂಗರಿಸಿದ್ದ ದೇವರೆದುರು ದೀಪ ಉರಿಯುತ್ತಿತ್ತು. ಅದರಿಂದ ಹಣತೆಗೆ ಬೆಳಕು ಅಂಟಿಸಿಕೊಂಡಳು ಅಮ್ಮು. ಗಾಳಿಗೆ ಆರದಂತೆ ಸೆರಗಿನಿಂದ ಹಣತೆಯನ್ನು ಮರೆಮಾಡಿ, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ, ಅವಳು ಹೊರಬಂದಳು.

ಹೊರಗೆ ಹುಡುಗರಿಬ್ಬರು ಗಲಾಟೆ ಮಾಡುತ್ತಿದ್ದರು.

"ಅಪ್ಪಯ್ಯ— ನೋಡಪ್ಪಯ್ಯ, ಹೊಡೀತಾನೆ ರಂಗ."

"ನಾನಲ್ಲ ಅಪ್ಪಯ್ಯ, ಸುಳ್ಳು ಹೇಳ್ತಾನೆ ಅಣ್ಣ."

ಅಮ್ಮುವಿನ ಮೈದುನಂದಿರು ಯಾವಾಗಲೂ ಹಾಗೆಯೇ. ಹತ್ತು ವರ್ಷ-ಆರು ವರ್ಷ ವಯಸ್ಸಿನ ಆ ಹುಡುಗರು ಹೊರಗೆ ಗದ್ದೆಗಳಿಗೋ ತೋಟಕ್ಕೋ ಹೋದರೆ ಮನೆ ಬಿಕೋ ಎನ್ನುತ್ತಿತ್ತು. ಅದು ಸಹಿಸಲಾಗದ ಮೌನ. ಅಮ್ಮು ಯಾವಾಗಲೂ ಅವರು ಹಿಂತಿರುಗಿ ಬರುವುದನ್ನೇ ಇದಿರು ನೋಡುತ್ತಿದ್ದಳು. ಅತ್ತೆಯೂ ಆಗಾಗ್ಗೆ ಕೇಳುತ್ತಿದ್ದರು : "ರಂಗ ಎಲ್ಲೇ ? ನಾಣಿ ಎಲ್ಲೇ ಅಮ್ಮು ?"

ಆ ಹುಡುಗರೋ, ಮಹಾ ತುಂಟರು. ಅತ್ತಿಗೆ ಎಂದು ಒಂದು ದಿನವೂ ಅಮ್ಮು

ಯನ್ನು ಗೌರವಿಸಿದವರಲ್ಲ. ಸಾಲದುದಕ್ಕೆ ಏಕವಚನದ ಸಂಬೋಧನೆ. ಅಮ್ಮಿ ಮಾತ್ರ ಅವರು ಇವರು ಎಂದು ಮನ್ನಣೆಕೊಟ್ಟು ಮಾತನಾಡಬೇಕು. ಉದ್ದನೆ ಲಂಗೋಟಿಯ ಕೆದರಿದ ಜುಟ್ಟಿನ ಆ ಹುಡುಗರು ಕೀಟಲೆ ಕೊಟ್ಟು ಅಮ್ಮಿ ಅಳುವಂತೆ ಮಾಡಿ ಓಡಿಹೋದ ರಂತೂ, ಅವರನ್ನು ಹಿಡಿಯುವವರೇ ಇಲ್ಲ.

ಮೊದಲು ಮೊಗಸಾಲೆ ಬೆಳಗಿತು. ಬಳಿಕ ಬಾಗಿಲ ಹೊರಗಿನ ಸಾಲು ದೀಪ.

ಕೈಗಳಲ್ಲಿ ಪಟಾಕಿಯ ಸರಮಾಲೆ ಹಿಡಿದು ನಾಣಿ-ರಂಗರು ಅರಚಿದರು :

"ಬೇಗ! ಹೂಂ—ಬೇಗ!"

ಅವರ ತಂದೆಯ ಸ್ವರ ಮೃದುವಾಗಿ, ಆದರೆ ದೃಢವಾಗಿ, ಕೇಳಿಸಿತು :

"ಯಾಕೋ—ಗಲಾಟೆ? ಸುಮ್ನಿರ್ಬಾರ್ದೇನೋ ಒಂದ್ನಿಮಿಷ?"

ಒಂದು ರೀತಿಯ ಸಂತೋಷ ಅಮ್ಮಿಗೆ. ತಾನು ಅಂಗಳದ ಸಾಲುದೀಪ ಹಚ್ಚಿದ ಮೇಲಲ್ಲವೆ ಅವರು ಪಟಾಕಿ ಹಾರಿಸಬೇಕು? ತನ್ನ ಹಿರಿಮೆಯನ್ನು ಆ ಹುಡುಗರು ಈಗ ಲಾದರೂ ಒಪ್ಪುವರೆಂದು ಅಮ್ಮಿಗೆ ಸಮಾಧಾನ.

ಹೊಸ್ತಿಲು ದಾಟಿ ಅಂಗಳಕ್ಕಿಳಿದು ತುಳಸಿಕಟ್ಟೆಯ ಬಳಿ ಸಾರಿದಳು ಅಮ್ಮಿ, ಕುಲುಕುಲು ನಗುತ್ತ. ರಂಗ - ನಾಣಿಯರಿಬ್ಬರಿಗೂ ಆ ಅತ್ತಿಗೆಯನ್ನು ಚೆನ್ನಾಗಿ ಥಳಿಸಬೇಕು ಎನ್ನುವಷ್ಟು ಸಿಟ್ಟು. ಆದರೆ ಆಗ ಅವರು ಅಸಹಾಯರು. ಅಂಗಳದ ಸುತ್ತಲಿನ ಸಾಲುದೀಪಗಳು ಹತ್ತಿ ಕೊಂಡ ಮೇಲೆಯೇ ಮೊದಲ ಪಟಾಕಿ ಹಾರಬೇಕು.

ಮನೆಯ ಸೊಸೆ ಬೇಕುಬೇಕೆಂದೇ ನಿಧಾನಿಸುತ್ತ ಕೆಲಸ ಮಾಡಿದಳು. ತನ್ನ ಕೈಯಲ್ಲೂ ಪಟಾಕಿ ಚಟ್ ಚಟ್ ಎನ್ನಬೇಕೆಂಬ ಆಸೆ ಅವಳಿಗೆ. ಆದರೆ ಅವಳೀಗ ಬರಿಯ ಹುಡುಗಿಯಲ್ಲ. ಆಕೆ ಪಟಾಕಿ ಕೈಗೆತ್ತಿಕೊಂಡರೆ ಅತ್ತೆ ಮಾವ ಏನೆಂದಾರು? ಈಗ ಹುಡುಗರ ಆಟವನ್ನು ನೋಡುತ್ತ ಗಂಭೀರವಾಗಿ ನಿಲ್ಲುವುದೇ ಅವಳಿಗೆ ಭೂಷಣ.

ಕೊನೆಯ ಹತ್ತು ಹಣತೆಗಳನ್ನು ಹಚ್ಚಿಟ್ಟು ಅಮ್ಮಿ ಮನೆಯೊಳಕ್ಕೆ ಓಡಬೇಕು. ಇಲ್ಲದೆ ಹೋದರೆ ಆ ಮೈದುನಂದಿರು ಪಟಾಕಿ ಹಚ್ಚಿ ತನ್ನ ಮೇಲೆ ಎಸೆಯುವುದು ಖಂಡಿತ. ಕೊನೆಯ ದೀಪವೂ ಬೆಳಗಿದ ಮೇಲೆ, ಕೈಯಲ್ಲಿದ್ದ ದೊಡ್ಡ ಹಣತೆಯನ್ನು ಅಮ್ಮಿ ತುಳಸಿ ಕಟ್ಟೆಯ ಮುಂದಿಟ್ಟಳು.

ಕಿರಿಯವನು - ರಂಗ - ಅತ್ತಿಗೆಯನ್ನು ಅಟ್ಟಿಸಿಕೊಂಡೇ ಬಂದ. ಆದರೆ ಅಮ್ಮಿ ಇನ್ನೂ ಸುರಕ್ಷಿತಳು, ತಂದೆಯ ಸಮ್ಮತಿ ದೊರೆತ ಮೇಲಲ್ಲವೆ ಹುಡುಗರು ಪಟಾಕಿ ಹಚ್ಚುವುದು?

ಆದರೆ ಅಮ್ಮಿ, ಹೆದರಿಕೊಂಡವಳಂತೆ ನಟಿಸುತ್ತಾ, "ನೋಡಿ ಅತ್ತೇ" ಎಂದು ದೂರುತ್ತಾ, ಮನೆಯೊಳಕ್ಕೆ ಧಾವಿಸಿದಳು.

ಹಿರಿಯವನು -ನಾಣಿ- ಅಂಗೈಯ ಹಿಂಭಾಗದಿಂದ ಸಿಂಬಳ ಒರೆಸುತ್ತಾ ಅಸಹನೆಯ ಧ್ವನಿಯಿಂದ ಬಾರಿ ಬಾರಿಗೂ ಕೇಳಿದ :

"ಅಪ್ಪಯ್ಯ, ಹಚ್ಚಲಾ ಅಪ್ಪಯ್ಯ? ಅಪ್ಪಯ್ಯ..."

ಮಧ್ಯ ವಯಸ್ಸಿನ ಆ ದಂಪತಿ ಬಾಗಿಲ ಹೊರಬಂದು ನಿಂತರು. ಅಮ್ಮಿ ಅತ್ತೆಯ ಸೆರಗು ಹಿಡಿದು ಹಿಂಬದಿಯಿಂದ ಇಣಕಿ ಇಣಕಿ ನೋಡಿದಳು.

"ಹುಷಾರಿ ರಂಗಾ, ಹುಷಾರಿ ನಾಣಿ, ಛಾವಣಿ ಹುಲ್ಲು ಹುಷಾರಿ. ಅಂಗಳದ

ಕೊನೇಲಿ ನಿಂತ್ಕೊಂಡು ಹಾರಿಸಿ..."

" ಹೂನಪ್ಪಯ್ಯಾ. ಹಂಗೇ ಮಾಡ್ತೀವಿ."

ರಂಗ ಮಾಲೆಯಿಂದ ಬಿಚ್ಚಿದೊಂದು ಪಟಾಕಿಯನ್ನು ಮೊದಲು ಹಾರಿಸಿದ. ಅದು ಆರಂಭ. ಆ ಬಳಿಕ ಹುಡುಗರ ಹುಚ್ಚು ಕುಣಿದಾಟದೊಡನೆ, ಹಿರಿಯರ ನಗೆ ಸಂತೋಷ ದೊಡನೆ, ಅಮ್ಮಿಯ ಆನಂದೋತ್ಸಾಹದೊಡನೆ, ಪಟಾಕಿಗಳು ಚಟ್ ಚಟಿಲೆಂದುವು. ಸುರು ಸುರು ಬಾಣಗಳು ಆಕಾಶಕ್ಕೆ ನೆಟ್ಟುವು. ನಕ್ಷತ್ರಕಡ್ಡಿಗಳು ಮೌನವಾಗಿ ಬಣ್ಣಬಣ್ಣವಾಗಿ ಉರಿದು ಸಾವಿರ ನಕ್ಷತ್ರಗಳನ್ನು ಉಗುಳಿದುವು:

ಆ ಬೆಳಕು ತಾರೆಗಳನ್ನೆಲ್ಲ ಅಂಗೈಯಲ್ಲಿ, ಸೆರಗಿನಲ್ಲಿ, ಹಿಡಿಯಬೇಕೆಂಬ ಬಯಕೆ ಅಮ್ಮಿಗೆ. ಆದರೆ ಗೃಹಿಣಿಯಾದ ಆಕೆ ಹಾಗೆ ಮಾಡಲು ಸ್ವತಂತ್ರಳಲ್ಲ.

ಇಷ್ಟಿದ್ದರೂ ಒಂದು ವಿಷಯದಲ್ಲಿ ಮಾತ್ರ ಯಾರಿಗೂ ಇಲ್ಲದ ಹೆಮ್ಮೆ ಅವಳ ಆಸ್ತಿ ಯಾಗಿತ್ತು. ಪೇಟೆಯಿಂದ ತನ್ನ ಪತಿದೇವರು ಕಳುಹಿದ್ದರಿಂದಲ್ಲವೆ, ಈ ದಿನ ಪಟಾಕಿಯಾಟ ಸಾಧ್ಯವಾದುದು ?

ಆ ಮಧ್ಯಾಹ್ನ ಬಲು ಜಂಭದಿಂದ ನಾಣಿ ಹೇಳಿದ್ದ :

" ಏ ಅಮ್ಮಿ...ಇವತ್ತು ಸಾಯಂಕಾಲ ಎಂಥೆಂಥ ಪಟಾಕಿ ಹಾರಿಸ್ತೀವಿ ಗೊತ್ತಾ ? "

ರಂಗ ರಾಗವೆಳೆದಿದ್ದ :

" ಆನೆ ಪಟಾಕಿ...ಕುದುರೆ ಪಟಾಕಿ..."

ಅಮ್ಮಿಗೆ, ತನಗೆ ಆ ಭಾಗ್ಯವಿಲ್ಲವೆಂಬ ದುಃಖ ಒಂದೆಡೆ ; ಪಟಾಕಿಗಳನ್ನು ಕಳುಹಿಸಿ ಕೊಟ್ಟುದು ತನ್ನ ಗಂಡನೆಂದು ಆ ಮೈದುನಂದಿರು ಹೇಳಲಿಲ್ಲವೆಂಬ ಸಿಟ್ಟು ಒಂದೆಡೆ. ಆ ಭಾವನೆಗಳಿಂದ ನೊಂದು ಅವಳ ಸುಂದರ ಮುಖ ಸಿಂಡರಿಸಿತು.

ನೋವಿನ ಧ್ವನಿಯಲ್ಲಿ ಒಂದು ಪ್ರಶ್ನೆ :

" ಆ ಪಟಾಕಿ ಎಲ್ಲಿಂದ್ಬಂತೋ ? "

" ಚಿಕ್ಕಮಗಳೂರಿಂದ."

" ಹುಂ, ಯಾರೊ ಕಳಿಸ್ಕೊಟ್ಟೋರು ? "

" ನಮ್ಮಣ್ಣ ಕಣೇ -ನಮ್ಮಣ್ಣ ! "

ಮತ್ತೆ ಸೋಲು ಅಮ್ಮಿಗೆ. ರಾತ್ರೆ ಅಂಚೆಯವನ ಜತೆಗೂಡಿ ಅವರು ಬರುವರು ; ಆಗ ಸಮಯ ಸಾಧಿಸಿ ಗುಟ್ಟಾಗಿ ಅವರಿಗೆ, ತನಗಾದ ಅವಮಾನದ ವರದಿಯೊಪ್ಪಿಸಬೇಕು -ಎಂದು ಅಮ್ಮಿ ಯೋಚಿಸಿದಳು.

ಹಾಗೆ ಎಷ್ಟೊಂದು ಸಾರಿ ಯೋಚಿಸಿರಲಿಲ್ಲ! ಆದರೆ ಗಂಡ ಬಂದಾಗ ಎಂದೂ ಅಂತಹ ಮಾತನ್ನು ಅಮ್ಮಿ ಆಡಿದವಳಲ್ಲ. ಅಷ್ಟೇಕೆ ? ಕ್ಷಣ ಕಾಲ ಎಂದಾದರೊಮ್ಮೆ ಗೋಪ್ಯದಲ್ಲಿ ಸಂಧಿಸಿದಾಗ ಹ್ಞಾ—ಹ್ಞೂ ಹೊರತಾಗಿ ಹೆಚ್ಚು ಮಾತನ್ನೇ ಅವಳು ಆಡಿದವಳಲ್ಲ.

...ಅವರ ಆಗಮನ...ಸಾಲುದೀಪಗಳ ಬೆಳಕಿನ ಆವರಣದೊಳಗೆ ಆ ಹುಡುಗರಿಬ್ಬರು ಹುಚ್ಚೆದ್ದು ಕುಣಿಯುತ್ತಿದ್ದಾರೆ. ಕತ್ತಲು—ಬೆಳಕುಗಳ ನಡುವೆ ಕಣ್ಣುಮುಚ್ಚಾಲೆಯಾಟ ನಡೆದಿದೆ. ಅದನ್ನು ಅಮ್ಮಿ ಬಾಗಿಲ ಬಳಿ ನಿಂತು ನೋಡುತ್ತಿದ್ದಾಳೆ. ಹಾಗೆ ನೋಡುತ್ತಿದ್ದರೂ ಅವಳ ದೃಷ್ಟಿ ಮುಂದಕ್ಕೆ ಹರಿದಿದೆ—ಮುಂದಕ್ಕೆ. ದೂರ...ಗುಡ್ಡ ಬೆಟ್ಟಗಳನ್ನು ದಾಟಿ,

ಹೊಲಗಳಾಚೆ, ದಟ್ಟನೆಯ ಮರಗಳ ನಡುವೆ, ಕಾಲುಹಾದಿ ಹಿಡಿದು ಅವರಿಬ್ಬರೂ ನಡೆದು ಬರುತ್ತಿರಬೇಕು—ಅಂಜೆಯುವನು ಮತ್ತು ಅವರು...

ಸ್ವಲ್ಪ ಹೊತ್ತಿನಲ್ಲಿ ಪಟಾಕಿ ಸುಟ್ಟು ಮುಗಿಯಿತು. ಅತ್ತೆ ಅಡುಗೆ ಮನೆಗೆಂದು ಒಳ ಹೋದರು.

ಮಾವ ಎಳೆಯರನ್ನು ಉದ್ದೇಶಿಸಿ, "ಇನ್ನು ಸಾಕು. ಬನ್ನಿರೋ ಒಳಕ್ಕೆ." ಎಂದರು.

ಅಮ್ಮಿ ಅಂಗಳದ ಬಲಮೂಲೆಯಲ್ಲಿ ಬಿದಿರು ತಟಿಕೆಗಳು ಮರೆಮಾಡಿದ್ದ ಬಚ್ಚಲು ಮನೆಗೆ ಹೋದಳು. ಮುಂಜಾವದ ಹಬ್ಬದ ಸ್ನಾನಕ್ಕೆಂದು ನೀರು ಹೊತ್ತು ನಿಂತಿತ್ತು ದೊಡ್ಡ ಗುಡಾಣ. ಅತ್ತೆ ಅದರ ಸುತ್ತಲೂ ಚಿತ್ತಾರ ಬರೆದಿದ್ದರು. ಅಮ್ಮಿ ಅದರ ಕೊರಳಿಗೆ ಹೂವಿನ ಹಾರ ಕಟ್ಟಿದ್ದಳು.

...ಬೆಳಗು ಮುಂಜಾನೆ ಅತ್ತೆ ಎಲ್ಲರನ್ನೂ ಬೇಗ ಎಬ್ಬಿಸುವರು. ಆ ಬಳಿಕ ದೇವರ ದೀಪದ ಮುಂದೆ ಗಂಡನನ್ನು ಕುಳ್ಳಿರಿಸಿ, ಹಸಿ ಗರಿಕೆ ಹುಲ್ಲಿನ ಚಿಗುರಿನಿಂದ ಅಮ್ಮಿ ಮೂರು ಬಾರಿ ಆತನ ಮೈಗೆ ಎಣ್ಣೆ ಇಳಿಸಬೇಕು. ಆಮೇಲೆ ಆತ ಬೇಡವೆನ್ನದೇ ಹೋದರೆ ಆ ಮೈ ಕೈಗಳಿಗೆ, ತಾನೇ ಎಣ್ಣೆ ತೀಡಬೇಕು.

ಆ ಯೋಚನೆಯಿಂದಲೇ, ಗುಡಾಣವನ್ನು ಮುಟ್ಟಿನಿಂತಿದ್ದ ಅಮ್ಮಿಯ ಮುಖ ಕೆಂಪ ಗಾಯಿತು. ಮದುವೆಯಾದೊಡನೆಯೇ ಮಾವನ ಮನೆಗೆ ಬಂದಿದ್ದಳು ಅಮ್ಮಿ - ತಾಯಿ ತಂದೆ ಯರಿಲ್ಲದ ತಬ್ಬಲಿ ಹುಡುಗಿ. ತವರಿನಲ್ಲಿ ಹಿಂದೆ ಉಳಿದವನೊಬ್ಬನೇ- ವಯಸ್ಸಿನಲ್ಲಿ ನಾಲ್ಕು ವರ್ಷ ಹಿರಿಯವನಾದ ಆಕೆಯ ಅಣ್ಣ. ಗಂಡನ ಮನೆಗೆ ಬಂದ ಪ್ರಟಾಣಿ ಹುಡುಗಿ ಅಮ್ಮಿ ಗೃಹಲಕ್ಷ್ಮಿಯಾದಳು; ಮಾವ ಅತ್ತೆಯರ ಪ್ರೀತಿಪಾತ್ರಳಾದ ಮುದ್ದಿನ ಸೊಸೆಯಾದಳು.

ಇದು ಈ ಮನೆಯಲ್ಲಿ ಆಕೆಯ ಎರಡನೆಯ ದೀಪಾವಳಿ. ಕಳೆದ ಬಾರಿ ಗಂಡ ಊರಲ್ಲೇ ಇದ್ದ. ಹದಿನೇಳರ ಆ ಅಣ್ಣ, ತಾನು ಮದುವೆಯಾದ ಸದ್ಗೃಹಸ್ಥನೆಂಬುದನ್ನೂ ಮರೆತು, ತಮ್ಮಂದಿರ ಜತೆ ಸೇರಿ ಪಟಾಕಿ ಸುಟ್ಟಿದ್ದ. ಅದು, ಅವರ ತಂದೆ ಹಿಂದೆಯೇ ನಗರದಿಂದ ತಂದು ತೆಗೆದಿರಿಸಿದ್ದ ಪಟಾಕಿ...ಆ ಸಾರೆಯೂ ಗಂಡನಿಗೆ ಎಣ್ಣೆ ತೀಡೆಂದು ಅತ್ತೆ ತನಗೆ ಹೇಳಿ ದ್ದರು. ಆದರೆ ತನಗೆ ನಾಚಿಕೆಯಾಗಿತ್ತು, ಗಂಡನಿಗೂ ನಾಚಿಕೆಯಾಗಿತ್ತು. ಗರಿಕೆ ಹುಲ್ಲಿನ ಶಾಸ್ತ್ರ ಮುಗಿದೊಡನೆ ಆತ, ತಲೆ ತಗ್ಗಿಸಿ, ಕೇಳಿಯೂ ಕೇಳಿಸದ ಧ್ವನಿಯಲ್ಲಿ, "ನಾನೇ ಹಚ್ಕೊತೀನಿ," ಎಂದಿದ್ದ.

ಇಲ್ಲ, ಈ ಸಾರೆ ಹಾಗಾಗಬಾರದು.

ಅತ್ತೆಯ ಸ್ವರ ಒಳಗಿಂದ ಬಂತು :

"ಅಮ್ಮೀ, ಎಲ್ಹೋದಿಯೇ ?"

"ಬಂದೇ ಅತ್ತೆ..."

ಪಡಸಾಲೆಯಲ್ಲಿ ನಾಣಿ ಮತ್ತು ರಂಗ, 'ಹಾಗಲ್ಲ ಹೀಗೆ' ಎಂದು ಏರುದನಿಯಲ್ಲಿ ಏನೋ ಚರ್ಚೆ ನಡೆಸಿದ್ದರು.

ಅವರ ತಂದೆ ಬಂದು ಚಾಪೆಯ ಮೇಲೆ ಕುಳಿತೊಡನೆ ರಂಗ ಕೇಳಿದ :

"ಅಪ್ಪಯ್ಯ. ಕಥೆ ಹೇಳು ಅಪ್ಪಯ್ಯ."

"ಯಾವ ಕಥೇನೋ ?"

"ನರಕಾಸುರ ವಧೆ ಕಥೆ ಅಪ್ಪಯ್ಯ."

ಅದರ ಜತೆಯಲ್ಲೆ ನಾಣಿಯ ಸ್ವರ :

"ಬಲೀದು, ಬಲಿ ಚಕ್ರವರ್ತೀದು ಅಪ್ಪಯ್ಯ..."

ಆ ಬಳಿಕ ಕಥೆಗಳು—

ಅಮ್ಮಿಗೂ ಅಲ್ಲೇ ಕುಳಿತು ಕೇಳುವ ಆಸೆ. ಆದರೆ ಆ ಪುಟ್ಟ ಗೃಹಿಣಿಗೆ ಕಥೆ ಕೇಳಲು ಬಿಡುವಿಲ್ಲ. ಒಳಗೆ ಅಡುಗೆಯ ಕೆಲಸದಲ್ಲಿ ಅತ್ತೆಗೆ ನೆರವಾಗಬೇಕು. ಅವರು ಬರುವ ಹೊತ್ತಿಗೆ—

"ಚಿಕ್ಕಮಗಳೂರಿನಿಂದ ಗಾಡಿ ಕಟ್ಬಿದ್ದೇ ತಡವಾಯ್ತೇನೋ..." ಎಂದು ತಮ್ಮಷ್ಟಕ್ಕೆ ಅತ್ತೆ ಆಡಿಕೊಂಡರು.

ಅಮ್ಮಿ ಚಿಕ್ಕಮಗಳೂರು ನೋಡಿದವಳಲ್ಲ. ಆದರೆ ಅತ್ತೆ ಬಾರಿಬಾರಿಗೂ ಆ ಊರಿನ ವರ್ಣನೆ ಮಾಡಿದ್ದರು. ಅಲ್ಲಿ ದೊಡ್ಡ ಸಾಹುಕಾರರೊಬ್ಬರ ಅಂಗಡಿಯಲ್ಲಿ ಅಮ್ಮಿಯ ಗಂಡ ಲೆಕ್ಕ ಬರೆಯುವ ಗುಮಾಸ್ತೆ. ಒಂದು ವರ್ಷದ ಅವಧಿಯಲ್ಲೆ ಬಲು ನಂಬಿಗಸ್ಥನೆನಿಸಿಕೊಂಡು ತಿಂಗಳಿಗೆ ಆತ ಹತ್ತು ರೂಪಾಯಿ ಸಂಬಳ ಪಡೆಯುತ್ತಿದ್ದ. ದೊಡ್ಡವನಾದ ಹಾಗೆ ಅವನಿಗೆ ದೊಡ್ಡ ದೊಡ್ಡ ಸರಕಾರಿ ಹುದ್ದೆಗಳು ಸಿಗುವವೆಂದು ಅತ್ತೆ ಹೇಳುತ್ತಿದ್ದರು, ಮಾವನೂ ಹೇಳುತ್ತಿದ್ದರು.

ಚಿಕ್ಕಮಗಳೂರಿನಿಂದ ಹಳ್ಳಿಗೆ ಬರಬೇಕಾದರೆ ಎತ್ತಿನ ಗಾಡಿಯಲ್ಲಿ ಹನ್ನೆರಡು ಮೈಲು ದೂರ ಬರಬೇಕು. ಕಲ್ಲು ಕೆಸರಿನ ಕೊರಕಲು ಹಾದಿ. ಆಮೇಲೆ ಕಾಲ್ನಡಿಗೆ...ಹಾಗೆ ಹಳ್ಳಿ ಸೇರಬೇಕು.

ಅಡುಗೆಯ ಸಿದ್ಧತೆ ಎಲ್ಲವೂ ಮುಗಿದು ಅತ್ತೆ "ರಾಮಾ" ಎಂದು ಬೆನ್ನು ನಿಡಿದುಕೊಂಡರು.

ಹೊರಗೆ ಮಾವ ಕಥೆ ಹೇಳುತ್ತಿದ್ದುದೂ ನಿಂತಿತ್ತು.

"ಲಕ್ಷ್ಮೀ, ಲಕ್ಷ್ಮೀ..." ಎಂದು ಅವರು ಕರೆದರು.

"ಬಂದೆ."

"ಸುಳಿವೇ ಇಲ್ವಲ್ಲೇ ಇವರಿಬ್ಬರದೂ."

"ತಡವಾಗಿ ಗಾಡಿಕಟ್ಬಿದರೇನೊ ?"

ಅತ್ತೆಗೆ ಹೊಳೆಯುತ್ತಿದ್ದ ಕಾರಣ ಅದೊಂದೇ.

"ಹಬ್ಬದ ದಿವಸ. ಸ್ವಲ್ಪ ಬೇಗ್ನೆ ಹೊರಡ್ಬೇಕೂಂತ ಗ್ಯಾನ ಇರ್ಬೇಡ್ವೇನು ?"

"..............................."

"ಅಥ್ವಾ ಸಂತೆ ಬೀದೀಲಿ ಖರೀದಿ ಮಾಡ್ತಾ ತಡವಾಯ್ತೋ ಏನೊ ?"

"ಇದ್ದರೂ ಇದ್ದೀತು."

ಮಾವನ ಸಂದೇಹವೇ ಅಮ್ಮಿಯ ಸಂದೇಹ. ಖರೀದಿಗೆ ನಿಂತು ತಡವಾದುದೇ ಸರಿ. ತಾನು ಬೇರೆ, ಮೇಲೆ ಕನ್ನಡಿಯಿದ್ದ ಕುಂಕುಮದ ಪುಟ್ಟ ಕರಡಿಗೆಯೊಂದು ಇದ್ದರಾದೀತೆಂದು ಎಂದೋ ಒಮ್ಮೆ ಅತ್ತೆಗೆ ಹೇಳಿರಲಿಲ್ಲವೆ ?

ಹೊತ್ತು ಕಳೆಯಿತು ಬಲು ನಿಧಾನವಾಗಿ.

ಹೊಲಗಳ ನಡುವೆ ದೂರವಿದ್ದ ಮನೆಗಳಿಂದಲೂ ಆಗೊಮ್ಮೆ ಈಗೊಮ್ಮೆ ಪಟಾಕಿಗಳ ಸದ್ದು ಕೇಳಿಬರುತಿತ್ತು. ನಾಣಿ ಮತ್ತು ರಂಗ ಬಾಗಿಲ ಹೊರಗೆ ನಿಂತು, "ಅದು ಕಿಟ್ಟೀ ಮನೇದು, ಅದು ಮಾದನ ಮನೇದು" ಎಂದು ಲೆಕ್ಕ ಹಾಕುತ್ತಿದ್ದರು. ಹಳ್ಳಿಯ ಅಂಚಿನಲ್ಲಿ ಎತ್ತರದಲ್ಲಿ ಬೆಟ್ಟದ ತಪ್ಪಲಲ್ಲಿದ್ದ ಹೊಲೆಯರ ಕೇರಿಯಿಂದ ಢಮರು ಢಮಾ—ಡಿಕ್ಕಿ ಢಮಾ—ಡಿಕ್ಕಿ ಎಂದು ಪಲ್ಲವಿ ನುತಿಸುತ್ತಿತ್ತು. ಸಮೀಪದಲ್ಲೇ ಯಾರೋ ಶಿವನ ಮಹಿಮೆಯನ್ನು ಕುರಿತು ಹಾಡುತ್ತಿದ್ದರು. ಕತ್ತಲೆಯನ್ನು ಭೇದಿಸುತ್ತ, ಭತ್ತದ ಸಸಿಗಳ ಮೇಲಿಂದ ಹಾದು, ಮಾವು ಹಲಸುಗಳ ರೆಂಬೆಕೊಂಬೆಗಳ ನಡುವೆ ತೂರಿಕೊಂಡು, ಇಂಪಾದ ಮೋಹಕವಾದ ಆ ಸ್ವರ ಗೊತ್ತು ಗುರಿ ಇಲ್ಲದೆ ಸಂಚಾರಮಾಡುತ್ತಿತ್ತು.

ಮಳೆ ನಿಂತ ಅನಂತರದ ಚಳಿಗಾಳಿ ಬಾಗಿಲು ಗವಾಕ್ಷಿಗಳ ಮೂಲಕ ಮನೆಯ ಒಳನುಗ್ಗಿ ಬರಿದು ಮೈಗಳಿಗೆ ಕಚಕುಳಿ ಇಟ್ಟಿತು ; ಸೊಡರಗಳು ಅತ್ತಿತ್ತ ನರ್ತಿಸುವಂತೆ ಮಾಡಿತು.

ಹುಡುಗರಿಬ್ಬರೂ ತಾಯಿಗೆ ಸುತ್ತು ಸುತ್ತು ಬರುತ್ತ, "ಅಮ್ಮ, ಅಣ್ಣ ಬರಲಿಲ್ವಲ್ಲೇ… ಹಸಿವಾಗುತ್ತಲ್ಲೇ…" ಎಂದರು.

"ಹುಡುಗರಿಗೆ ಬಡಿಸು ಲಕ್ಷ್ಮಿ. ಬೆಳಗಿನಿಂದ ಕುಣೀತಾ ಇದ್ದಾರೆ. ನಿದ್ದೆ ಹೋಗಲಿ" ಎಂದರು ಮಾವ.

"ಹೂಂ, ನಾಳೆ ಬೆಳಿಗ್ಗೆ ಸ್ನಾನಕ್ಕೆ ಬೇರೆ ಬೇಗನೆ ಎಬ್ಬಿಸ್ಬೇಕು," ಎನ್ನುತ್ತ ಅತ್ತೆ ಹುಡುಗರನ್ನು ಒಳಕ್ಕೆ ಒಯ್ದರು.

ಅಮ್ಮಿಯೂ ಒಳಹೋಗಿ ಬಡಿಸಲು ನೆರವಾದಳು. ಇಷ್ಟು ಹೊತ್ತಿಗಾಗಲೇ ಅವರು ಬರಬೇಕಾಗಿತ್ತು. ಬಂದಿದ್ದರೆ, ಮಡಿಸ್ನಾನ ಮುಗಿಸಿ ಸಂಧ್ಯಾವಂದನೆ ಮಾಡಿ, ಅವರೂ ಊಟಕ್ಕೆ ಕೂಡುತ್ತಿದ್ದರು. ಮಾವ ಕೂಡಾ. ಆಗ ಎಲ್ಲರಿಗೂ ಅತ್ತೆ ಮತ್ತು ತಾನು ಬಡಿಸುತ್ತಿದ್ದೆವು…

ಹಾಗೆ ಯೋಚಿಸುತ್ತ ಯೋಚಿಸುತ್ತ, ಅಮ್ಮಿ ಹುಡುಗರಿಗೆ ಒಂದು ಹೋಳಿಗೆ ಹೆಚ್ಚು ಬಡಿಸಿದಳು. ಇಲ್ಲವೆ ಒಂದು ಕಡಿಮೆ. ಪರಿಣಾಮವಾಗಿ ಜಗಳ, ಗದ್ದಲ, ನಗೆಮಾತು.

ಎಳೆಯರು ಉಂಡು ಮಲಗಿದ ಮೇಲೂ ಅತ್ತೆ ಮಾವ ಸೊಸೆ ಕಾದು ನಿಂತರು. ಅಮ್ಮಿ ಮನೆಯೊಳಗೂ ಹೊರಗೂ ಸೊಡರುಗಳನ್ನು ಒಂದೊಂದಾಗಿ ಸರಿಪಡಿಸಿದಳು. ಕ್ಷಣಕ್ಷಣವೂ ಅವಳ ದೃಷ್ಟಿ ದೂರ ಹರಿಯುತ್ತಿತ್ತು. ಆ ಕತ್ತಲಲ್ಲಿ ಚಲಿಸುವ ಕಂದೀಲನ್ನು ಅವಳು ಹುಡುಕಿದಳು. ಹಳ್ಳಿಗೆ ಬರುವ ಹಾದಿಯಿಂದ ಮಾತುಕತೆಯ ಧ್ವನಿಯೇನಾದರೂ ಕೇಳಿ ಬರುತ್ತಿದೆಯೇನೋ ಎಂದು ಕಿವಿ ನಿಗುರಿಸಿದಳು.

"ಅಮ್ಮಿ ಒಳಕ್ಕೆ ಬಾಮ್ಮಾ. ಆ ಚಳೀಲಿ ಯಾಕೆ ಅಲ್ಲಿ ನಿಂತಿದ್ದೀಯಾ ? ಬಾ ಒಳಕ್ಕೆ" ಎಂದರು ಮಾವ ಮೃದುವಾಗಿ.

—ಅಥವಾ ಈ ದಿನ ಬರುವುದೇ ಇಲ್ಲವೇನೋ—ನಾಳೆ ಬರುವರೇನೋ…

ಅಮ್ಮಿಯ ಕಣ್ಣಂಚಿನಲ್ಲಿ ನೀರು ತುಳುಕಾಡಿತು. ಒಲ್ಲದ ಕಾಲುಗಳನ್ನು ಎಳೆದುಕೊಂಡು ಅವಳು ಒಳಹೋದಳು.

ಹೊತ್ತು ಕಳೆಯಿತು, ಮತ್ತಷ್ಟು ನಿಧಾನವಾಗಿ.

ಅಮ್ಮಿಯ ಮಾವ ಒಂದು ಪುಸ್ತಕ ತೆರೆದು ಎರಡು ಪುಟ ಓದಿದರು. ಯಾವುದೋ ದಸ್ತಾವೇಜು ತೆರೆದು ನಾಲ್ಕಾರು ಪುಟ ಮಗುಚಿ ಹಾಕಿದರು. ಅದೂ ಬೇಸರವಾಯಿತು. ಕನ್ನಡಕವನ್ನು ಮೂಗಿನ ಮೇಲಿಂದ ಇಳಿಸಿ ಮಡಚಿಟ್ಟು, ಅತ್ತಿತ್ತ ಶತಪಥ ತುಳಿದರು.

ಅಮ್ಮಿ ದೇವರ ಮನೆಗೆ ಹೋದಳು. ಅಲಂಕೃತ ಮಂಟಪದೊಳಗೆ ಮನೆದೇವರ ವಿಗ್ರಹ ನಿಶ್ಚಲವಾಗಿ ಕುಳಿತಿತ್ತು. ಅಲ್ಲೆ ಬಾಗಿಲಿಗೆ ಅತು, ಕಾಲು ಕೆರೆಯುತ್ತ ಅಮ್ಮಿ ನಿಂತಳು. ಅವ್ಯಕ್ತ ಪ್ರಾರ್ಥನೆಯ ನುಡಿಗಳೆಂಬಂತೆ ತುಟಿಗಳು ಚಲಿಸುತ್ತಿದ್ದುವು.

ಹಿಂಬದಿಯಿಂದ ನಡೆದು ಬಂದು ಅತ್ತೆ ಹೇಳಿದರು :

" ನೀನು ಊಟಮಾಡಿ ಮಲಕೋ ಅಮ್ಮಿ."

—ಎಲ್ಲಾದರೂ ಉಂಟೆ ? ಎಂತಹ ಮಾತು ?

" ನಾ ಒಲ್ಲೆ ಅತ್ತೆ. ನಂಗೆ ಹಸಿವಿಲ್ಲ."

ಕಾಡು ಹಾದಿ...ಕತ್ತಲು...ಅಮ್ಮಿಯ ಗಂಡನನ್ನು ಬಸಿರಲ್ಲಿ ಹೊತ್ತು ಹೆತ್ತಿದ್ದ ಆ ತಾಯಿಗೆ ಯಾಕೋ ಒಂದು ರೀತಿಯ ಅಳುಕು. ಶೀತಲ ಗಾಳಿ ನರನಾಡಿಗಳನ್ನು ತಿವಿಯುವ ಹಾಗೆ, ಆ ಅಳುಕು ಹೃದಯವನ್ನು ಹಿಂಡುತ್ತಿತ್ತು. ತೂಕಡಿಸುತ್ತಿದ್ದ ಎಳೆಯ ಮಕ್ಕಳಿಬ್ಬರನ್ನು ಮಲಗಿಸಿದ್ದಾಯಿತು...ಆ ಬಳಿಕ ಯೋಚನೆಗಳನ್ನು ಓಡಿಸಲೆಂದು ದೇವರ ನಾಮ...' ಕಂಡು ಕಂಡು ನೀ ಎನ್ನ ಕೈ ಬಿಡುವರೇ...'

ಮಾವ ಅಂಗಳಕ್ಕೆ ಹೋಗಿ ನಿಂತರು, ಬಹಳ ಹೊತ್ತು.

ತನಗರಿಯದಂತೆಯೇ ಅಮ್ಮಿ ಅತ್ತೆಯ ಹತ್ತಿರ ಬಂದಿದ್ದಳು. ಅತ್ತೆಯ ಮಡಿಲಲ್ಲಿ ಮುಖವಿರಿಸಿ ಎಲ್ಲವನ್ನೂ ಮರೆಯ ಬಯಸಿದಳು ಅಮ್ಮಿ. ಹಿತಕರವಾಗಿ ಮುಂಗುರುಳು ನೇವರಿಸುತ್ತಿದ್ದ ಅತ್ತೆಯ ಬೆರಳುಗಳು...ಆ ಪಲ್ಲವಿ...' ಕಂಡು ಕಂಡು ನೀ ಎನ್ನ...' ಎಲ್ಲವನ್ನೂ ಮರೆಯುವ ಸಾರ್ಥಕತೆ...ತಿಳಿದೂ ತಿಳಿಯದಂತೆ ಬಲೆ ಬೀಸಿದ ಕಳ್ಳ ನಿದ್ದೆ...

ಇರುವಿಕೆಯನ್ನು ಮರೆತ ಆ ಅವಸ್ಥೆಯೊಳಗೆ ಅಮ್ಮಿ ಅದೆಷ್ಟು ಹೊತ್ತು ಇದ್ದಳೊ!

ಯಾವುದೋ ಪಿಸುಮಾತು ಕೇಳಿಸಿತು ಅಮ್ಮಿಗೆ. ಇದು ಸ್ವಪ್ನವಿರಬೇಕು—ಎಂದು ಕೊಂಡಳು ಆಕೆ. ಅವರು ಬಂದ ಹಾಗೆ...ಬಂದು ತನಗಾಗಿ ಅತ್ತಿತ್ತ ದೃಷ್ಟಿ ಹಾಯಿಸುತ್ತಿದ್ದ ಹಾಗೆ...ಅಮ್ಮಿ ನಿಧಾನವಾಗಿ ಕಣ್ಣು ತೆರೆದಳು. ಅತ್ತೆ ಮಾವ ಜತೆಯಾಗಿಯೇ ಬಾಗಿಲ ಬಳಿ ನಿಂತಿದ್ದರು. ಬೇರೆ ಯಾರೂ ಇರಲಿಲ್ಲ. ಸಾಲು ದೀಪಗಳಿನ್ನೂ ಉರಿಯುತ್ತಿದ್ದುವು. ಅಲ್ಲೊಂದು ಇಲ್ಲೊಂದು ಸೊಡರು ಕಣ್ಣು ಮುಚ್ಚಿತ್ತು, ಅಷ್ಟೆ. ಪಿಸುಮಾತಿನ ಸ್ವರ ಬಾಗಿಲ ಬಳಿಯಿಂದ ಬರುತ್ತಿತ್ತು.

ಅತ್ತೆ ಹೇಳುತ್ತಿದ್ದರು :

" ನೋಡಿ ಈಗ ಸ್ಪಷ್ಟವಾಗಿ ಕಾಣ್ತದೆ ಕಂದೀಲು, ಅಲ್ಲ ? "

" ಹೂಂ...ಹೌದು...ಬೇಗ ಬೇಗನೆ ಬರ್ತ್ತಿರೋ ಹಾಗಿದೆ."

ಅಮ್ಮಿ ಥಟ್ಟನೆ ಎದ್ದು ಕುಳಿತಳು. ತಾನೂ ಬಾಗಿಲ ಬಳಿಗೆ ಓಡಬೇಕೆಂದು ಅವಳಿಗೆ ಆಸೆಯಾಯಿತು. ಆದರೂ ಒಳಮನಸ್ಸು ಹೇಳುತ್ತಿತ್ತು : ' ಇಲ್ಲೇ ಕೂತಿರು. ಈ ನಿರೀಕ್ಷೆ ಎಷ್ಟೊಂದು ಸುಂದರ ! ಇಲ್ಲೇ ಕೂತಿರು...'

ಆ ಸುಖಕ್ಕೆ ಭಂಗ ಬರಬಾರದೆಂದು ಅಮ್ಮಿ ಅಲ್ಲಿಯೇ ಚಾಪೆಯ ಮೇಲೆ ಕುಳಿತಳು.

ಅವಳ ಹೃದಯದ ಬಡಿತ ತೀವ್ರವಾಯಿತು. ಕತ್ತಲಲ್ಲೂ ಆನಂದದ ಮುಗುಳು ನಗು ಆ ಎಳೆಯ ತುಟಿಗಳ ಮೇಲೆ ಕುಣಿಯಿತು.

"............"

"ಮೂಲೆ ಹೊಲದ ಸಮೀಪಕ್ಕೇ ಕಂದೀಲು ಬಂತು, ಅಲ್ಲ ?"

"............"

"ಯಾಕೋ, ಒಬ್ಬನೇ ಇರೋ ಹಾಗಿದೇಂದ್ರೆ..."

"ಅಂಚೆಯವನು ಬಂದಿಲ್ವೇನೋ ಹಾಗಾದರೆ ?"

"ಅಥವಾ—"

ಅಮ್ಮಿ ಉಸಿರು ಹಿಡಿದು ಕುಳಿತಳು. ಮುಂದೆ—ಮುಂದೆ ಎಂತಹ ಮಾತುಗಳನ್ನು ಅವಳು ಕೇಳಬೇಕು ?

...ನಿಮಿಷಗಳು...ಒಂದು, ಎರಡು, ಮೂರು...ಹತ್ತು, ಇಪ್ಪತ್ತು...ನಿಮಿಷಗಳು ಯುಗಗಳಾಗುವುದೆಂದರೆ ಹಾಗೆಯೇ ಅಲ್ಲವೆ ?

"ಇಲ್ಲ ಲಕ್ಷ್ಮೀ, ರಾಮಚಂದ್ರ ಬರ್ಲಿಲ್ಲ...ಕೈ ಬೀಸಿ ಬೀಸಿ ನಡಿಯೋ ರೀತಿ ನೋಡು. ಮುನಿಯಪ್ಪನೇ ಇರಬೇಕು..."

ಅವರಲ್ಲ—ಮುನಿಯಪ್ಪ. ಅವರು ಚಿಕ್ಕಮಗಳೂರಲ್ಲೆ ಇದ್ದಾಗ ವಾರಕ್ಕೆರಡು ಬಾರಿ ಅಲ್ಲಿಗೆ ಹೋಗಿ ಬರುವ ಟಪಾಲಿನ ಮುನಿಯಪ್ಪನ ಆಗಮನವನ್ನು ಅಮ್ಮಿ ಇದಿರು ನೋಡುವುದಿತ್ತು. ಆದರೆ ಈ ದಿನ ಆತನ ಬದಲು ಅವರೇ ಬರಬಾರದಾಗಿತ್ತೆ ?

ಅತ್ತೆಯ ಸ್ವರ ಅನುಮಾನಿಸುತ್ತ ಕೇಳಿತು :

"ರಾಮ ಯಾಕೆ ಬರಲಿಲ್ಲವೋ ?"

"ದೀಪಾವಳಿ ಲೆಕ್ಕಾಚಾರ...ಹೆಚ್ಚು ಕೆಲಸವಿತ್ತೋ ಏನೋ..."

ಲಾಟೀನು ಜಿಗಿದು ಜಿಗಿದು, ಅಂಚಿನಿಂದ ಒಮ್ಮೊಮ್ಮೆ ಕಾಲು ಜಾರಿ ಹೊಲಕ್ಕಿಳಿದರೂ ಮತ್ತೆ ಮೇಲಕ್ಕೇರಿ, ಮನೆಯತ್ತ ಬರುತ್ತಿತ್ತು.

"ಯಾಕೆ-ಇವನು ಓಡಿ ಬರ್ತಿದ್ದಾನಲ್ಲಾ !..."

ಸದಾ ಶಾಂತವಾಗಿರುತ್ತಿದ್ದ ಮಾವನ ಸ್ವರದಲ್ಲೂ ಕಾತರದ ಭಾವನೆ ಒಡೆದು ತೋರುತ್ತಿತ್ತು ಆಗ.

ಎದುರಿನ ತೋಡಿಗೆ ಅಡ್ಡವಾಗಿದ್ದ ಮರದ ಸೇತುವೆಯನ್ನು ದಾಟ ಕಂದೀಲು ಅಂಗಳದ ಬಳಿಗೆ ಬಂತು. ಆದರೆ ಮೆಟ್ಟಲೇರಿ ಮನೆಯನ್ನು ಸಮೀಪಿಸಲಿಲ್ಲ.

"ಮುನಿಯಪ್ಪಾ, ಮುನಿಯಪ್ಪಾ !"

ಉತ್ತರ ಬರಲಿಲ್ಲ ಮುನಿಯಪ್ಪನಿಂದ.

ಅತ್ತೆ ಸ್ವಲ್ಪ ಕಸಿವಿಸಿಗೊಂಡೇ ಕೇಳಿದರು :

"ಪಾಪ, ಜಾರಿ ಬಿದ್ಬಿಟ್ನೇನೋ ಏನೋ..."

"ಮುನಿಯಪ್ಪಾ, ಏ ಮುನಿಯಪ್ಪಾ !"

ಅಮ್ಮಿ ಎದ್ದು, ಗೋಡೆಗೊರಗಿ ನಿಂತಳು.

ಮಾವ ಹೊರಕ್ಕಿಳಿದು ಅಂಗಳದ ಅಂಚಿನತ್ತ ಧಾವಿಸಿದರು. ಅಲ್ಲಿ ಕಂದೀಲನ್ನು ನೆಲದ

ಮೇಲಿಟ್ಟು, ಒಡೆದ ಕಲ್ಲೊಂದರ ಮೇಲೆ, ಎರಡೂ ಕೈಗಳಲ್ಲಿ ತಲೆ ಇರಿಸಿ, ಉಸಿರಿಗಾಗಿ ಏದುತ್ತ ಏದುತ್ತ ಮುನಿಯಪ್ಪ ಕುಳಿತಿದ್ದ.

" ಏನಾಯ್ತು, ಮುನಿಯ, ಏನಾಯ್ತು ? "

ಅತ್ತೆಯೂ ಇಳಿದು ಬಂದು ಸ್ವಲ್ಪ ದೂರದಲ್ಲಿ ನಿಂತರು.

" ಏನಾಯ್ತೂಂದ್ರೆ...? "

ಅಮ್ಮಿ ಮೆಲ್ಲನೆ ನಡೆದು ಬಂದು ಬಾಗಿಲನ್ನು ಆಧರಿಸಿ ನಿಂತಳು. ಅವಳ ಮನಸ್ಸು ಕೇಳುತ್ತಿತ್ತು, ಮೂಕವಾಗಿ :

' ಏನಾಯ್ತು ? ಅವರಿಗೇನಾಯ್ತು ? ನನ್ನ ದೇವರಿಗೇನಾಯ್ತು ? '

ಸ್ವರ ಹೊರಡಿಸಲೆತ್ನಿಸಿದ ಮುನಿಯ, ಮಾತಿನ ಬದಲು, ರೋದನದ ಧ್ವನಿ ತೆಗೆದ.

" ಅಯ್ಯೋ ! " ಎಂದರು ಅತ್ತೆ, " ಏನಾಯ್ತು ? ಅಯ್ಯೋ ! ಏನಾಯ್ತು ? "

ಮಾವ ಗದರಿ ನುಡಿದರು :

" ಸುಮ್ನಿರು ಲಕ್ಷ್ಮಿ, ನೀನು ಸುಮ್ನಿರು ! "

ಮತ್ತೂ ನಾಲ್ಕಾರು ನಿಮಿಷ ಮುನಿಯ ಮಾತನಾಡಲೇ ಇಲ್ಲ. ಮಡಿ—ಮೈಲಿಗೆಯನ್ನು ಗಣಿಸದೆ ಮಾವ, ಆತನ ಭುಜ ಹಿಡಿದು ಕುಲುಕಿದರು.

" ಹೇಳು ಮುನಿಯ ! ಹೇಳು ! ಏನಾಯ್ತು ಹೇಳು ! ಎಲ್ಲಿ ರಾಮಚಂದ್ರ ? ಬರ್ಲಿಲ್ವೇನು ? "

ಮುನಿಯ ಮಾವನ ಪಾದಗಳನ್ನು ಹಿಡಿದುಕೊಂಡ.

" ನಾನು ಪಾಪಿ ! ದ್ಯಾವ್ರೂ...ನಾನು ಕಡು ಪಾಪಿ ! "

" ಏನಾಯ್ತು ಹೇಳ್ಬಾರ್ದೇನೋ ?..."

ಆ ಬಳಿಕ ಪಿಸು ಮಾತಿನಲ್ಲಿ ಆ ವಿಷಯ...

" ಚಿಕ್ಕ ಅಯ್ನೋರು ಇವತ್ತು ಚಂಜೆಗೇ ತೀರ್ಕೊಂಡ್ರು......ಅಯ್ಯೋ...! "

ಅಮ್ಮಿಗೆ ಕೇಳಿಸಿದುದು ಆ ಮಾತಲ್ಲ. ಅವಳ ಕಿವಿಯನ್ನಿರಿದುದು ಅತ್ತೆಯ ಕಠೋರ ರೋದನ. ತಲೆತಿರುಗಿ ಅತ್ತೆ ನೆಲದ ಮೇಲೆ ಕುಸಿದು ಬಿದ್ದುದನ್ನು ಅವಳು ಕಂಡಳು. ಮಾವ ಸ್ತಂಭಿತರಾಗಿ ನಿಂತರು, ಕಲ್ಲು ಬೊಂಬೆಯ ಹಾಗೆ. ಕತ್ತಲೆಯನ್ನು ಭೇದಿಸಿಕೊಂಡು ಆಕಾಶಕ್ಕೆ ಅಡರಿದ ಆ ರೋದನವೂ ! ಅಮ್ಮಿ ಅಧೀರಳಾದಾಗ ಯಾವಾಗಲೂ " ಅಮ್ಮಾ " ಎನ್ನುತ್ತಿದ್ದಳು—ಗತಿಸಿದ ಅಮ್ಮನ ನೆನಪು. ಈಗಲೂ ಅತ್ತೆಯ ಬಳಿಗೆ ಓಡುತ್ತ ಓಡುತ್ತ ಅವಳು ಕೂಗಾಡಿದಳು : " ಅಮ್ಮಾ ! ಅಮ್ಮಾ !..."

" ಅಯ್ಯೋ ! ನನ್ನ ರಾಮಚಂದ್ರನ್ನ, ಮುದ್ದು ಕಂದನ್ನ, ಕೊಂದರಪ್ಪೋ ಕೊಂದರು... ಅಯ್ಯೋ—ಅಯ್ಯೋ ! "

ರಾಮ—ಚಂದ್ರ—...

ಅಮ್ಮಿ ಮಾವನ ಮುಖ ನೋಡಿದಳು, ಮುನಿಯನ ಮುಖ ನೋಡಿದಳು. ಆ ! ಹಾಗೂ ಆಯಿತೆ ?

" ಅಮ್ಮಾ ! ಅಮ್ಮಾ ! ......"

ಆ ಕೂಗಿನ ಜತೆಯಲ್ಲೇ, ಹೃದಯ ತಲ್ಲಣಿಸುವ ಹಾಗೆ ಬಿಕ್ಕಿ ಬಿಕ್ಕಿ ಬಂದ ಅಳು.

ಎಚ್ಚರಗೊಂಡ ಎಳೆಯ ಹುಡುಗರು ತಾಯಿ—ಅಮ್ಮಿಯರ ರೋದನ ಕೇಳುತ್ತಲೆ ತಾವೂ ಅಳುತ್ತ ಬಂದರು....

....ಚೇತರಿಸಿಕೊಂಡ ಮಾವ ಹೇಳುತ್ತಿದ್ದರು :

" ಅಳಬೇಡಿ, ಯಾರೂ ಅಳಬೇಡಿ ! ಅಳಬಾರದು, ಯಾರೂ ಅಳಬಾರದು ! "

ಹಾಗೆ ಹೇಳುತ್ತ ಅವರು ಮಾತ್ರ ಅಳುತ್ತಿದ್ದರು ಗೋಳೋ ಎಂದು.

ಮುನಿಯನೊಬ್ಬನೇ ಮಾತು ಬಂದವನಂತೆ ತಿರುತಿರುಗಿ ಹೇಳಿದ :

" ಮೂರೇ ದಿವಸದ ಜ್ವರ...ದಾಕ್ದಾರು ಬಂದ್ರು...ಎಲ್ಲಾ ಬಂದ್ರು...ನಮ್ಮಪ್ಪ ಉಳೀಲಿಲ್ಲಪ್ಪೋ ಉಳೀಲಿಲ್ಲ...ಎಂಗ್ಮಾಡ್ದ ಆ ಪರಮಾತ್ಮ !..."

ಆ ಎಲ್ಲ ಕಂಠಗಳಿಂದ ರೋದನದ ಸ್ವರಗಳು ಹೊರಟು ಒಂದರಲ್ಲೊಂದು ಬೆರೆತು ಏಕ ಸ್ವರವಾಗಿ ಗಗನ ಭೇದಿಸುತ್ತ ಮೇಲೇರಿದುವು.

ನಗುತ್ತಲೇ ಇದ್ದುವು ಸಾಲು ದೀಪಗಳು. ಆ ಸೊಡರುಗಳೆಲ್ಲ ಕಿರುನಾಲಗೆಗಳನ್ನು ಅತ್ತಿತ್ತ ಚಾಚುತ್ತ ಅಳುವವರನ್ನು ಅಣಕಿಸುತ್ತಿದ್ದುವು.

ದೀಪಾವಳಿಯ ಸಂಭ್ರಮದಲ್ಲಿ ಮೈಮರೆತಿದ್ದ ಆ ಪುಟ್ಟ ಹಳ್ಳಿ ಅಯ್ಯನವರ ಮನೆಯ ರೋದನ ಕೇಳಿ ಗಾಬರಿಗೊಂಡಿತು. ಜನರು ಒಬ್ಬರ ಮೇಲೊಬ್ಬರಾಗಿ ನಾಲ್ಕು ಮೂಲೆಗಳಿಂದ ಅಲ್ಲಿಗೆ ಬಂದರು.

ಯಾರೋ ಎಲ್ಲಿಂದಲೋ ಎಸೆದ ಆಕಾಶ ಬಾಣವೊಂದು ಸುಯ್ ಎಂದು ಎತ್ತರಕ್ಕೆ ಹೋಗಿ, ತಿರಿ—ತಿ—ತ್ತಿರಿ—ತಿರಿ ಎಂದು ಸ್ವರ ಅಡಗಿ, ಬೆಳಕು ಅಳಿದು, ಕತ್ತಲೆಯೊಡನೆ ಲೀನವಾಯಿತು.

## ೨

" ಲಕ್ಷ್ಮಕ್ಕಾ, ಓ ಲಕ್ಷ್ಮಕ್ಕಾ."

ಸಂಜೆಯಾಗಿ ಕತ್ತಲು ಕವಿದ ಆ ಮನೆಯೊಳಗಿನಿಂದ ನರಳುವ ಕ್ಷೀಣ ಸ್ವರ ಮಾತ್ರ ಕೇಳಿಸುತ್ತಿತ್ತು.

ಹಳ್ಳಿಯ ಜೋಯಿಸರ ಮೂರನೆಯ ಹೆಂಡತಿ ಹೊರಗೆ ನಿಂತು ಕರೆಯುತ್ತಿದ್ದರು :

" ಲಕ್ಷ್ಮಕ್ಕಾ—ಓ ಲಕ್ಷ್ಮಕ್ಕಾ..."

ಅಮ್ಮಿ, ಮೂಗು ಬರಿದುಗೊಳಿಸಿ ಕಣ್ಣೊರೆಸಿ ಬಾಗಿಲ ಹಿಂಬದಿಯಿಂದಲೇ ಕೇಳಿದಳು :

" ಯಾರು ? "

" ನಾನು; ಸರಸ್ವತಿ—ಹ್ಯಾಗಿದೆ ನಿಮ್ಮತ್ತೆಗೆ ? "

ಉಸಿರು ಕಟ್ಟಿ ಬಂದು ಉತ್ತರ ಕೊಡಲಾರದೆ ಅಮ್ಮಿ ಒಂದು ಕ್ಷಣ ನಿಂತಳು.

" ಈಗ ಸ್ವಲ್ಪ ವಾಸೀನಾ ? ಔಷಧಿ ಕೊಟ್ಟಿದೀರಾ ? "

" ಕೊಟ್ಟಿದೆ. ಕಾಹಿಲೆ ಹಾಗೇ ಇದೆ ಸರಸ್ವತಮ್ನೋರೆ."

" ಅಳಬೇಡವಮ್ಮ ಎಲ್ಲಾ ಗ್ರಹಚಾರ. ಏನ್ಮಾಡೋಕಾಗುತ್ತೆ ? "

ಸಹಾನುಭೂತಿಯ ಆ ನಿಟ್ಟುಸಿರು ಬೀಸಿ ಅಮ್ಮಿಯ ಅಳಲಿನ ಕೊಡ ಮತ್ತೆ ತುಳುಕಿತು.

"ಹೊತ್ತು ಕಂತಿ ಒಂದು ಘಳಿಗೆ ಮೇಲಾಯ್ತು. ಹೂಂ. ಬರ್ತೀನಮ್ಮ," ಎಂದರು ಸರಸ್ವತಮ್ಮ.

ಸಹಾನುಭೂತಿ ತೋರಿಸಿದ ಅವರು, "ದೈವದ ಆಟ" ಎನ್ನುತ್ತ ಮುಖ ಬಾಡಿಸಿ ಕೊಂಡು, ತಮ್ಮ ಮನೆಯ ಹಾದಿ ಹಿಡಿದರು.

ಹಾಗೆ ಬಂದು, "ಅಯ್ಯೋ ಪಾಪ" ಎಂದು ಮರುಗಿ ಹೋದವರ ಸಂಖ್ಯೆ ಹೇರಳ. ಅಂಗಳದಾಚೆ ನಿಂತು ಕಣ್ಣೀರು ಮಿಡಿದ ಹೊಲೆಯರಿಂದ ಹಿಡಿದು ಮನೆಯೊಳಕ್ಕೆ ಬಂದು ಸಮಾಧಾನದ ಮಾತನ್ನಾಡಿದ ಬ್ರಾಹ್ಮಣರವರೆಗೆ, ಎಷ್ಟೋ ಜನ ಬಂದು ಹೋದರು. ಕತ್ತಲೆಯ ಆ ದೀಪಾವಳಿ ಕಳೆದು ತಿಂಗಳು ಎರಡಾಗಿದ್ದರೂ ಕಣ್ಣೀರಿನ ಅಣೆಕಟ್ಟು ಆ ಮನೆಯಲ್ಲಿನ್ನೂ ಕೋಡಿ ಕಟ್ಟಿ ಹರಿಯುತ್ತಲಿತ್ತು.

ಆ ದಿನ ಅಂಚೆಯವನು ಸಾವಿನ ಸುದ್ದಿ ತಂದಾಗ, ತನ್ನ ಪಾಲಿಗೆ ಅದೆಷ್ಟು ಕ್ರೂರವಾದ ಅಶುಭ ವಾರ್ತೆ ಎಂಬುದರ ಪೂರ್ಣ ಕಲ್ಪನೆ ಅಮ್ಮಿಗೆ ಇರಲಿಲ್ಲ. ತಾನು ಹುಟ್ಟಿದುದಕ್ಕೆ ಒಂದು ತಿಂಗಳ ಹಿಂದೆ ತಂದೆಯ ಸಾವು, ಹುಟ್ಟಿದ ಒಂದು ವಾರದಲ್ಲೆ ತಾಯಿಯ ಸಾವು, ಆ ಬಳಿಕ ಅಜ್ಜಿಯ ಕೈಯಲ್ಲಿ ಪಾಲನೆ ಪೋಷಣೆ—ಅದೀಗ ಅಮ್ಮಿ ಬೆಳೆದು ಬಂದ ರೀತಿ. ಆ ಎರಡು ಸಾವುಗಳೂ ಅವಳ ಪಾಲಿಗೆ ಯಾವುದೋ ಕತೆಯಲ್ಲಿ ನಡೆದ ಘಟನೆಗಳು ಮಾತ್ರ, ಈಗ ಕೈ ಹಿಡಿದ ಪತಿ ದೇವರ ಸಾವು...

ಮರುದಿನ, ದೇಶವೆಲ್ಲಾ ಹಬ್ಬದ ಗದ್ದಲದಲ್ಲಿ ಮುಳುಗಿದ್ದಾಗ, ರಾಯನಹಳ್ಳಿಗೆ ರಾಮಚಂದ್ರನ ಶವವನ್ನು ಹೊತ್ತುತಂದರು. ಮನೆಯಂಗಳದಲ್ಲಿ ಆ ದೇಹಕ್ಕೆ ಸ್ನಾನವಾಯಿತು, ಯಾರೋ ಬಂದು ಅಮ್ಮಿಯ ಕೊರಳ ಕರಿಮಣಿ ಬಿಚ್ಚಿದರು ; ಕತ್ತು ಬರಿದಾಯಿತು. ಹೆರಳು ಬಿಚ್ಚಿದರು ; ಕೂದಲು ಆಧಾರವಿಲ್ಲದೆ ಕೆಳಕ್ಕಿಳಿಯಿತು. ಅಮ್ಮಿಯ ಅತ್ತೆ ರೋದಿಸುತ್ತಿದ್ದರು, ಗಂಟಲು ಬಿರಿಯುವ ಹಾಗೆ. ಅಮ್ಮಿ ಮಾತ್ರ ತುಟಿಪಿಟ್ಕೆನ್ನದೆ ಬೊಂಬೆಯಂತೆ ಕುಳಿತಳು.

ಮಗನನ್ನು ಕಳೆದುಕೊಂಡ ಆ ತಂದೆ...ಉಸಿರಾಡದೆ ಮಲಗಿದ್ದ ಅಣ್ಣನನ್ನು, ಎವೆ ಇಕ್ಕದೆ ನೋಡುತ್ತಿದ್ದ ಆ ತಮ್ಮಂದಿರು...

ಬ್ರಾಹ್ಮಣರು ಶವವನ್ನು ಹೊತ್ತರು. ರಾಮಚಂದ್ರನ ಕೊನೆಯ ಪ್ರಯಾಣ...

ಆಗ ಅಮ್ಮಿ ಕರುಳು ಕಿತ್ತು ಬರುವ ಹಾಗೆ ಕೂಗಾಡಿದಳು. ಎರಡೂ ಕೈಗಳನ್ನು ಮುಂದಕ್ಕೆ ಚಾಚಿ "ಅಯ್ಯಯ್ಯೋ" ಎಂದು ಗೋಳಾಡಿದಳು.

ಹಳ್ಳಿಯ ಹೊರ ಹೊಲಯದಲ್ಲಿ ಚಿತೆಯುರಿಯಿತು. ಸಂಜೆಯಾಯಿತು. ಮಾವ ಸುಡುಗಾಡಿನಿಂದ ಮನೆಗೆ ಮರಳಿದರು.

ದೀಪಾವಳಿಯ ಹಬ್ಬವೇನೋ ಆ ಹಳ್ಳಿಯಲ್ಲಿ ಜರಗಿತು. ಆದರೆ, ಹಿಂದಿನ ದಿನದ ಉತ್ಸಾಹ ಮಾತ್ರ ಯಾರಲ್ಲೂ ಉಳಿದಿರಲಿಲ್ಲ.

ಮಗನ ಮರಣದ ಕೊರಗಿನಲ್ಲಿ ತಾಯಿ ಹಾಸಿಗೆ ಹಿಡಿದುದಾಯಿತು. ಅತ್ತೆ ಕಾಹಿಲೆ ಬಿದ್ದುದರಿಂದ ಅಮ್ಮಿ ಚೇತರಿಸಿಕೊಂಡಳು. ರೋಗಿಯ ಆರೈಕೆಗೆಂದು ಹಗಲಿರುಳೂ ಎಚ್ಚರವಿದ್ದು ಆ ಹುಡುಗಿ ಜೀವ ತೇದಳು.

ಅದಾದ ಮೇಲೆ ಜೀವನಹಳ್ಳಿಯಿಂದ ಅವಳ ಒಡಹುಟ್ಟಿದ ಸೋದರ ರಾಮಕೃಷ್ಣ ಬಂದು ಹೋದ. ತಂಗಿಯ ಮದುವೆಯಾದಾಗ ದೊಡ್ಡದೊಂದು ಹೊರೆ ತನ್ನ ತಲೆಯ ಮೇಲಿಂದ ಇಳಿದ ಹಾಗಾಯಿತೆಂದು ಆತ ಭಾವಿಸಿದ್ದ.

"ಆದರೆ ನಮ್ಕೈಲಿ ಏನಿದೆ ಮಾವ? ಎಲ್ಲಾ ಆ ಪರಮಾತ್ಮನ ಲೀಲೆ."

—ಇದೀಗ ಆ ಯುವಕ ಆಡಿದ ಮಾತು.

ಅಣ್ಣನ ಮಡಿಲಲ್ಲಿ ಮುಖವಿಟ್ಟು ಮನದಣಿಯೆ ಅತ್ತು ಹೃದಯ ಹಗುರಗೊಳಿಸ ಬೇಕೆಂಬ ಬಯಕೆಯಾಯಿತು, ಅಮ್ಮಿಗೆ. ಆದರೆ ಮನೆಗೆಲಸ, ಅತ್ತೆಯ ಆರೈಕೆಗಳ ನಡುವೆ ಅಂತಹ ಮಾತುಕತೆಗೆ ಅವಕಾಶ ದೊರೆಯಲಿಲ್ಲ.

ಅಲ್ಲಿ ಎರಡು ದಿನಗಳಿದ್ದು ಹಳ್ಳಿಗೆ ಹೊರಟು ನಿಂತಾಗ ಆತ ಹೇಳಿದ:

"ಊರಿಗೆ ಹೋದ್ಮೇಲೆ ಕಾಗದ ಬರೀತೀನಿ ಅಮ್ಮಿ..."

"ಇವತ್ತೇ ಹೊರಟುಬಿಡ್ತೀಯಾ ಅಣ್ಣಾ?"

"ಹೂನಮ್ಮಾ..."

"ಅಣ್ಣಾ!"

ಮತ್ತೆ ಅಳು. ಮಾವ ಅಂದರು: "ಅಳಬಾರದಮ್ಮ: ಅತ್ತರೆ ಹೋದದ್ದು ವಾಪಸ್ಸು ಬರುತ್ಯೇ?" ತಡೆಯಲಾಗದ ನೋವಿನಿಂದ ಕುಗ್ಗಿ ಬಾಗಿದ ಜೀವದಿಂದ ಬಲು ಕ್ಷೀಣವಾಗಿ ಆ ಮಾತುಗಳು ಹೊರಟಿದ್ದುವು. ಧುಮುಕುತ್ತ ಬರುತ್ತಿದ್ದ ಕಂಬನಿಯ ಪ್ರವಾಹವನ್ನು ಪ್ರಯಾಸದಿಂದ ತಡೆಗಟ್ಟುತ್ತ ಅಣ್ಣ ಹೊರಟು ಹೋಗಿದ್ದ.

ಅವನ ಕಾಗದ ಬಂದಿರಲಿಲ್ಲ. ಬಂದರೂ ಆತ ಏನು ಬರೆಯಬಹುದು? ದಿನಗಳು ಉರುಳಿದುವು. ಒಂದರಂತೆಯೇ ಇನ್ನೊಂದು.

...ಹಲವು ದಿನಗಳ ಮೇಲೆ ಅತ್ತೆ ಎದ್ದು ಕುಳಿತುಕೊಳ್ಳಲು ಶಕ್ತರಾದರು. ಸೊರಗಿ ಕಡ್ಡಿಯಾಗಿದ್ದ ಆ ಜೀವ ಎಳೆಯ ಮಕ್ಕಳಿಗಾಗಿ ಬದುಕಿತು.

ಆ ಅತ್ತೆ ಮತ್ತು ಮಾವ... "ನನ್ನ ಪ್ರಾರಬ್ಧ ಕರ್ಮ" ಎನ್ನುತ್ತಿದ್ದರು ಅಮ್ಮಿಯ ಅತ್ತೆ. "ಯಾರೇನು ಮಾಡೋಕಾಗುತ್ತೆ? ಅದೆಲ್ಲಾ ನಮ್ಕೈಲಿದ್ಯೇ?" ಎನ್ನುತಿದ್ದರು ಮಾವ. "ನೀನು ಈ ಮನೆಗೆ ಕಾಲಿಟ್ಟು ಹೀಗಾಯಿತು," ಎಂದು ಅವರೆಂದೂ ಅಮ್ಮಿಗೆ ಛೀಮಾರಿ ಹಾಕಲಿಲ್ಲ.

ಆದರೆ ಹೊರಗಿನಿಂದ ಅಲ್ಲೊಂದು ಇಲ್ಲೊಂದು ಸ್ವರ ಕೇಳಿಸಿತು:

"ಹುಟ್ತೋಕ್ಮುಂಚೆ ತಂದೆ; ಹುಟ್ತಾತ್ಲೆ ತಾಯಿ; ಈಗ ಗಂಡ. ಅಬ್ಬ—!"

"ಯಾವ ನಕ್ಷತ್ರವೊ!"

ಅಮ್ಮಿ ರೋಹಿಣಿ ನಕ್ಷತ್ರದಲ್ಲಿ ಹುಟ್ಟಿದ ಹುಡುಗಿ. ಅದು ಮುಪ್ಪಾದ ಹೆಸರಿನ ನಕ್ಷತ್ರ. ಅದರ ತಪ್ಪೇನೂ ಇರಲಿಲ್ಲ.

"ಪಾಪ! ಆ ಮಗೂನ ಯಾತಕ್ಕೆ ಅಂತೀರೆ?"

—ನಿಂದೆಯ ಮಾತುಗಳೆಡೆಯಲ್ಲಿ ಹಾಗೆ ಕನಿಕರದೊಂದು ಸ್ವರವೂ ಕೇಳಿಸುತ್ತಿತ್ತು, ಆಗಾಗ್ಗೆ.

ಮಾವ, ತೋಟ ಹೊಲಗಳ ಕೆಲಸದಲ್ಲಿ ನಿರತರಾಗಿ ನೋವನ್ನು ಮರೆಯಲು ಯತ್ನಿಸಿ

ದರು. ಬಿಡುವಿನ ಅವಧಿಯೆಲ್ಲ ಭಾರತವಾಚನಕ್ಕೆ ಮೀಸಲಾಗುತ್ತಿತ್ತು. ಅಷ್ಟಿದ್ದರೂ ಮಗನ ನೆನಪಾಗಿ ಅಂತರ್ಮುಖಿಯಾದಾಗ ಅವರು ಹೇಳುತ್ತಿದ್ದರು :

"ವಿಷಮ ಜ್ವರ ಯಾವಾಗ್ಲೂ ಅಷ್ಟೇ ಲಕ್ಷ್ಮಿ. ಆರೈಕೆ ಮುಖ್ಯ. ಸ್ವಲ್ಪ ಹೆಚ್ಚು ಕಡಮೆ ಆದರೂ ಪ್ರಾಣಕ್ಕೆ ಸಂಚಕಾರ. ಮೊದಲೇ ಮನೆ ಅಡಿಗೆ ಇಲ್ಲದೆ ನಿತ್ರಾಣನಾಗಿದ್ದ ಹುಡುಗ...ಅಂತೂ ಆಗ್ಹೋಯ್ತಲ್ಲ...ಹೂಂ..."

ಅಂಚೆಯವನು ಈಗಲೂ ವಾರಕ್ಕೆರಡು ಬಾರಿ ಚಿಕ್ಕಮಗಳೂರಿಗೆ ಹೋಗಿ ಬರುತ್ತಿದ್ದ. ಹಿಂದೆಯಾದರೆ ಅಮ್ಮಿಯ ಗಂಡನಿಂದ ಆತ ಕೈಕಾಗದಗಳನ್ನು ತರುತ್ತಿದ್ದ. ಈಗ ಕೈಕಾಗದ ಗಳೂ ಇಲ್ಲ. ಟಪಾಲು ಮುದ್ರೆ ಹೊತ್ತ ಕಾಗದಗಳೂ ಇಲ್ಲ. ಆದರೂ ಆತ ಬರುವ ವೇಳೆಗೆ ಈಗಲೂ ಅಮ್ಮಿಯ ದೃಷ್ಟಿ ಬೆಟ್ಟಗಳ ಇಳಿ ಜಾರಿನತ್ತ, ಕಾಡು ಹಾದಿ ಕಾಲು ಹಾದಿ ಗಳತ್ತ ಹರಿಯುತಿತ್ತು. ಆದರೆ ಇವೀಗ ಅರ್ಥವಿಲ್ಲದ ನೋಟ.

ಒಮ್ಮೊಮ್ಮೆ ಅಮ್ಮಿಗೆ ಭಾಸವಾಗುತ್ತಿತ್ತು : ಈಗ ನಡೆದಿರುವುದೆಲ್ಲ ಕನಸಲ್ಲವೆ ? ಕೆಟ್ಟ ಕನಸಲ್ಲವೆ ?

ಆದರೆ ದಿನಗಳುರುಳಿದಂತೆ, ಕ್ರೂರ ನಿಜಸ್ಥಿತಿ ಅವಳ ಹೃದಯದ ನೋವನ್ನು ಹೆಚ್ಚಿಸು ತಿತ್ತು.

o o o

ಜೀವನಹಳ್ಳಿಯಲ್ಲಿ ಹುಟ್ಟಿ ಬೆಳೆದ ಅಮ್ಮಿಗೆ ಹನ್ನೊಂದನೆಯ ವಯಸ್ಸಿನಲ್ಲಿ ವಿವಾಹ ವಾಯಿತು. ಅಜ್ಜಿ ಸಾಕಿದ ಮಗಳು ಅಮ್ಮಿ, ಒಂದೊಂದು ವರ್ಷ ಒಬ್ಬೊಬ್ಬ ಮಗನ ಬಳಿ ಇರುತ್ತಿದ್ದ ಆ ಮಹಾತಾಯಿ ಆ ವರ್ಷ ಜೀವನಹಳ್ಳಿಯಲ್ಲಿ ಹಿರಿಯ ಮಗನ ಬಳಿ ಇದ್ದಳು. ಅದು, ಅವಳ ಪಾಲಿಗೆ ಅತ್ಯಂತ ಕ್ರೂರವಾಗಿದ್ದ ವರ್ಷ. ತಾನು ಹೊತ್ತು ಹೆತ್ತಿದ್ದ ಮೊದಲ ಗಂಡು ಕಣ್ಣು ಮುಚ್ಚಿದುದನ್ನು ಆ ವೃದ್ಧೆ ಕಂಡಳು. "ಮೊದಲು ನನ್ನನ್ನು ಒಯ್ಯಾಬಾರ್ದಾಗಿತ್ತೇನೋ ನಿರ್ದಯಾ" ಎಂದು ದೇವರನ್ನು ನಿಂದಿಸಿದಳು. ಆಗ ಆ ಅಜ್ಜಿಯ ಸೊಸೆ ಗರ್ಭಿಣಿ. ಅಮ್ಮಿ ಆ ಬಸಿರಲ್ಲಿದ್ದಳು. ಅಜ್ಜಿ ನಾಲ್ಕು ವರ್ಷದ ಮೊಮ್ಮಗ ರಾಮ ಕೃಷ್ಣನನ್ನು ನೋಡಿಕೊಂಡಳು ; ಗರ್ಭಿಣಿ ಸೊಸೆಯ ಆರೈಕೆ ಮಾಡಿದಳು...ಹಾಗೆ ಅಮ್ಮಿಯ ಜನನ, ತಾಯಿಯ ಮರಣ..."ಇದನ್ನೆಲ್ಲಾ ನೋಡ್ತಾ ಬದುಕಿದೀನಲ್ಲ. ನನ್ನ ಕಣ್ಣು ಇಂಗಿ ಹೋಗ್ಬಾರದೇ," ಎಂದು ಆ ಮುದುಕಿ ಗೋಳಾಡಿದ್ದುಂಟು. ಆದರೆ ಕೆಂಪು ಸೀರೆಯ ಸೆರಗಿನಿಂದ ಕಣ್ಣೊರೆಸಿಕೊಂಡು ಆಕೆ ಆ ಹೆಣ್ಣು ಹಸುಗೂಸನ್ನೂ ಎಳೆಯ ಮೊಮ್ಮಗನನ್ನೂ ಸಾಕಿದಳು...ಹಾಗೆ ಆರು ವರ್ಷಗಳ ಪಾಲನೆ ಪೋಷಣೆ.

ಕೊನೆಗೆ, ಇನ್ನೊಬ್ಬ ಮಗನಿಂದ ಕರೆ ಬಂತೆಂದು ಆ ಅಜ್ಜಿ ಹೊರಟು ಹೋದಳು. ಇಬ್ಬರೇ ಆಗಿ ಉಳಿದ ಅಣ್ಣತಂಗಿ ಊರ ಕೆಲವರ ನೆರವಿನಿಂದ ಬಾಳ್ವೆ ನಡಸಿದ ಬಗೆ ಬಲು ವಿಚಿತ್ರವಾದುದು. ಅವರ ಪುಟ್ಟ ಮನೆಯ ಸುತ್ತಲೂ ಅವರದಾದ ಒಂದಿಷ್ಟು ಹೊಲವಿತ್ತು. 'ಸಣ್ಣ ಧನಿ' ರಾಮಕೃಷ್ಣನ ಹೊಲದಲ್ಲಿ ಹೊಲೆಯರು ದುಡಿದು ಭತ್ತದ ಸಸಿಗಳನ್ನು ಬೆಳೆಸಿದರು. ಹಣ್ಣುದುರಿಸಿತು ಮಾವು ; ಹಲಸು ಫಲ ಕೊಟ್ಟಿತು. ಹಾಗೆ ಅಣ್ಣ ತಂಗಿ ಬೆಳೆದು ದೊಡ್ಡವರಾದರು.

ಅಮ್ಮಿ ಹನ್ನೊಂದು ವರ್ಷದವಳಾದಾಗ, ಅವಳ ಜೀವನದ ಒಂದು ಅಧ್ಯಾಯ

ಮುಗಿದು ಇನ್ನೊಂದು ಆರಂಭವಾಯಿತು. ಅದು ಆಕೆಯ ಮದುವೆ. ನಾಲ್ಕತ್ತು ಮೈಲಿಗ ಳಾಚೆಯ ರಾಯನಹಳ್ಳಿಯ ಸದ್ಗೃಹಸ್ಥರೊಬ್ಬರು ಒಮ್ಮೆ ಬಂದು, ಆ ಎಳೆಯರ ವೃತ್ತಾಂತ ವನ್ನು ಪರಿಚಿತರಿಂದ ತಿಳಿದು, ಅಮ್ಮಿಯ ಜಾತಕವನ್ನು ಕೇಳಿ ಒಯ್ದರು.

ಆಮೇಲೊಂದು ದಿನ ಅಣ್ಣ ರಾಮಕೃಷ್ಣ ಹೇಳಿದ:

"ಅಮ್ಮಿ, ಆ ದಿನ ಬಂದಿದ್ದರಲ್ಲಾ, ಅವರು ನಿನ್ನನ್ನ ಸೊಸೆಯಾಗಿ ಕರಕೋತಾರಂತೆ."

ಅವನ ಸ್ವರದಲ್ಲಿ ಸಂತೋಷದ ನಡುಕವಿತ್ತು; ದುಃಖದ ಆವೇಗವಿತ್ತು. ಆದರೆ ಅಮ್ಮಿ ಕಿಡಿಬೆಂಕಿಯಾಗಿ ಅತ್ತು, ರಂಪಮಾಡಿದಳು.

"ಹೋಗಣ್ಣ. ನಾ ಒಲ್ಲೆ.... ಊಂ...."

"ಹುಚ್ಚಿ. ಗಂಡ ಬರ್ತಾನೆ ಅಂದರೆ ಒ-ಲ್ಲೆ- ಅಂತಾಳೆ."

"ಊಂ.... ಹೂಂ...."

ಮದುವೆ—ಅಮ್ಮಿಗೆ ಅದೇನೋ ಹೊಸ ವಿಷಯ. ಆ ವಿಷಯ ಯೋಚಿಸಿದಾಗ ಅವಳಿಗೆ ಒಂದು ರೀತಿಯ ಸಂತೋಷವಾಗುತ್ತಿತ್ತು.

"ಅಂತೂ ನನ್ನನ್ನು ಬಿಟ್ಟು ಗಂಡನ ಮನೆಗೆ ಹೋಗ್ತೀಯಲ್ಲೇ!"

ನಗೆಮಾತೆಂದು ರಾಮಕೃಷ್ಣ ಹೇಳಲು ಹೊರಟಿದ್ದ. ಆದರೆ ಆ ಅಗಲುವಿಕೆಯ ಸಾಧ್ಯತೆ ಅವನ ಕಣ್ಣೆದುರು ನಿಂತಾಗ, ಹೃದಯ ನಡುಗಿತು.

ಅಣ್ಣನನ್ನು ಬಿಟ್ಟು ಹೋಗುವ ಪ್ರಮೇಯ! ಅಮ್ಮಿ ಗೊಳೋ ಎಂದು ಅತ್ತಳು.

ಆದರೆ ರಾಯನಹಳ್ಳಿಯ ಸದ್ಗೃಹಸ್ಥರು ಮತ್ತೊಮ್ಮೆ ಬಂದು ಮೃದುವಾಗಿ ಶಾಂತವಾಗಿ ಮಾತನಾಡಿದಾಗ, ಅಣ್ಣ ರಾಮಕೃಷ್ಣ ಸಂತೋಷದಿಂದ, ಕಂಬನಿ ತುಂಬಿದ ಕಣ್ಣುಗಳಿಂದ, "ಆಗಲಿ ಆಗಲಿ" ಎಂದಾಗ, ಅಮ್ಮಿಯ ಮನಸ್ಸು ಮೆಲ್ಲಮೆಲ್ಲನೆ ಬದಲಾಯಿತು. ಜೀವನ ಹಳ್ಳಿಯ ಶಾನುಭೋಗರು ಆ ಎಳೆಯರ ಪರವಾಗಿ ಹಿರಿತನದ ಜವಾಬ್ದಾರಿ ಹೊತ್ತರು.

ಮಂಗಳವಾದ್ಯ....ಹಳ್ಳಿಯ ಮುತ್ತೈದೆಯರ ಕೈಯಲ್ಲಿ ಅಮ್ಮಿ ಅನುಭವಿಸಿದ ಸುಖಕರ ಸಂಕಟ.... ನೋಡದ ತಂದೆಯ, ನೋಡಿಯೂ ನೆನಪಿಲ್ಲದ ತಾಯಿಯ ಸ್ಮರಣೆ.... ತನ್ನನ್ನು ಆರು ವರ್ಷ ಸಾಕಿದ ಅಜ್ಜಿ ....ಅಣ್ಣ ರಾಮಕೃಷ್ಣ....ಇನ್ನೊಂದು ಕೊಠಡಿಯಲ್ಲಿ ಎಲ್ಲರ ಗಮನದ ಕೇಂದ್ರ ತಾನೆಂಬ ಅಭಿಮಾನದಿಂದ ಕುಳಿತಿದ್ದ ಆ ಹೊಸ ಹುಡುಗ—

ಮದುವಣಿಗನ ದಿಬ್ಬಣ ಬಂದ ದಿನ ಶಾನುಭೋಗರ ಮಡದಿ—ಮಗಳು, ಗವಾಕ್ಷಿಯ ಎಡೆಯಿಂದ, ವರರಾಯನನ್ನು ಅಮ್ಮಿಗೆ ಕದ್ದು ತೋರಿಸಿದ್ದರು. ಗಾಡಿಯ ಪ್ರವಾಸದ ಬಳಲಿ ಕೆಯೂ ಆಗಿರಲಿಲ್ಲವೇನೊ ಅವನಿಗೆ........ಗೋದಿಗೆಂಪಾದ ಮೈಬಣ್ಣ........ತೋರಿಕೆಯ ಗಾಂಭೀರ್ಯ....ಆದರೂ ಕುತೂಹಲದಿಂದ ಅತ್ತಿತ್ತ ಕಳ್ಳ ನೋಟ ಬೀರುತ್ತಿದ್ದ ಕಣ್ಣುಗಳು.... ಈ ಗುಣ ವಿಶೇಷಗಳೊಂದೂ ಅಮ್ಮಿಗೆ ಕಾಣಿಸಿರಲಿಲ್ಲ. ಹಾಗೆ ಬಣ್ಣಿಸಿ ಹೇಳಿದವರು ಶಾನುಭೋಗರ ಮನೆಯವರು. ಅಮ್ಮಿಯ ಕಣ್ಣಿಗೆ ಕಂಡುದು, ಅಣ್ಣನಿಗಿಂತ ಸ್ವಲ್ಪ ಹೆಚ್ಚು ಮೈತುಂಬಿಕೊಂಡು ಸುಂದರನಾಗಿ ತೋರಿದ ಹುಡುಗ; ಆಕೆಯ ಕಿವಿಗೆ ಬಿದ್ದುದು, "ಮನ್ಮಥ ಕಣೇ, ಮನ್ಮಥ!" ಎಂಬ ಪಿಸುಮಾತು.

ಮದುವೆ ಮುಗಿದು ಮನ್ಮಥನೊಡನೆ ರತಿ ಹೊರಟು ನಿಂತಳು.

"ಅಮ್ಮಾ, ನನ್ನನ್ನ ಮರೀಬೇಡ, ಅಮ್ಮಾ-ಅಮ್ಮಾ-"

ಅದು ಅವಳಣ್ಣ. ಬೀಳ್ಕೊಡುವ ಆ ಹೊತ್ತಿನಲ್ಲಿ ಬೇರೆ ಮಾತುಗಳೇ ಇರಲಿಲ್ಲವೇನೊ ಅವನಲ್ಲಿ!

ಪುರೋಹಿತರ ಮಂತ್ರಪಠನ ....ಅಕ್ಕಿಕಾಳು....ಹಾಡು.... ಸಿಹಿಯೂಟ. ಅಮ್ಮಿಯ ಪಾಲಿನ ಆ ದೊಡ್ಡ ಹಬ್ಬವೆಲ್ಲ ಮುಗಿದಿತ್ತು. ಇನ್ನು ವಾಸ್ತವತೆ. ಹೊರಡುವ ಹೊತ್ತು. ಬೇರು ಕಿತ್ತ ಹೂ ಬಳ್ಳಿಯಂತೆ ಅಮ್ಮಿ ನಿಶ್ಶಕ್ತಳಾದಳು, ಗೋಳಾಡಿದಳು.

ಆದರೆ ಮಾವನ ಮಾತು ಮೈದಡವಿತು.

"ಅಳಬಾರದು ಮಗೂ...ನೀನು ನಿನ್ನ ಮನೆಗೇ ಹೋಗ್ತಿರೋದು... ಅಳಬಾರದು."

ಬೆನ್ನ ಮೇಲೆ ಕೈಯಾಡಿಸಿ ಅತ್ತೆ ಹೇಳಿದರು:

"ನಮ್ಮನೇಲಿ ಹೆಣ್ಣುಮಕ್ಕಳಿಲ್ಲ ಚಿನ್ನಾ. ನೀನೇ ನನ್ನ ಮಗಳು."

ಗಾಡಿಯ ಮುಂಭಾಗದಿಂದ ಪತಿರಾಯ ತನ್ನ ಕೈಹಿಡಿದವಳನ್ನು ಪ್ರೀತಿಯ ದೃಷ್ಟಿಯಿಂದ ನೋಡುತ್ತಿದ್ದ. ಅವನ ಎಳೆಯ ತಮ್ಮಂದಿರು ತಾಯಿಗಂಟಿಕೊಂಡು ಮೌನವಾಗಿ ನಿಂತಿದ್ದರು—ಪಿಳಿ ಪಿಳಿ ಕಣ್ಣು ಬಿಡುತ್ತ. ಇನ್ನೊಂದು ಗಾಡಿಯಲ್ಲಿ, ಕೊನೆಯಿಲ್ಲದ ಮಾತುಕತೆಯಲ್ಲಿ ನಿರತರಾಗಿದ್ದ ಇನ್ನಿತರರಿದ್ದರು—ಗಂಡಿನ ಕಡೆಯ ಹಲವರು.

ಅಂತೂ ಗಾಡಿಗಳು ಹೊರಟುವು. ಪರದಾರಿ ದೂರ ರಾಮಕೃಷ್ಣ ತಂಗಿಯ ಗಾಡಿಯನ್ನು ಹಿಂಬಾಲಿಸಿ ಬಂದ. ಆಮೇಲೆ ಬೆಟ್ಟದ ಕಣಿವೆಯಲ್ಲಿ ಗಾಡಿಗಳು ಇಳಿಯತೊಡಗಿದಾಗ ಆತ ತಡೆದು ನಿಂತ. ಕಣ್ಣುಗಳು ತೇವವಾಗಿದ್ದರೂ ಪ್ರಯತ್ನಪೂರ್ವಕವಾದ ಮುಗುಳು ನಗು ಆ ತುಟಿಗಳ ಮೇಲೆ ಮೂಡಿ ಬಂತು.

ರಾಯನಹಳ್ಳಿಗೆ, ಮಾವನ ಮನೆಗೆ, ಬನಶಂಕರಿಯಾಗಿ ಅಮ್ಮಿ ಬಂದಳು–ಬನಶಂಕರಮ್ಮ. ಆಕೆಗೆ ಬಲು ಸುಲಭವಾಗಿ ಆ ಮನೆ ಒಗ್ಗಿತು. ಮಹಾ ತುಂಟರಾದ ಮೈದುನಂದಿರು ಮಿತಭಾಷಿಯೂ ಮೃದುಭಾಷಿಯೂ ಆದ ಮಾವ, ಅಮ್ಮಿ ಅನುಭವಿಸದೇ ಇದ್ದ ಮಾತೃಪ್ರೇಮವನ್ನು ಒದಗಿಸಿಕೊಟ್ಟ ಅತ್ತೆ, ಎಂದಾದರೊಮ್ಮೆ ಯಾರೂ ನೋಡದೇ ಇದ್ದಾಗ ಕಣ್ಣೆತ್ತಿ ಮುಗುಳುನಗುತ್ತಿದ್ದ ಕೈಹಿಡಿದ ಗಂಡ...ಆ ಬಾಳುವೆ ಅಮ್ಮಿಗೆ ಆಹ್ಲಾದಕರವಾಗಿತ್ತು.

ವಾಡಿಕೆಯಂತೆ ಗಂಡನ ಮನೆಯಲ್ಲಿ ಹೊಸ ಹೆಸರು ಬಂತು ಅವಳಿಗೆ. ಆದರೆ, ವಾಡಿಕೆಗೆ ವಿರುದ್ಧವಾಗಿ, ಅತ್ತೆಯ ಮನೆಯಲ್ಲಿ ವಾತ್ಸಲ್ಯದ ಹೊನಲಿನಲ್ಲೇ ಮಿಂದ ಅಮ್ಮಿ ಬನಶಂಕರಿಯಾಗಿ ಮಾರ್ಪಡಲಿಲ್ಲ; ಅಮ್ಮಿಯಾಗಿಯೇ ಉಳಿದಳು.

ಅಮ್ಮಿಯ ಮಾವ ತಮ್ಮ ಸಾತ್ವಿಕ ಗುಣಗಳಿಗಾಗಿ ಹಳ್ಳಿಯ ಹತ್ತುಸಮಸ್ತರ ಆದರ ಗೌರವಗಳಿಗೆ ಪಾತ್ರರಾಗಿದ್ದರು. ಋತುಮತಿಯಾಗದ ಸೊಸೆಯನ್ನು ಮನೆಗೆ ತಂದುದಕ್ಕಾಗಿ ಯಾರೋ ಒಬ್ಬಿಬ್ಬರು ಏನೋ ಅಂದುಕೊಳ್ಳಲು ಬಯಸಿದರೂ ಊರು ಕಿವಿಗೊಡಲಿಲ್ಲ. ಅಮ್ಮಿ ಅನಾಥೆಯಾಗಿದ್ದ ಕಾರಣವೊಂದು, ಆ ಮನೆಯಲ್ಲಿ ಅವರೆಗೂ ಹೆಣ್ಣು ಹುಟ್ಟದೇ ಇದ್ದ ಇನ್ನೊಂದು ಕಾರಣ, ಎರಡೂ ಸೇರಿ ಸಂಪ್ರದಾಯದ ರೀತಿನೀತಿಗಳಲ್ಲಿ ಸಣ್ಣ ಪುಟ್ಟ ಬದಲಾವಣೆ ಮಾಡಿದುವು. ಅಮ್ಮಿ ಮೈದುನಂದಿರೊಡನೆ ನಗೆಯಾಡುತ್ತಿದ್ದಳು. ಆದರೆ ಗಂಡನೊಡನೆ ಅಂತಹ ಸಲಿಗೆಯ ವರ್ತನೆ ಸಾಧ್ಯವಿರಲಿಲ್ಲ. ಆ ಪರಿಸ್ಥಿತಿಗೆ, ಅತ್ತೆ ಮಾವಂದಿರು ಆಕ್ಷೇಪಿಸಬಹುದೆಂಬ ಅಂಜಿಕೆಗಿಂತಲೂ ಸ್ವಭಾವತಃ ಬೆಳೆದು ಬಂದ ಸಂಕೋಚ ಕಾರಣವಾಗಿತ್ತು.

ಆಚಾರವಂತರಾಗಿದ್ದರೂ ಆ ಮಾವನಲ್ಲಿ ಎಳೆಯ ಜೀವಗಳನ್ನು ತಿಳಿದುಕೊಳ್ಳುವ ಸಾಮರ್ಥ್ಯವಿತ್ತು. ಅಮ್ಮಿ ಬೇಗನೆ ಮೈ ನೆರೆಯಬೇಕು, ಊರೆಲ್ಲ ಡಂಗುರ ಸಾರಿಸಿ, ಶೋಭನ ಪ್ರಸ್ತವಾಗಿ ಮಗನೊಡನೆ ಆಕೆ ಮಲಗಬೇಕು ಎಂಬ ಹಂಬಲವೇನೋ ಅತ್ತೆಗೆ ಇತ್ತು. ಅದಕ್ಕೆ ಪ್ರೇರಣೆ-ಮೊಮ್ಮಗನನ್ನು ಎತ್ತಿ ಆಡಿಸಬೇಕೆಂಬ ಆಸೆ. ಆದರೆ ಆವರ ಜೀವನದಲ್ಲೇ ಏನಾಗಿತ್ತು ? ರಾಮಚಂದ್ರ ಹುಟ್ಟುವುದಕ್ಕೆ ಮುಂಚೆ ನಾಲ್ಕು ಸಾರೆ ಆಕೆ ಗರ್ಭ ಕಳೆದುಕೊಂಡಿದ್ದಳು—ನಾಲ್ಕು ಸಾರೆ. ತನಗೆ ಮಕ್ಕಳಾಗಲಾರವೆಂದು ಆಕೆಯೊಮ್ಮೆ ನಿರಾಸೆಗೊಂಡುದೂ ಇತ್ತು. ಆದರೆ ಹಾಗಾಗಲಿಲ್ಲ, ಮುದ್ದು ಮುಖದೊಡನೆ ಮೂಡಿಬಂದು ರಾಮಚಂದ್ರ ಮನೆ ಬೆಳಗಿದ. ಆ ಬಳಿಕ, ಏಳೆಂಟು ವರ್ಷಗಳ ಅಂತರದ ಮೇಲೆ, ಮತ್ತೆರಡು ಮಕ್ಕಳಾದುವು-ಗಂಡುಮಕ್ಕಳು...

ಈಗ ವಂಶದ ಕುಡಿ ಮುಂದುವರಿಯಬೇಕು... ರಾಮಚಂದ್ರ ದೊಡ್ಡವನಾಗುತ್ತಾನೆ : ಗಣ್ಯವ್ಯಕ್ತಿಯಾಗಿ ಮನೆತನದ ಕೀರ್ತಿ ಹೆಚ್ಚಿಸುತ್ತಾನೆ ; ಸುಶೀಲೆಯಾದ ಸುಂದರಿಯಾದ ಹೆಂಡತಿಯ ಜತೆಯಲ್ಲಿ ಗೌರವದ ಬಾಳ್ವೆ ನಡಸುತ್ತಾನೆ...ಇದೀಗ ಆ ದಂಪತಿ ಕಟ್ಟಿದ ಕನಸಿನ ಮನೆ. ಅಮ್ಮಿಯ ಸದ್ಗುಣಗಳಿಗಂತೂ ಅವರು ಮಾರುಹೋಗಿದ್ದರು. ತಿಳಿಯದೆ ಅಮ್ಮಿ ಏನು ತಪ್ಪು ಮಾಡಿದ್ದರೂ ಅವರು ಕ್ಷಮಿಸುತ್ತಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ. ಆದರೆ ಅಮ್ಮಿ ತಪ್ಪನ್ನೇ ಮಾಡುತ್ತಿರಲಿಲ್ಲ.

ಹೊಂಬಿಸಿಲಿನ ತಂಗಾಳಿಯ ದೀರ್ಘವಾದೊಂದು ಹಗಲಿನ ಹಾಗೆ ಆ ಎರಡು ವರ್ಷ ಕಳೆದುಹೋಗಿದ್ದುವು. ಅದಾದ ಬಳಿಕ ಸೂರ್ಯ ಮುಳುಗಿ ಕತ್ತಲೆಯ ಅಧ್ಯಾಯಕ್ಕೆ ಆಸುವು ಮಾಡಿಕೊಟ್ಟಿದ್ದ...

—"ಕತ್ತಲಾಯಿತಿನ್ನು. ದೀಪ ಹಚ್ಚ ಬಾರದೆ ಮಗೂ ?" ಎಂದು ಮಾವನ ಸ್ವರ ಕೇಳಿಸಿತು. ಹೊಲಗಳ ಮೇಲಿನಿಂದ ಬೀಸುತ್ತಿದ್ದ ಚಳಿಗಾಳಿಯ ಫಲವಾಗಿಯೋ ಏನೋ ಆ ಸ್ವರದಲ್ಲಿ ನಡುಕದ ಛಾಯೆ ಇತ್ತು. ನೆನಪುಗಳ ಬಲೆಯಲ್ಲಿ ಸಿಲುಕಿದ್ದ ಅಮ್ಮಿ ಎದ್ದು ನಿಂತಳು. ನೀಲಾಂಜನಕ್ಕೆ ಎಣ್ಣೆ ಸುರುವಿ ಕಡ್ಡಿ ಕೊರೆದಳು. ಕಂದೀಲನ್ನು ತಂದು ಬಟ್ಟೆಯ ಚಿಂದಿಯಿಂದ ಹೊಗೆಯೊರೆಸಿದಳು......

ಮದುವೆಯಾದ ಹಲವು ತಿಂಗಳ ಮೇಲಿನ ಆ ಒಂದು ಸಂಜೆ. ಅಮ್ಮಿಯೊಬ್ಬಳನ್ನೇ ಮನೆಯಲ್ಲಿ ಬಿಟ್ಟು ಎಲ್ಲರೂ ಜೋಯಿಸರ ಮನೆಗೆ ಹೋಗಿದ್ದರು. ಹೊತ್ತು ಕಂತಿತು. ಹೋದವರ ಸುಳಿವಿರಲಿಲ್ಲ. ಆ ಹೊತ್ತಿನಲ್ಲಿ ತನ್ನ ಗಂಡನೊಬ್ಬನೇ ಬಂದರೆ—ಎಂಬ ಭಯ ಅಮ್ಮಿಯನ್ನು ಕಾಡಿತು. ಆ ನಿರೀಕ್ಷೆಯಿಂದ ಕ್ಷಣ ಕಾಲ ಅವಳು ಕಂಪಿಸಿದಳು. ಆದರೆ ಆ ಕಂಪನದಿಂದ ಅವಳಿಗೆ ಹಿತವೆನಿಸಿತು. ಭಯ ತೊಲಗಿ, ಪತಿಯ ಆಗಮನದ ಮಧುರ ಕಲ್ಪನೆ ಅವಳನ್ನು ಸೆರೆ ಹಿಡಿಯಿತು. ಜತೆಯಲ್ಲೆ "ಇಲ್ಲ—ಬರಲಾರರು," ಎಂಬ ನಿರಾಸೆ ತಲೆಯೆತ್ತಿತ್ತು...ಆಳಬೇಕೆಂದು ತೋರಿತು ಅವಳಿಗೆ.

ಆಗ ಆಕೆ ಮೆಲ್ಲನೆದ್ದು ನೀಲಾಂಜನ ಉರಿಸಿದಳು. ಕಂದೀಲನ್ನು ಮೊಗಸಾಲೆಗೆ ತಂದು ಕೆಳಕ್ಕಿರಿಸಿ, ಗಾಜಿನ ಹೊಗೆಯೊರೆಸುತ್ತ ಕುಳಿತಳು.

ಹಾಗೆ ಕುಳಿತಾಗ ಆ ಸಪ್ಪಳ ಕೇಳಿಸಿತು. ಬಲು ಹಗುರವಾದ ಮೆಲುನಡಿಗೆ. ಅದು ಆಕೆಯ ಗಂಡನದೇ...ಅಮ್ಮಿಯ ಎದೆಬಡಿತ ವೇಗವಾಯಿತು. ಭೀತಿ ಸಂತೋಷಗಳಿಂದ ಆಕೆ

ದಿಜ್ಞೂಢಳಾದಳು. ಯಾರು ಬಂದರೆಂದು ತಲೆಯೆತ್ತಿ ನೋಡುವ ಧೈರ್ಯ ಅವಳಿಗಿರ ಲಿಲ್ಲ. ನಡಿಗೆಯ ಸದ್ದು ಒಮ್ಮೆಲೆ ನಿಂತಿತು. ಅಮ್ಮಿ ಅಧೀರಳಾದಳು. ತಲೆಯೆತ್ತಿ ನೋಡ ಬೇಕು ನಿಜ. ಆದರೆ ಬಂದ ವ್ಯಕ್ತಿ ಗಂಡನಲ್ಲದೆ ಹೋದರೆ? ಅಂತಹ ನಿರಾಶೆಯನ್ನ ಸಹಿ ಸಲು ಅವಳು ಸಿದ್ಧಳಿರಲಿಲ್ಲ...ನಿಮಿಷಗಳು ಯುಗಗಳಾದ ಸನ್ನಿವೇಶ.

"ಬನೂ—"

ಆ! ಎಷ್ಟೊಂದು ದೀರ್ಘ ಕಾಲ ಅಂಥ ಪ್ರೀತಿಯ ಧ್ವನಿಗಾಗಿ ಅವಳು ಕಾದಿದ್ದಳು!

"ಬನೂ—"

ತನ್ನನ್ನೇ ಅಲ್ಲವೆ ಅವರು ಕರೆಯುತ್ತಿರುವುದು? ಸ್ವರ ಕುಗ್ಗಿದೆಯಲ್ಲ?

ಅಮ್ಮಿಯ ಮೈ ಬೆವತಿತು. ಹಣೆಯ ತುಂಬ ಬೆವರಿನ ಆಣಿ ಮುತ್ತುಗಳು.

ರಾಮಚಂದ್ರನನ್ನು ನೋಡಲೆಂದು ಬಾಲೆ ಮುಖವೆತ್ತಿದಳು. ಕೈ ನಡುಗಿತು. ಗಾಜು ನೆಲಕ್ಕೆ ಬಿದ್ದು ಹತ್ತು ಹೋಳಾಯಿತು.

"ಅಯ್ಯೋ!"

"ಹಾ! ಏನಾಯ್ತೋ?"

ಆತ ಬಾಗಿ ಅವಳ ಕೈ ಹಿಡಿದುಕೊಂಡ. ಕ್ಷಣ ಕಾಲ ಬವಳಿ ಬಂದಂತಾಯಿತು ಅಮ್ಮಿಗೆ.

ರಾಮಚಂದ್ರ ಸಮಾಧಾನದ ಮಾತನ್ನಾಡಿದ:

"ಹೋಗಲಿ ಬಿಡು. ಅವರೆಲ್ಲಾ ಬರೋದರೊಳಗೆ ಗಾಜಿನ ಚೂರು ಎತ್ತಿ ಬಿಡೋಣ."

ಆತ ಒಂದು ಹಣತೆ ಹಚ್ಚಿ ತಂದು, ಚೂರುಗಳನ್ನು ಆರಿಸಿದ. ಸೆರಗಿನಿಂದ ಮುಖ ಮುಚ್ಚಿಕೊಂಡು ಅಮ್ಮಿ ಅತ್ತಳು.

ಗಾಜಿನ ಚೂರುಗಳನ್ನು ಎಸೆದು ಬಂದ ರಾಮಚಂದ್ರ ಹೇಳಿದ:

"ಇಷ್ಟಕ್ಕೆಲ್ಲಾ ಅಳ್ತಾರೇನೇ? ಅಳಬಾರ್ದು..."

ಆ ಕ್ಷಣದಲ್ಲೆ ಹೃದಯ ಹಗುರವಾಯಿತು ಅಮ್ಮಿಗೆ. ಆಕೆ ಎದ್ದು ನಿಂತಳು. ಅವ ರಿಬ್ಬರೂ, ಪರಸ್ಪರ ಅಪೇಕ್ಷೆಗೆ ಅನುಸಾರವಾಗಿ ವರ್ತಿಸಿದವರಂತೆ, ಜಗಲಿಯತ್ತ ಸಾಗಿ, ಕತ್ತಲಲ್ಲಿ ಹೋಗಳನ್ನು ದಿಟ್ಟಿಸುತ್ತ ನಿಂತರು.

"ಹೆದರಿಕೆಯಾಯ್ತೆ ಬನೂ?"

ಹಾಗೆ ಕೇಳಿದವನು ರಾಮಚಂದ್ರ. ನಾಚಿಕೊಳ್ಳುತ್ತ ಅಮ್ಮಿ ಉತ್ತರವಿತ್ತಳು:

"ಹೂಂ."

"ನಿಜವಾಗ್ಲೂ?"

ಹಿ-ಹ್ಹಿ — ಎಂದು ನಕ್ಕಳು.

"ನಾನು ಬರಬಹುದೂಂತ ಕಾದಿದ್ದೆ ಅಲ್ಲವಾ?"

ಅಂತಹ ಮಾತು ಕೇಳಿ ಹೃದಯಕ್ಕೆ ಸಂತೋಷವಾದರೂ, ಅಳಬೇಕೆಂದು ತೋರಿತು ಅಮ್ಮಿಗೆ. ನಿಂತಲ್ಲಿಂದ ದೂರ ಸರಿಯಲೆಂದು ಆಕೆ ಮುಖ ತಿರುವಿದಳು.

ಆಗ ರಾಮಚಂದ್ರ ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡ. ಮಾಡಬಾರ ದ್ದೇನನ್ನೋ ಮಾಡುವವರಂತೆ ಆ ಗಂಡ ಹೆಂಡತಿ ಒಬ್ಬರಿಗೊಬ್ಬರು ಸಮೀಪವಾಗಿ ನಿಂತರು. ಇಬ್ಬರ ಉಸಿರಾಟವೂ ತೀವ್ರವಾಗಿತ್ತು.

ರಾಮಚಂದ್ರನೇ ಸಂತೋಷದ ಭರದಲ್ಲಿ ನಡುಗುತ್ತಿದ್ದ ಧ್ವನಿಯಿಂದ ಹೇಳಿದ :

" ನಾವಿಬ್ಬರೇ ಮಾತಾಡ್ಬೇಕೊಂತ ಆಸೆಯಾಗ್ತಾ ಇರುತ್ತೆ, ಅಲ್ಲವಾ ? "

ತಲೆಯ ಚಲನೆಯಿಂದಷ್ಟೆ ಅಮ್ಮಿ ಹೌದೆಂದಳು.

" ಮಾತಾಡು ! "

" ಊಂ...... "

" ಸಾಕು ವಯ್ಯಾರ ! "

ಅಮ್ಮಿಯ ಮೋಹಕ ನಗೆ.

ರಾಮಚಂದ್ರನ ಎಡಗೈ ಅಮ್ಮಿಯ ನಡುವನ್ನು ಬಳಸಿತು, ಬಲಗೈ ಆಕೆಯ ಮುಂಗುರುಳನ್ನು ನೇವರಿಸಿತು. ಅವನ ತುಟಿಗಳು ಆಕೆಯ ತುಟಿಗಳನ್ನು ಹುಡುಕಿದುವು. ಆ ಶೋಧ ಮುಗಿದಾಗ—

ಹೊಲದ ಅಂಚನ್ನು ಹಾದು ಎತ್ತರದ ಅಂಗಳಕ್ಕೆ ಏರಿ ಬರುತ್ತಿದ್ದ ಸದ್ದು. ಜತೆಯಲ್ಲೆ ಕೇಳಿಬರುತ್ತಿದ್ದ ಮಾತು : " ದೀಪನಾದರೂ ಹಚ್ಚಿದಾಳೋ ಇಲ್ಲವೋ... "

ಅಮ್ಮಿ ಗಾಬರಿಗೊಂಡು ದೇವರ ಮನೆಗೆ ಓಡಿದಳು. ರಾಮಚಂದ್ರ, ಸಿಕ್ಕಿಬಿದ್ದ ಕಳ್ಳನಂತಿದ್ದರೂ ಸುಧಾರಿಸಿಕೊಂಡ.

ಅಮ್ಮಿಯ ಮಾವನ ಸ್ವರ ಕೇಳಿಸಿತು.

" ಆಗಲೇ ಬಂದೆಯೇನೋ ರಾಮು ? "

" ಇಲ್ಲಪ್ಪಯ್ಯ, ಈಗ ತಾನೇ ಬಂದೆ. "

ಅಮ್ಮಿಯ ಅತ್ತೆ ಸ್ವರವೆತ್ತಿದರು :

" ಪಾಪ ಇಷ್ಟರ ತನಕ ಅಮ್ಮಿ ಒಬ್ಬಳೇ ಇದ್ದಳಲ್ಲಾ ? "

ಯಾರಿಗೂ ತಿಳಿಯದ ಹಾಗೆ ತಾನು ಪಡೆದಿದ್ದ ಗಂಡನ ಸ್ಪರ್ಶ ಸುಖದಿಂದ ಪುಳಕಗೊಂಡಿದ್ದ ಅಮ್ಮಿ ಅತ್ತೆಯ ಮಾತು ಕೇಳುತ್ತಾ ಮನಸ್ಸಿನೊಳಗೆ ಮುಗುಳುನಕ್ಕಳು.

ಆ ಅನುಭವವೊ ? ಅದೇ ಮೊದಲಿನದು—ಅದೇ ಕೊನೆಯದು. ಗಂಡನಿಗೆ ಚಿಕ್ಕಮಗಳೂರಿನ ವ್ಯಾಪಾರಸ್ಥರೊಬ್ಬರಲ್ಲಿ ಲೆಕ್ಕ ಬರೆಯುವ ಕೆಲಸ ದೊರೆಯಿತು. ಬೆಳೆಯುದ ಹುಡುಗಿ ಅಮ್ಮಿಗೆ ರಾಮಚಂದ್ರನನ್ನು ಬಿಟ್ಟಿರುವುದು ಅಭ್ಯಾಸವಾಯಿತು.

...ಹಾಗೆ ಕಳೆದು ಹೋದ ದಿನಗಳು. ಆ ಬಳಿಕ ಮಾಂಗಲ್ಯ ಹರಣ.

...ಈಗ ಉಳಿದುದು ನೆನಪಿನ ಬುತ್ತಿಯೊಂದೇ—ಕತ್ತಲಾದ ಮೇಲೊಮ್ಮೆ ಒಂದು ಕ್ಷಣಕಾಲ ಮಾತ್ರ ಕೈಹಿಡಿದು ಗಂಡನ ಮುಖಕ್ಕೆ ಮುಖವಿಟ್ಟ ನೆನಪಿನ ಬುತ್ತಿ ಅದೊಂದೇ...

O C O

" ಪಲ್ಯ ಗಿಲ್ಯ ಏನಾದರೂ ಮಾಡ್ತೀರೇನಮ್ಮ ? "

ಮಾವನ ಮಾತು. ಅದೇ ಶಾಂತ ಸ್ವರ -ಹಿಂದಿನದೇ. ಆದರೆ ಅದರಲ್ಲೀಗ ನಡುಕವಿದೆ -ನೋವಿನ ನಡುಕ.

ಅಮ್ಮಿ ಅಡುಗೆಮನೆಯ ಕಡೆ ನಡೆದಳು.

ಸಾಮಾನ್ಯವಾಗಿ ಎಳೆಯ ವಧುವಿಗೆ ಇರದ ಅಧಿಕಾರ ಅವಳಿಗಿತ್ತು. ಹಬ್ಬದ ದಿನ ಗಂಡನಿಗೆ ನೀರೆರೆಯುವ ಹಕ್ಕು-ಉಣಬಡಿಸುವ ಹಕ್ಕು. ಆದರೆ ಕಳೆದ ದೀಪಾವಳಿಯ ರಾತ್ರಿ

ಮಾತ್ರ ಅಮ್ಮಿಯ ಚಂದ್ರನಿಗೆ ಗ್ರಹಣ ಹಿಡಿಯಿತು.

ಈಗಲಾದರೊ, ಸದಾಕಾಲವೂ ನೆಲೆ ನಿಂತಿರುವ ಕತ್ತಲೆ.

ಇತರರ ಸೇವೆಯೇ ಜೀವನದ ತಿರುಮಂತ್ರ ಅಮ್ಮಿಗೆ. ಆಕೆಯೊಂದು ಉಸಿರಾಡುವ ಯಂತ್ರ. ತನಗರಿಯದಂತೆಯೇ ದುಡಿಯುವ ಚೈತನ್ಯವಿತ್ತು ಅವಳಲ್ಲಿ.

...ಆ ಪಲ್ಯ, ಸಾರು, ಅನ್ನ.

—"ಕೈಕಾಲು ತೊಳ್ಕೋತೀರಾ ಮಾವ ?"

—"ನಾಣಿ, ರಂಗಾ, ಊಟಕ್ಕೆ ಎದ್ದೇಳಿ."

—"ಅತ್ತೆ, ಒಂದು ತುತ್ತು ಬಿಸಿ ಬಿಸಿ ಸಾರನ್ನ..."

ಆತ ಮಾತ್ರ ಇನ್ನಿಲ್ಲ. ಎಲ್ಲರ ಊಟವಾದ ಮೇಲೆ ಈಗ ಉಣ್ಣುವವಳು ಆಕೆಯೊಬ್ಬಳೇ. ಅದೂ ಎಂತಹ ಊಟ! ರುಚಿಯಲ್ಲಿನ ತರತಮವನ್ನು ಅಮ್ಮಿ ಮರೆತು ಬಹಳ ದಿನಗಳಾಗಿದ್ದುವು...

ಅದು ಮಾನವಯೋಗ್ಯ ಬದುಕು ಹೌದೋ ಅಲ್ಲವೋ ಅಮ್ಮಿಗೆ ತಿಳಿಯದು—ಆ ಮುಗ್ಧೆಗೆ ಅದು ತಿಳಿಯದು.

೩

ಗಂಡ ಸತ್ತ ಆರು ತಿಂಗಳಲ್ಲೆ ಅಮ್ಮಿ ಮೈನೆರೆದಳು. ತನಗಿಂತಲೂ ಬಲಶಾಲಿಯಾದುದು ಯಾವುದೋ ತನ್ನನ್ನು ಅವಮಾನಿಸಿದಂತಾಯಿತು ಅಮ್ಮಿಗೆ. ಅವಳ ಎಳೆಯ ಹೃದಯ ಘಾಸಿಗೊಂಡಿತು.

ಆರು ತಿಂಗಳಿಗೆ ಹಿಂದೆ ಆಕೆ ಋತುಮತಿಯಾಗಿದ್ದರೆ ಆ ಮನೆಯಲ್ಲಿ ಎಂತಹ ಸಂಭ್ರಮವಿರುತ್ತಿತ್ತು! ಆದರೆ ಈಗ? ಬಾಡಿದ ಮುಖಗಳು ಮತ್ತಷ್ಟು ಕಪ್ಪಿಟ್ಟುವು.

ಅಮ್ಮಿಯ ಕೈ ಹಿಡಿದವನು ಬದುಕಿ ಉಳಿದಿದ್ದರೆ!

ಹಾಗೆ ಯೋಚಿಸುವುದರಲ್ಲಿ ಅರ್ಥವಿರಲಿಲ್ಲ; ಆದರೆ ಆ ಅತ್ತೆ ಮಾವ ಅರ್ಥವಿಲ್ಲದ ಆ ಕೆಲಸವನ್ನೇ ಮಾಡಿದರು.

ಅಮ್ಮಿ ಮೆಲ್ಲಮೆಲ್ಲನೆ ತಿಳಿದುಕೊಂಡಳು: ತನ್ನ ಬಾಳು ಹೋಳಾಯಿತು ಹಾಗಾದರೆ; ತನ್ನ ನಾಳು ಹಾಳಾಯಿತು.

ದುಃಖಿನಿಯಾದ ಅತ್ತೆಯನ್ನು ಬೇಡ ಬೇಡವೆಂದರೂ ಬಾಲ್ಯದ ನೆನಪು ಕಾಡುತ್ತಿತ್ತು. ಆಕೆ ತಾಯ್ಮನೆಯಲ್ಲಿ ಮೈನೆರೆದಾಗಿನ ಸಮಾರಂಭ. ಆ ಬಳಿಕ ಕೈ ಹಿಡಿದವರ ಆಗಮನ, ಶೋಭನ ಪ್ರಸ್ತ...ಮೊದಲ ರಾತ್ರಿ....ಆಗಿನ ನೂರು ಬಯಕೆಗಳು....ಹತ್ತು ದೇವರಿಗೆ ಹೊತ್ತ ಹಣ್ಣು ಕಾಯಿ ಹರಕೆ....ರಾಮಚಂದ್ರನನ್ನು ಹೊತ್ತು ಹೆತ್ತುದು.

ಆ ರಾಮಚಂದ್ರ ಈಗ ಇಲ್ಲ. ಅಮ್ಮಿ ಸೌಭಾಗ್ಯವತಿಯಲ್ಲ. ಚಿರಸುಮಂಗಲೆಯಾಗೆಂಬ ಆಶೀರ್ವಾದವಿಲ್ಲ. ಮನೆ ತುಂಬ ಮಕ್ಕಳಾಗಲೆಂಬ ಹಾರೈಕೆ ಇಲ್ಲ.

...ದಿನ ಕಳೆಯಿತು. ಬಲು ದೀರ್ಘವಾಗಿ ಕಂಡ ದಿನಗಳು.

ಬಳೆಗಳಿಲ್ಲದ ಕೈ, ಹಾರವಿಲ್ಲದ ಕೊರಳು, ತಿಲಕವಿಲ್ಲದ ಹಣೆ...ಅಮ್ಮಿ ಸೊಗಸಾಗಿ ಹೆರಳು ಹಾಕಬಾರದು. ಹೂ ಮುಡಿಯ ಬಾರದಿನ್ನು. ಮೂಗುಬಟ್ಟನ್ನು ತೆಗೆದಿರಿಸಿದ್ದರು. ಆ ಜಾಗದಲ್ಲೊಂದು ತೂತು ಮುಖದ ಸೌಂದರ್ಯವನ್ನು ಅಣಕಿಸುತ್ತಿತ್ತು. ವಯಸ್ಸಿಗೆ ಮೀರಿದ ಗಾಂಭೀರ್ಯ ಆವಳಲ್ಲಿ ಮನೆ ಮಾಡಿತು—ಖಾಲಿ ಮನೆಯನ್ನು ಹೊಕ್ಕ ಮೌನ ಪಿಶಾಚಿ.

ಯಾರಾದರೂ ಬಂದು ಹೊರಗಿಂದ ಕೂಗಿದರೆ ಅಮ್ಮಿ ಇನ್ನು ಬಾಗಿಲ ಬಳಿಗೆ ಬರ ಲಾಗದು. ಮುಖ ತೋರಿಸಬಾರದು ಯಾರಿಗೂ. ಯಾವ ಪ್ರಶ್ನೆಗೂ ಆಕೆ ಉತ್ತರ ವೀಯಬಾರದು. ರಾಮಚಂದ್ರನ ಮರಣದೊಡನೆಯೇ ಆಗಿತ್ತು ಆಕೆಯ ಸ್ವಾತಂತ್ರ್ಯದ ಹರಣ.

ಒಮ್ಮೆ ಹೀಗಾಯಿತು : ಮುತ್ತೈದೆಯರಿಬ್ಬರು ಬಂದು ಮನೆಯ ಅಂಗಳದಲ್ಲಿ ನಿಂತು, "ಲಕ್ಷ್ಮಮ್ನೋರೇ...ಲಕ್ಷ್ಮಮ್ನೋರೇ..." ಎಂದು ಕರೆದರು.

ಅಮ್ಮಿಯ ಅತ್ತೆ ಹಿತ್ತಿಲ ಕಡೆ ಹೋಗಿದ್ದರು. ಮಾನವ ಜೀವಿಗಳ ಸ್ವರ ಕೇಳಿದ ಅಮ್ಮಿ ಬಾಗಿಲ ಬಳಿಗೆ ನಡೆದಳು.

"ಯಾರು ? ಬನ್ನಿ..."

ಪ್ರಯಾಸ ಪಡುತ್ತ ಸ್ವಾಗತದ ಮುಗುಳುನಗೆಯೂ ಆಮ್ಮಿಯ ಮುಖದ ಮೇಲೆ ಮೂಡಿತು. ಆದರೆ ಹೊರಗಿನಿಂದ ಬಂದ ಉತ್ತರದ ಧ್ವನಿಯೊ ! ಅಮ್ಮಿ ಅದನ್ನು ನಿರೀಕ್ಷಿಸಿ ರಲಿಲ್ಲ.

"ಓ ನೀನಾ !..."

ಆ ಮುತ್ತೈದೆಯರ ಮುಖಗಳ ಮೇಲೆ ತಿರಸ್ಕಾರದ ಛಾಯೆ ಇತ್ತು.

ಕಾಣದ ಕೈಯೊಂದು ಕತ್ತುಹಿಸುಕುತ್ತಿದ್ದರೂ ಅಮ್ಮಿ ಅವರ ಮಾತು ಕೇಳಿಯೂ ಕೇಳಿಸದಂತೆ ಅಂದಳು :

"ಬನ್ನಿ, ಒಳಕ್ಕೆ ಬನ್ನಿ."

ಅವರು ಬರಲಿಲ್ಲ. ಅಷ್ಟೇ ಅಲ್ಲ. ಒಬ್ಬರ ಮುಖವನ್ನೊಬ್ಬರು ನೋಡಿ ವಾಪಸು ಹೊರಟುಹೋದರು.

ಅತ್ತೆ ಒಳ ಬಂದವರು ಹೊಲದ ಅಂಚಿನ ಮೇಲೆ ನಡೆದು ಹೋಗುತ್ತಿದ್ದ ಆ ಇಬ್ಬ ರನ್ನು ಕಂಡರು. ಆದರೆ ಕೂಗಿ ಕರೆಯಲಿಲ್ಲ.

"ಯಾವ ತಪ್ಪಿಗೇಂತ ಈ ಶಿಕ್ಷೆ ?" ಎಂದರವರು. ಆ ಸ್ವರದಲ್ಲಿ ಸಂಕಟವಿತ್ತು.

ಅಮ್ಮಿಗೆ ಆ ಮಾತು ಪೂರ್ತಿ ಅರ್ಥವಾಗಲಿಲ್ಲ. ಏನು ಹೇಳಬೇಕೆಂಬುದೇ ಆಕೆಗೆ ತೋಚಲಿಲ್ಲ. ಆದರೂ ಧೈರ್ಯಪಡುತ್ತ ಆಕೆ ಕೇಳಿದಳು :

"ಯಾಕತ್ತೆ ಆವರು ಹೊರಟು ಹೋದ್ರು ?"

ಒಂದು ಕ್ಷಣ ಮೌನವಾಗಿದ್ದು ಅತ್ತೆ ಕಠೋರ ಧ್ವನಿಯಲ್ಲಿ ಕೂಗಾಡಿದರು :

"ಅಷ್ಟೂ ತಿಳೀಬಾರ್ದೇ ನಿಂಗೆ ? ಮನೆಯ ಮಾನ ಕಳೀತಿಯಲ್ಲೇ ! ಯಾವ ಘಳಿಗೇಲಿ ಈ ಮನೆಗೆ ಕಾಲಿಟ್ಟೆಯೋ ಮಹರಾಯಿತಿ ! ಎಲ್ಲರ ಹೊಟ್ಟೇನೂ ಉರಿದ ಮೇಲೆ, ಹ್ಯಾಗೆ ನಡ್ಕೋಬೇಕೂಂತಾದರೂ ತಿಳೀಬಾರ್ದೆ ? ಭಗವಂತ ಯಾಕಾದರೂ ನನ್ನ

ಇಲ್ಲೇ ಬಿಟ್ಟಿದಾನೋ...."

ಆ ಬಳಿಕ ಒಮ್ಮೆಲೆ ಅಳು.

ಅಮ್ಮಿಗೆ ದಿಗ್ಭ್ರಮೆಯಾಯಿತು. ಇತರರ ನೋವು ಸಂಕಟಕ್ಕೆಲ್ಲ ತಾನೇ ಕಾರಣಳು ಹಾಗಾದರೆ! ಆ ಮುತ್ತೈದೆಯರು ಯಾವ ಶುಭ ಕಾರ್ಯಕ್ಕಾಗಿ ಬಂದಿದ್ದರೋ ಏನೋ. ವಿಧವೆಯಾದ ತಾನು ಅವರೆದುರು ಬಂದು ಅಮಂಗಳವಾಯಿತು...ಅಮಂಗಳವಾಯಿತು.

ಆಕೆಯ ಅತ್ತೆ ಗದರಿ ಮಾತನಾಡಿದ್ದರು, ನಿಜ. ಪ್ರೀತಿಯ ಸೊಸೆಯಾಗಿ ಮಗಳಾಗಿ ಮನೆಗೆ ಬಂದಿದ್ದ ಹುಡುಗಿ ಅಮ್ಮಿಯನ್ನು ಅವರು ಒಮ್ಮೆಯೂ ತೀಕ್ಷ್ಣ ಮಾತುಗಳಿಂದ ನೋಯಿಸಿರಲಿಲ್ಲ. ಆದರೆ ಈಗ ತಡೆಯಲಾಗದ ಬೆಂಕಿಯಿಂದ ಅಸಹನೆಯ ಮಾತುಗಳ ಕಿಡಿ ಏಳುತ್ತಿತ್ತು.

ಆ ಮಕ್ಕಳಿಬ್ಬರು—ರಂಗ ಮತ್ತು ನಾಣಿ—ಅತ್ತಿಗೆಯನ್ನು ಈಗ ಪೀಡಿಸುತ್ತಿರಲಿಲ್ಲ. ಮಾತು ನಿಂತು ಮೌನವಾಗಿ ನಿದ್ದೆ ಹೋಗಿದ್ದ ಅಣ್ಣನನ್ನು ಹಳ್ಳಿಗೆ ತಂದಿದ್ದರು. ಆಗ ಎಲ್ಲ ಕೊಡನೆ ಆ ಹುಡುಗರೂ ಅತ್ತಿದ್ದರು. ಆ ಬಳಿಕ ಬೆಂಕಿಯ ಉರಿಯ ಜ್ವಾಲೆ ಅವರಣ್ಣನನ್ನು ಸುಟ್ಟು ಬೂದಿ ಮಾಡಿತ್ತು. ಮಾಗದ ಕಾಯಿಯನ್ನು ಹಿಚುಕಿ ಹಣ್ಣು ಮಾಡಿದ ಹಾಗಿತ್ತು ಆ ಹುಡುಗರ ಮನಸ್ಸು. ಅವರೀಗ ಮನೆಯೊಳಗೆ ನಗುತ್ತ ಆಟವಾಡುತ್ತಿರಲಿಲ್ಲ. ತಿನ್ನ ಬೇಕಾದ್ದನ್ನು ತಿಂದು ಮುಗಿಸಿ ಕುಯಿಲಿನ ಕತ್ತಿ ಎತ್ತಿಕೊಂಡು ಹೊಲಗಳನ್ನು ದಾಟಿ ಗುಡ್ಡ ಬೆಟ್ಟಗಳತ್ತ ಹೋಗಿ ದಣಿದು ಹಿಂತಿರುಗುತ್ತಿದ್ದರು.

ತಾಯಿಯ ವಾತ್ಸಲ್ಯದ ಕಾತರದ ಧ್ವನಿ ಮಾತ್ರ ಅವರ ಬೆಂಗಾವಲಿಗಿರುತ್ತಿತ್ತು ಯಾವಗಲೂ :

"ದೂರ ಹೋಗ್ಬೇಡಿ ನಾಣಿ...ಇಲ್ಲೇ ಆಟವಾಡೀಪ್ಪಾ ರಂಗ...ಜತೇಲೇ ಇರಿ ಕಣ್ರೋ...."

ಅವರು ಜತೆಯಾಗಿಯೇ ಇದ್ದರು ನಿಜ! ಆದರೆ ಆಟವಾಡುತ್ತಿರಲಿಲ್ಲ. ಒಂದು ಕತೆ ಮುಗಿದು ಇನ್ನೊಂದು ಆರಂಭವಾದ ಹಾಗಿತ್ತು ಅವರ ಜೀವನ. ಮನೆಯ ಉಸಿರು ಕಟ್ಟುವ ವಾತಾವರಣವನ್ನು ಮರೆಯಲೆಂದು ನಾಣಿ ಏನಾದರೊಂದು ವಿಷಯವೆತ್ತುತ್ತಿದ್ದ - ಹೊಸತಾಗಿ ಕಂಡ ಒಂದು ಹಕ್ಕಿ...ಇಲ್ಲವೆ ಕೆಂಪು ಮುಖದೊಂದು ಕೋತಿ...ಅಥವಾ ಮುಗಿಲು ಮುಟ್ಟುವ ಹಾಗೆ ತೋರುತ್ತಿದ್ದೊಂದು ಮರ.

ಅದೇ ವಿಷಯ ಮತ್ತೆ ಬಂದೊಡನೆ ರಂಗ ಹೇಳುತ್ತಿದ್ದ :

"ಎಷ್ಟು ಸಾರಿ ಅಣ್ಣ ಅದೇ ಮಾತು ?"

ಆಗ ಸ್ವಲ್ಪ ಹೊತ್ತು ಸುಮ್ಮನಿದ್ದು, ಬೇರೆ ಯಾವುದಾದರೊಂದು ವಿಷಯದ ಮೇಲೆ ಇಬ್ಬರೂ ಒಮ್ಮೆಲೆ ಮಾತಾನಾಡುತ್ತಿದ್ದರು.

ಮಾವ ಮಾತ್ರ ಬಹಳ ಇಳಿದು ಹೋಗಿದ್ದರು. ಎತ್ತರವಾದ ಅವರ ದೇಹ ಬಾಗಿತ್ತು. ಮುಖದ ಮೇಲಿನ ಗೆರೆಗಳು ಆಳವಾಗಿದ್ದುವು. ಯಾವ ಕೆಲಸದಲ್ಲೂ ಉತ್ಸಾಹ ಉಳಿದಿರಲಿಲ್ಲ ಭಾರತವಾಚನ ಗೀತಾಪಠನಗಳನ್ನು ಅವರು ಬಿಟ್ಟಿರಲಿಲ್ಲ. ನಿಜ. ಆದರೆ ಅವರ ಪಾಲಿಗೆ ಮನಸ್ಸಿನ ನೆಮ್ಮದಿ ಕನಸಿನ ಗಂಟಾಗಿತ್ತು. ಹುಡುಗರ ಅಕ್ಷರಾಭ್ಯಾಸವನ್ನಾದರೂ ಮುಂದು ವರಿಸಬೇಕೆಂದು ಅವರು ಯತ್ನಿಸಿದರು. ಆದರೆ ತಪ್ತವಾಗಿದ್ದ ಮೆದುಳು - ಹೃದಯ ಸಿಡಿದು

ಹೋಗುವಂತೆ ಪ್ರತಿಭಟಿಸಿದುವು.

ಅವರಿಗೆ ಅರ್ಥವಾಗುತ್ತಿರಲಿಲ್ಲ. ದೇವರು ಹಾಗೆ ನಿಷ್ಕರುಣಿಯಾಗುವ ಅಗತ್ಯವೇನಿತ್ತು? ತಾವು ಮಾಡಿದ ತಪ್ಪಾದರೂ ಏನು ? ಆ ಎಳೆಯ ಹುಡುಗಿಯ ಗತಿಯೇನು ಇನ್ನು ?

"ಪರಮಾತ್ಮನ ಲೀಲೆ, ಎಲ್ಲವೂ ಪರಮಾತ್ಮನ ಲೀಲೆ," ಎನ್ನುತ್ತ ತನ್ನನ್ನು ತಾನೇ ಸಂತೈಸಿಕೊಳ್ಳಲು ಅವರು ಯತ್ನಿಸಿದರು. ಆದರೆ ಆ ನಂಬುಗೆಯಿಂದ ದೊರಯುತ್ತಿದ್ದ ನೆಮ್ಮದಿ ಅಲ್ಪಾಯುವಾಗುತ್ತಿತ್ತು.

ವಾಸ್ತವ ಪ್ರಪಂಚವನ್ನು ಅವರು ಮರೆತುಬಿಡುವುದು ಸಾಧ್ಯವೇ ಇರಲಿಲ್ಲ. ಹಾಗಾಗಬಾರದೆಂದು ಅಲ್ಲಿ ಇಲ್ಲಿ ಒಬ್ಬರು ಇಬ್ಬರು ಅವರನ್ನು ಎಚ್ಚರಿಸಿಯೂ ಇದ್ದರು. ಊರಿನವರ ಮಾತುಕತೆಗೆ ಮೆಲ್ಲ ಮೆಲ್ಲನೆ ವಸ್ತುವಾಗುತ್ತ ಬಂದಿತು ಆ ವಿಷಯ—

ಅಮ್ಮಿಯ ಕೇಶ ಮುಂಡನದ ಪ್ರಶ್ನೆ.

ಜೋಯಿಸರೆಂದರು :

"ನಿಮಗೆ ತಿಳಿಯದ್ದಲ್ಲ ನೋಡಿ."

ಪುರೋಹಿತರೆಂದರು :

"ಶಾಸ್ತ್ರ ಏನು ಹೇಳುತ್ತೆ, ಗೊತ್ತಿಲ್ವೆ ? "

ಯಾರಾದರೂ ಆ ಪ್ರಸ್ತಾಪಮಾಡಿದಾಗ ಅಮ್ಮಿಯ ಮಾವನ ಹೃದಯ ಕದಡುತ್ತಿತ್ತು. ಉಗುಳು ಗಂಟಲಲ್ಲೇ ಸಿಲುಕಿಕೊಳ್ಳುತ್ತಿತ್ತು. ಮಾತುಗಳು ಅಸ್ಪಷ್ಟ ಸ್ವರ ಹೊರಡಿಸಿ ಕಣ್ಮರೆಯಾಗುತ್ತಿದ್ದುವು.

ಪ್ರತಿ ದಿನವೂ "ಈ ದಿನ ಬೇಡ. ನಾಳೆ ಯೋಚಿಸೋಣ," ಎಂದು ಅವರು ಮನಸ್ಸಿಗೆ ಉತ್ತರ ಹೇಳುತ್ತಿದ್ದರು.

ಆದರೆ ನಾಳೆಗಳೆಷ್ಟೋ ಕಳೆದು ಹೋದವು. ಯೋಚನೆಯನ್ನಂತೂ ಅವರು ಮಾಡುವು ದಾಗಲಿಲ್ಲ. ತೀರ್ಮಾನದ ಮಾತು ದೂರ ಉಳಿಯಿತು.

ಧರ್ಮ ಅಧರ್ಮದ ಪ್ರಶ್ನೆಗಳು ದೈತ್ಯರೂಪ ತಳೆದು ಅವರನ್ನು ಹಿಂಸಿಸುತ್ತಿದ್ದವು. ಶಾಸ್ತ್ರದಲ್ಲಿ ಬರೆದಂತೆ ನಡೆಯಬೇಕೆ ಹಾಗಾದರೆ? ನಡೆಯಲೇಬೇಕೆ? ನಡೆದುಕೊಂಡ ರಾಯಿತು ನೋಡೋಣ...

ಆದರೆ ಮನೆಗೆ ಬಂದು ಅಮ್ಮಿಯ ಸೊರಗಿದ ಮುಖ ನೋಡಿದಾಗ ಅವರ ಹೃದಯ ಕರಗಿ ನೀರಾಗುತ್ತಿತ್ತು. ಪ್ರಶ್ನೆಗಳ ವಿಚಾರಗಳ ತುಮುಲವಾಗುತ್ತಿತ್ತು ಆಗ...ಯಾರು ಬರೆ ದರು ಶಾಸ್ತ್ರವನ್ನು ?...ಅಯ್ಯೋ, ಹೀಗೂ ವಿಚಾರ ಮಾಡೋದೆ ?...ಪರಮಾತ್ಮ. ನೀನು ಈ ರೀತಿ ಮಾಡಬಹುದೆ ?...ಆ ಮಗುವಿನ ಗತಿ ಏನು ಇನ್ನು ?

...ಬಹಳ ದಿನ ಅವರು ತಮ್ಮ ಸಹಧರ್ಮಿಣಿಯೊಡನೆ ಆ ಮಾತೆತ್ತಲಿಲ್ಲ. ಆ ತಾಯಿಗೂ ತಪ್ಪಿರಲಿಲ್ಲ ಕೊರಗು. ಊರ ಹೆಂಗೆಳೆಯರು ಆಡದ ವಿಷಯಗಳಿದ್ದುವೆ ? ತಮ್ಮ ಮನೆತನವೂ ಕಂಡವರ ಬಾಯಿಮಾತಿಗೆ ಗುರಿಯಾಯಿತೆಂದು ಅವರು ವ್ಯಥೆ ಪಟ್ಟರು.

ಆಕೆಯೇ ಕೇಳಿದ್ದರು ಒಮ್ಮೆ :

"ಏನ್ಮಾಡೋಣ ಈಗ ? "

"ನಂಗೇನೂ ತೋಚ್ತಾ ಇಲ್ಲ."

"ಹಾಗಂದರೆ ?—"

ಅಲ್ಲಿಗೆ ಕಡಿದು ಹೋಗಿತ್ತು ಮಾತಿನ ಸರಣಿ.

...ಒಂದು ರಾತ್ರಿ ಎಲ್ಲರೂ ಮಲಗಿಕೊಂಡಿದ್ದಾಗ ಅಮ್ಮಿಯ ಮಾವ "ಲಕ್ಷ್ಮಿ" ಎಂದು ಕರೆದರು. "ಅಮ್ಮಿಗೆ ನಿದ್ದೆ ಬಂತೆ ನೋಡು," ಎಂದರು.

ಅಮ್ಮಿಗೆ ನಿದ್ದೆ ಬಂದಿರಲಿಲ್ಲ. ಬಹಳ ದಿನಗಳಿಂದ ದೊಡ್ಡ ಗಂಡಾಂತರವನ್ನು ಆಕೆ ಇದಿರು ನೋಡುತ್ತಲಿದ್ದಳು. ಈಗ ತನ್ನ ಪ್ರಸ್ತಾಪ ಬಂತೆಂದು ಆವಳು ಉಸಿರು ಬಿಗಿ ಹಿಡಿದಳು.

ಅತ್ತೆ ಕರೆದರು :

"ಅಮ್ಮಿ, ಏ ಅಮ್ಮಿ, ನಿದ್ದೆ ಬಂತೇನೆ ?"

ಅಮ್ಮಿ ಉತ್ತರವೀಯಲಿಲ್ಲ.

"ಹುಡುಗರೂ ಮಲಕೊಂಡ್ವೇನು ?" ಎಂದರು ಮಾವ.

"ಆಗಲೇ..."

"ಲಕ್ಷ್ಮಿ, ಏನೇ ಮಾಡೋದು ?"

ಯಾವುದನ್ನು ಏನು ಎಂದು ಅವರು ವಿವರಿಸಬೇಕಾದ ಅಗತ್ಯ ಇರಲಿಲ್ಲ.

"ಆ ಮಗೂ ಕಡ್ಡಿಯಾಗ್ತಾ ಇದೆ, ನೋಡಕ್ಕಾಗಲ್ಲ ನಂಗೆ."

"ಹುಂ..."

"ನೀವೇನು ಯೋಚ್ನೆ ಮಾಡಿದೀರಾ ?"

ಕ್ಷಣಕಾಲ ತಡೆದು ನಿಂತು ಮಾವ ಹೇಳಿದರು.

"ಮಾಡಿಸ್ಬಾರ್ದೂಂತ..."

ಉತ್ತರವಿರಲಿಲ್ಲ ಆ ಮಾತಿಗೆ.

"ನೀನು ಏನಂತೀಯ ?"

"ನೀವು ತೀರ್ಮಾನಿಸಿರೋದೇ ಸರಿ..."

ಮಾತುಕತೆಗೆ ಕಿವಿಗೊಡುತ್ತ ಅಮ್ಮಿ ದೀರ್ಘ ನಿಟ್ಟುಸಿರುಬಿಟ್ಟಳು. ಯಾವುದೋ ಭಯದ ಕಪ್ಪು ಛಾಯೆಯೊಂದು ಆ ಕತ್ತಲೆಯಲ್ಲಿ ದೂರ ದೂರ ಸರಿದು ಹೋಗುತ್ತಿತ್ತು. ಆದರೂ ಆವಳ ಮೈ ನಡುಗಿತು-ಚಳಿಗಾಳಿಗೆ ಸಿಲುಕಿದ ಹಾಗೆ.

ರಾತ್ರೆ ಕಳೆದು ಹಗಲು. ಮತ್ತೆ ರಾತ್ರೆ.

ಅಮ್ಮಿ ನಿದ್ದೆ ಹೋದವಳಂತೆ ನಟಿಸುತ್ತ ಬಹಳ ಹೊತ್ತು ಕಾದಳು. ತನ್ನ ದುಃಖದ ಕತೆಯನ್ನು, ತಾನು ಆ ಮನೆಗೆ ತಂದೊಡ್ಡಿದ ದುಃಖದ ಕತೆಯನ್ನು, ಮಾವ ಅತ್ತೆಯರ ಬಾಯಿಯಿಂದ ಕೇಳುವ ತವಕ ಅವಳಿಗೆ. ಆದರೆ ಆ ರಾತ್ರೆ ಅವರು ಮಾತನಾಡಲೇ ಇಲ್ಲ.

ಹಗಲೂ ಬರಲಿಲ್ಲ ಆ ಮಾತು.

ಆದರೆ ಅಮ್ಮಿಗೆ ಗೊತ್ತಿಲ್ಲದಂತೆಯೇ ಊರೊಳಗೆ ಬೇರೆ ಬೇರೆ ಕಡೆ ಬೇರೆ ಬೇರೆ ಮಾತುಗಳಾದುವು. ನೀತಿಧರ್ಮದ ಪಾಲನೆಗೆ ಹೊರಟ ನಾಲಗೆಗಳು ಲಂಗು ಲಗಾಮಿಲ್ಲದೆ ವಕ್ರ ವಕ್ರವಾಗಿ ಹೊರಳಿದುವು.

"ಕಾಲ ಕೆಟ್ಟುಹೋಯಿತು !"

" ಧರ್ಮನಿಷ್ಠ ರಾಯರ ಮನೆಯಲ್ಲೇ ಹೀಗಾದರೆ—"

" ಆ ದೈವಭಕ್ತಿಯೆಲ್ಲ ಸೋಗು ಕಣಯ್ಯ ! "

" ಅಯ್ಯೋ ! "

ಆದರೆ ತಿಳಿವಳಿಕೆಯ ಧ್ವನಿಗಳೂ ಎರಡು ಮೂರು ಇಲ್ಲದಿರಲಿಲ್ಲ.

" ಪಾಪ ! ಅವರಾದರೂ ಏನು ಮಾಡಿಯಾರು ? "

" ಏನು ಎತ್ತ ಅಂತ ತಿಳಿಯೋಕ್ಮುಂಚೆಯೇ ಮದುವೆಯೂ ಆಯ್ತು. ಸುಖ ಅನುಭವಿಸಿ ಮುಗಿದದ್ದೂ ಆಯ್ತು."

" ಏಳೇಳು ಜನ್ಮದ ವೈರಿಗೂ ಹೀಗಾಗಬಾರದು ಕಣ್ರೀ."

" ಆ ಮಗೂನ ತಲೆ ಬೋಳಿಸೋದು ! ಅಯ್ಯಪ್ಪ. ಊಹಿಸೋಕಾಗಲ್ಲ. ಜುಂ ಎನ್ನುತ್ತೆ ಮೈ."

ಆ ಸ್ವರಗಳ ನಡುವೆಯೊಂದು ಪ್ರಶ್ನೆ ಕೆದಕಿ ಕೆದಕಿ ಬರುತ್ತಿತ್ತು :

" ಅಲ್ಲ, ಅವಳ್ನ ಇನ್ನು ಮನೇಲಿ ಇಟ್ಕೊಳ್ಳೋದಾದರೂ ಯಾತಕ್ಕೆ ? ಸದ್ದಿಲ್ದೆ ಆಚೆಗೆ ದಾಟಿಸ್ಬಾರ್ದೇನು ? "

ಅಲ್ಲಿ ಇಲ್ಲಿ ಸಂಚಾರಮಾಡಿ ಆ ಪ್ರಶ್ನೆ ಅಮ್ಮಿಯ ಮಾವನ ಬಳಿಗೆ ಬಂದಿತ್ತು. ಅವರು ಅಮ್ಮಿ ಸಮೀಪ ಇರದೆ ಇದ್ದಾಗ ಮನೆಯಾಕೆಯನ್ನು ಕೇಳಿದರು :

" ಏನಂತಾರೆ ಗೊತ್ತೇನು ? "

" ಏನಂತೆ ? "

" ಸೊಸೇನ ಜೀವನಹಳ್ಳಿಗೆ ವಾಪ್ಸು ಯಾಕೆ ಕಳಿಸ್ಬಾರ್ದು - ಅಂತೆ."

ಅದು ಅರ್ಥವಿಲ್ಲದ ಮಾತಾಗಿರಲಿಲ್ಲ. ಹಾಗೆ ಕಳುಹಿಸಿಕೊಟ್ಟರೆ ನಿಂದೆ ನಿಂತು ಹೋಗುತ್ತಿತ್ತು. ಆದರೆ ಹಾಗೆ ಮಾಡುವುದು ಸಾಧ್ಯವಿತ್ತೆ ?

ಕೈ ಹಿಡಿದಾಕೆಯ ವಿಚಾರವನ್ನು ಊಹಿಸಿಕೊಂಡು ತಮ್ಮದೂ ಅದೇ ಅಭಿಪ್ರಾಯ ಎನ್ನುವಂತೆ ಅಮ್ಮಿಯ ಮಾವ ಹೇಳಿದರು.

" ಹ್ಯಾಗೆ ಕಳಿಸೋಕಾಗುತ್ತೆ ? ಅಲ್ಲಿ ಯಾರಿದ್ದಾರೇಂತ ? ಹಾಗೆ ಆಕೇನ ಅಡವಿ ಪಾಲು ಮಾಡಿದರೆ ದೇವರು ಮೆಚ್ಚಿಯಾನೇ ? "

ಆದರೂ, ಆ ಸಮಸ್ಯೆಗೊಂದು ಪರಿಹಾರ ಬಲು ದೂರದಲ್ಲಿ ಅವರಿಗೂ ಕಾಣಿಸುತ್ತಿತ್ತು. ಅದು ಅಮ್ಮಿಯ ಅಣ್ಣ ರಾಮಕೃಷ್ಣನ ಮದುವೆ. ಆತ ಸಂಸಾರ ಹೂಡಿದನೆಂದರೆ ವಿಧವೆ ತಂಗಿಯನ್ನು ಅಲ್ಲಿಗೆ ಕರೆಸಿಕೊಳ್ಳುವುದು ಸಾಧ್ಯ. ಆದರೆ ಅವರಾಗಿಯೇ ಆ ಪ್ರಸ್ತಾಪ ಮಾಡುವುದು ಯೋಗ್ಯವಾಗಿರಲಿಲ್ಲ.

....ಮತ್ತೊಂದು ತಿಂಗಳು ಕಳೆದು ಮುಂಗಾರು ವೇಳೆಯ ದಿನ ಸಮೀಪಿಸುತ್ತಿದ್ದಂತೆ ರಾಮಕೃಷ್ಣನೇ ರಾಯನಹಳ್ಳಿಗೆ ಬಂದ. ಅಷ್ಟು ದಿನಗಳ ಮೇಲೆ ಅದೇ ಮೊದಲ ಬಾರಿ ಅಮ್ಮಿಯ ಮುಖ ಅರಳಿತು. ಆಕೆ ಲವಲವಿಕೆಯಿಂದ ಮನೆಯೊಳಗೆ ಹೆಜ್ಜೆಯಿಟ್ಟಳು.

" ಚೆನ್ನಾಗಿದೀಯೇನಪ್ಪಾ ರಾಮಕೃಷ್ಣ ? " ಎಂದು ಅಮ್ಮಿಯ ಮಾವ ಕೇಳಿದರು,

" ಹೀಗಿದೀನಿ ಮಾವಯ್ಯ."

" ಬೇಸಾಯದ ಏರ್ಪಾಟು ಮಾಡ್ಕೊಂಡಿದೀಯೇನು ? "

"ಹೂಂ. ಮಾವಯ್ಯ."

ಆ ರಾಮಕೃಷ್ಣ ಇನ್ನೊಂದು ಏರ್ಪಾಟು ಮಾಡಿಕೊಂಡು ಬಂದಿದ್ದ. ಆದರೆ ಬಾಯಿ ಬಿಟ್ಟು ಹೇಳಲು ಅವನಿಗೆ ನಾಚಿಕೆಯಾಯಿತು.

ಊಟಕ್ಕೆ ಕುಳಿತಾಗ ಅಮ್ಮಿಯ ಅತ್ತೆ ಹೇಳಿದರು :

"ಹೀಗೇ ಎಷ್ಟು ದಿನ ಒಂಟಿಯಾಗಿರ್ತೀಯಾ ? ಬೇಗನೆ ಮದುವೆ ಮಾಡ್ಕೋಬೇಕಪ್ಪ."

ಅಣ್ಣನ ಮದುವೆ! ಅತ್ತೆಯ ಆ ಮಾತು ಕೇಳಿ ಅಮ್ಮಿ ಹಿಗ್ಗಿದಳು. ಅಮಾವಾಸ್ಯೆಯ ರಾತ್ರಿ ಹುಣ್ಣಿಮೆಯ ಚಂದ್ರ ಮುಖ ತೋರಿಸಿದ ಹಾಗಾಯಿತು ಅವಳ ಅನುಭವ. ಆದರೆ ಆ ಅಣ್ಣನೊ! ತಲೆಬಗ್ಗಿಸಿದವನು ಉಸಿರೆತ್ತದೆ ಉಣ್ಣುತ್ತಿದ್ದ. ಎಲ್ಲಿಲ್ಲದ ನಾಚಿಕೆ ಅವನನ್ನು ಆವರಿಸಿತ್ತು.

ಅಮ್ಮಿಯ ಮಾವನೂ ಅಂದರು :

"ಹೌದಪ್ಪಾ, ಹೀಗೇ ಇರೋಕಾಗುತ್ಯೆ ಹೇಳು ?"

ಆದರೆ ಆ ಅತ್ತೆ ಮಾವಂದಿರು ರಾಮಕೃಷ್ಣನ ಮದುವೆಯ ವಿಷಯವನ್ನಷ್ಟೇ ಯೋಚಿಸುತ್ತಿರಲಿಲ್ಲ. ಆ ಮದುವೆ ಆದರೆ, ತಮ್ಮ ಮನೆಯ ಸೊಸೆ ಖಂಡಿತವಾಗಿ ಅಲ್ಲಿಗೇ ಹೋಗಬಹುದೆಂಬ ಆಸೆಯೂ ಅವರ ಮಾತುಗಳ ಹಿಂದೆ ಅಡಗಿ ಕುಳಿತಿತ್ತು.

ಅಮ್ಮಿ ಮೌನವಾಗಿಯೇ ಇದ್ದಳು. ಅವಳ ಕಣ್ಣುಗಳಲ್ಲಿ ಆನಂದಾಶ್ರು ತುಂಬಿಬಂತು. ಅಣ್ಣನ ಮದುವೆಯ ಸಂದರ್ಭದಲ್ಲಿ ತಾನು ಸಡಗರದಿಂದ ಓಡಿಯಾಡುವ ಸುಂದರ ಕಲ್ಪನೆ...

ರಾಮಕೃಷ್ಣ ಮೆಲ್ಲಮೆಲ್ಲನೆ ನಾಚುತ್ತ ನಾಚುತ್ತ ಹೇಳಿದ :

"ಅದೇ ವಿಷಯ ಹೇಳಿ ಹೋಗೋಣಾಂತ ಬಂದೆ."

"ನಿಜವೇನಯ್ಯ ?" ಎಂದು ಸಂತೋಷದಿಂದ ಕೇಳಿದರು ಮಾವ.

ತಮ್ಮ ಮಗನ ನೆನಪಾಗಿ ಮುಖ ಬಾಡುತ್ತಿದ್ದರೂ ಅತ್ತೆ "ಸಂತೋಷವಪ್ಪಾ" ಎಂದರು.

ಅಮ್ಮಿ ಆನಂದ ಆಶ್ಚರ್ಯಗಳಿಂದ ಅಣ್ಣನ ಮುಖವನ್ನೇ ನೋಡಿದಳು.

ಆತ ತಲೆಬಾಗಿಸಿ ಹೇಳುತ್ತಲಿದ್ದ :

"ಶ್ಯಾನುಭೋಗರು ಇಷ್ಟೆಲ್ಲ ಮಾಡಿರೋದು. ನಮ್ಮ ಪಕ್ಕದ ಹಳ್ಳೀದೇ ಸಂಬಂಧ. ವಿಷಯ ತಿಳಿಸಿ ಹಿರಿಯರ ಆಶೀರ್ವಾದ ಪಡಕೊಂಡು ಹೋಗೋಣಾಂತ ಬಂದೆ."

"ಕೇಳಿದಿಯೇನೇ ಅಮ್ಮಿ ?" ಎಂದರು ಮಾವ, "ಹ್ಯಾಗಿದಾನೆ ನೋಡು ನಿಮ್ಮಣ್ಣ !"

ಅಮ್ಮಿ ಒಬ್ಬಳೇ ಎಂದೇನು, ಎದುರಲ್ಲೇ ಊಟಕ್ಕೆ ಕುಳಿತಿದ್ದ ರಂಗ—ನಾಣಿಯರೂ ಬೆರಗಾಗಿ ರಾಮಕೃಷ್ಣನನ್ನು ದಿಟ್ಟಿಸಿದರು.

ಊಟ ಮುಗಿಯಿತು. ಅಣ್ಣನನ್ನು ಏಕಾಂತದಲ್ಲಿ ಎಂದು ಕಾಣುವೆನೋ ಎಂಬ ಆತುರ ಅಮ್ಮಿಗೆ.

ಅಂತೂ ಸಂಜೆಯ ಹೊತ್ತಿಗೆ ಅಣ್ಣನೊಬ್ಬನೇ ದೊರೆತ. ಅಮ್ಮಿ ಅವನ ಬಳಿಗೆ ನಡೆದು ಬಂದಳು. ಋತುಮತಿಯಾದ ಮೇಲೆ ಮಾವ ಯಾವ ಸಂಕಟಗಳಿಗೂ ಬೆದರದೆ ಬೇಡ ಬೇಡವೆಂದರೂ ಅವಳ ಮೈ ಮೆಲ್ಲಮೆಲ್ಲನೆ ತುಂಬಿಕೊಳ್ಳತೊಡಗಿತ್ತು. ರಾಮಕೃಷ್ಣ ಹನಿಕೂಡಿದ ಕಣ್ಣುಗಳಿಂದ ತಂಗಿಯನ್ನು ದಿಟ್ಟಿಸಿದ.

ಸೋದರನ ಸಮೀಪದಲ್ಲಿ ಕುಳಿತಳು ತಂಗಿ.

"ಘಾಟಿ ನನ್ನಣ್ಣ !"

"ಅಲ್ಲವೇ ಮತ್ತೆ ?"

"ಯಾವತ್ತಣ್ಣ ಮದುವೆ ?"

"ನೀನು ಬಂದಮೇಲೆ—"

"ಓ !"

ಅಣ್ಣನ ಮದುವೆ... ತಾನು ಹುಟ್ಟಿದ ಜೀವನಹಳ್ಳಿ....ಅಲ್ಲಿ ಆಕೆಯ ಮದುವೆಯಾಗಿತ್ತು....

"ಎಲ್ಲಣ್ಣ ಮದುವೆ ?"

"ಅಯ್ಯೋ ಹುಚ್ಚಿ—ವಧು ಇರೋ ಹಳ್ಳೀಲೆ ಅಲ್ವೇನೆ ?"

ಅದು ನಿಜ....ತಾನು ಇದ್ದ ಹಳ್ಳಿಯಲ್ಲಿ ತನ್ನ ಮದುವೆಯಾಗಿತ್ತು....ವಧುವಿನ ಮನೆಗೆ ವರನ ದಿಬ್ಬಣ....ವಾದ್ಯ ವಾಲಗ....ಬಾಸಿಂಗ....ಆಗ ಶುಭಮುಹೂರ್ತವಲ್ಲಿ—

ಅಮ್ಮಿಯ ಯೋಚನೆಯ ಸರಣಿ ಕಡಿದು ಒಮ್ಮೆಲೆ ಮೆದುಳನ್ನು ಶೂನ್ಯ ಆವರಿಸಿತು. ಮುಖದಿಂದ ಗೆಲುವು ಆರಿತು. ದುಃಖದ ನೆನಪುಗಳು ಕರಿಕುದುರೆಗಳಾಗಿ ನಾಗಾಲೋಟದಿಂದ ಗುಡುಗುಟ್ಟಿಕೊಂಡು ಬಂದುವು. ಅದನ್ನು ಊಹಿಸಿಕೊಳ್ಳುತ್ತ ರಾಮಕೃಷ್ಣ ಕೇಳಿದ:

"ಅಮ್ಮಿ, ಚೆನ್ನಾಗಿದ್ದೀಯಾ ?"

"ಏನಣ್ಣಾ ಚೆನ್ನಾಗಿರೋದು ಅಂದ್ರೆ ?"

"ನೀನು ಮೈ ನೆರೆದೀಂತ ಕಾಗದ ಬರೆದಿದ್ರು....ಅದಕ್ಕೆ ಏನು ಉತ್ತರ ಕೊಡ್ಬೇಕೋ ತೋಚ್ಲೇ ಇಲ್ಲ ನಂಗೆ."

"ಹೂಂ...."

"ಅಮ್ಮಿ, ನಿನ್ನನ್ನು ಸರಿಯಾಗಿ ನೋಡ್ಕೋತಾರಾ ?"

"ಅದ್ಯಾಕಣ್ಣಾ ಹಾಗೆ ಕೇಳ್ತೀಯಾ ?"

"ನಿನ್ನನ್ನು ಅವರೇನೂ ಅನ್ನೋಲ್ಲ ತಾನೆ ?"

"ಇಲ್ಲವಪ್ಪ....ಏನೂ ಇಲ್ಲ—"

ಮೌನದ ಆ ನಾಲ್ಕು ನಿಮಿಷಗಳಲ್ಲಿ ಇಬ್ಬರ ಯೋಚನೆಗಳೂ ಒಂದೇ ದಿಕ್ಕಿನತ್ತ ಹರಿದು ಬಂದುವು.

"—ಆ ವಿಷಯ ಮಾತು ಬಂದಿತ್ತೇನು ?"

ಯಾವ ವಿಷಯ ಎಂಬುದನ್ನು ಬಿಡಿಸಿ ಹೇಳಬೇಕಾಗಿರಲಿಲ್ಲ.

"ಬಂದಿತ್ತು—"

"ಏನೆಂದರು ?"

"ಬೇಡ ಅಂತ ತೀರ್ಮಾನ ಮಾಡಿದ್ರು ಮಾವ."

"ಆ !"

ರಾಮಕೃಷ್ಣ, ಕೃತಜ್ಞತೆಯಿಂದ ಕ್ಷಣಕಾಲ ಮೂಕನಾದ.

"ಅವರು ದೇವರು ಕಣೇ, ಸಾಕ್ಷಾತ್ ದೇವರು—"

ದೀರ್ಘ ನಿಟ್ಟುಸಿರುಬಿಟ್ಟು ಅಮ್ಮಿ ಯೆಂದಳು :

" ಆದರೆ ಬೇರೆಯವರು ಸುಮ್ನಿರ್ತಾರ್ಯೆ ಅಣ್ಣ ? "

" ಅವರ್ದೇನಂತೆ ಗಂಟು ಮುಳುಗ್ಹೋಗಿರೋದು ? "

" ಹಾಗೆ ಹೇಳೋಕಾಗುತ್ಯೆ ಅಣ್ಣ ? "

" ಕೆಟ್ಟ ಜನ ! "

ಆ ಉದ್ಗಾರದ ಬಳಿಕ ಎರಡು ನಿಮಿಷಗಳಾದ ಮೇಲೆ ಆತನೇ ಹೇಳಿದ :

" ಮದುವೆಗೆ ಬಂದೋಳು ಅಲ್ಲೇ ಇದ್ಬಿಡು ಅಮ್ಮಿ."

ಒಡಹುಟ್ಟಿದವನ ಮಡಿಲಲ್ಲಿ ಮುಖವಿಟ್ಟು ಅಮ್ಮಿ ಬಿಕ್ಕಿಬಿಕ್ಕಿ ಅತ್ತಳು—ಸಂತೋಷ ದಿಂದ, ದುಃಖದಿಂದ, ಇಂಥದೇ ಎಂದು ಗುರುತಿಸಲಾಗದ ಭಾವನೆಗಳಿಂದ ಅತ್ತಳು.

—ಮರುದಿನವೇ ಜೀವನಹಳ್ಳಿಗೆ ಪ್ರಯಾಣ ಬೆಳೆಸಲು ಸನ್ನದ್ಧನಾದ ರಾಮಕೃಷ್ಣ ಮಾವನವರಿಗೆ ಹೇಳಿದ :

" ಮುಹೂರ್ತ ತಿಳಿಸಿ ಕಾಗದ ಬರೀತೀನಿ. ದಿಬ್ಬಣ ಹೊರಡೋಕೆ ಎರಡು ದಿವ್ಸ ಇದೆ ಅನ್ನೋವಾಗ್ಲೇ ನೀವೆಲ್ರೂ ಬಂದ್ಬಿಡಿ. ಬೇರೆ ಯಾರಿದ್ದಾರೆ ನಂಗೆ ?—ನೀವು ಬರದೇ ಹೋದರೆ ಮದುವೇನೇ ನಡೆಯೋಲ್ಲ. ಖಂಡಿತಾ ಬನ್ನಿ—ಅಮ್ಮಿನ್ನೂ ಕರಕೊಂಡು ಬನ್ನಿ..."

ಅತ್ತೆ ಮಾವ " ಹೂಂ " ಎಂದರು.

ಮಾವ ಸ್ವಲ್ಪ ದೂರ ರಾಮಕೃಷ್ಣನ ಜತೆಯಲ್ಲೇ ಹಾದಿ ನಡೆದು ಬಂದರು. ಹಾಗೆ ಬರುತ್ತ, ಭಾರವಾದ ಹೃದಯವನ್ನು ಹಗುರಗೊಳಿಸಲು ಯತ್ನಿಸಿದರು.

" ನಿನ್ನ ತಂಗಿ ವಿಷಯ—"

" ಹೇಳಿ ಮಾವಯ್ಯ."

" ಪೂರ್ವಿಕರ ಆಚಾರವಿಚಾರ ಏನೇ ಇರ್ಲಿ...ಅವಳ ವಿಷಯದಲ್ಲಿ ಕ್ರೂರಿಗಳ ಹಾಗೆ ನಡಕೊಳ್ಳೋದು ಸಾಧ್ಯವಿಲ್ಲ."

" ನಾನು ಏನು ಹೇಳ್ಲಿ ಮಾವಯ್ಯ ? ನಂಗೆ ಮಾತೇ ಬರದು."

" ನನ್ನ ತೀರ್ಮಾನ ಸರೀಂತ ಮನಸ್ಸಾಕ್ಷಿ ಹೇಳುತ್ತೆ."

" ಆಗಲಿ ಮಾವಯ್ಯ—ಮದುವೆಗೆ ಬಂದವಳನ್ನ ಜೀವನಹಳ್ಳೀಲೇ ಬಿಟ್ಬಿಡಿ, ನೋಡ್ಕೋತೇನೆ."

" ಹಾಗೇ ಆಗಲಪ್ಪ...ಅವಸರವೇನಿಲ್ಲ...ಇಲ್ಲೇ ಇರಬಹುದು ಬೇಕಾದ್ರೆ...ಆದರೂ—"

" ಹೌದು ಮಾವಯ್ಯ. ಜನರ ಬಾಯಿ ಮುಚ್ಚಿಸೋದು ಕಷ್ಟದ ಕೆಲಸ. ನಮ್ಮ ನೇಲೇ ಇರಿಸ್ಕೊತೀನಿ..."

ಮಾವ ಸ್ವಲ್ಪ ದೂರದಿಂದಲೆ ಹಿಂತಿರುಗಿ ಬಂದರು.

ಅದಾದ ಮೇಲೆ ಒಂದು ವಾರದೊಳಗೆ ಜೀವನಹಳ್ಳಿಯಿಂದ ಗೌಡರೊಬ್ಬರು ರಾಮ ಕೃಷ್ಣನ ಕಾಗದ ತಂದರು.

ಅದನ್ನೋದುತ್ತ ಓದುತ್ತ ಮಾವ ಕರೆದರು :

" ಬನಶಂಕರೀ ! ಬನಶಂಕರೀ ! "

ಅದು ತನ್ನ ಹೆಸರೇ ಏನೆಂಬುದನ್ನು ಅಮ್ಮಿ ಜ್ಞಾಪಿಸಿಕೊಳ್ಳಬೇಕಾದ ಪ್ರಮೇಯ. ಗಂಡನ ಮನೆಯಲ್ಲಿ ಪ್ರೀತಿಯಿಂದ ತನಗಿಟ್ಟ ಹೆಸರಲ್ಲವೇ ಅದು ?

"ಏನು ಮಾವಯ್ಯಾ ?"

"ನಿನ್ನಣ್ಣ ಕಾಗದ ಬರೆದಿದ್ದಾನಮ್ಮ...ತಗೋ...ಓದಿನೋಡು. ಸೋಮವಾರವೇ ನಾವು ಹೊರಡ್ಬೇಕು."

ಬೇರೆ ದಿನಗಳಾಗಿದ್ದರೆ ಅಮ್ಮಿ ಹಾಗೆ ಕೈಯೊಡ್ಡಿ ಕಾಗದ ಪಡೆಯುತ್ತಿರಲಿಲ್ಲ. ಆದರೆ ಈ ದಿನ ಕೈ ಎಲ್ಲ ಸಂಕೋಚಗಳನ್ನೂ ಬದಿಗೊತ್ತಿ ಮುಂದೆ ಸರಿಯಿತು.

ಬರೆದು ರೂಢಿಯಿಲ್ಲದ ರಾಮಕೃಷ್ಣನ ಕೈ ಅಂಕುಡೊಂಕಾಗಿಯೇ ಓಡಿತ್ತು. ಆದರೆ ಅಮ್ಮಿಯ ದೃಷ್ಟಿಯಲ್ಲಿ ಅದು ಮುದ್ದು ಮುದ್ದಾದ ಅಕ್ಷರ. ಎಷ್ಟೆಂದರೂ ಆ ಅಣ್ಣ ತನಗೆ ನಾಲ್ಕಕ್ಷರ ಕಲಿಸಿದ ವಿದ್ಯಾಗುರುವಲ್ಲವೆ ?

ಓಲೆಯ ಒಕ್ಕಣೆ ಗಂಭೀರವಾಗಿ ಮೊದಲಾಗಿತ್ತು :

"ತೀರ್ಥರೂಪಸಮಾನರಾದ ಮಾವನವರ ಪಾದಾರವಿಂದಗಳಿಗೆ—ಉಭಯ ಕುಶಲೋಪರಿ—ಸಾಂಪ್ರತ..."

ಅಲ್ಲಿದ್ದುದು ಅಣ್ಣನ ಮದುವೆಯ ವಿಷಯ...ಆ ಅಕ್ಷರಗಳು ಎದ್ದು ಕುಣಿದುವು—ಕಾಗದದ ಕೊನೆಯಲ್ಲಿ ಬರೆದಿತ್ತು.

"ಜತೆಯಲ್ಲಿ ತಂಗಿ ಬನಶಂಕರಿಯನ್ನು ಕರಕೊಂಡು ಬರುವುದು. ಖಂಡಿತಾ ಕರಕೊಂಡು ಬರುವುದು-ಇತಿ ಬೇಡುವ ಆಶೀರ್ವಾದಗಳು—ರಾಮಕೃಷ್ಣ."

ಅದನ್ನು ಮತ್ತೊಮ್ಮೆ ಓದಿದಳು ಬನಶಂಕರಿ. ತನ್ನನ್ನು-ತಂಗಿ ಅಮ್ಮಿಯನ್ನು-ಕರೆದುಕೊಂಡು ಬರಲೇಬೇಕು ಎಂದು ಬರೆದಿದ್ದನಲ್ಲ ಅಣ್ಣ ?

ಓದು ಬಾರದ ಅತ್ತೆ ಸೊಸೆಯನ್ನೆ ದಿಟ್ಟಿಸಿ ಕೇಳಿದರು :

"ಏನು ಬರೆದಿದಾನಮ್ಮ ನಿನ್ನಣ್ಣ ?"

ಆ ಪ್ರಶ್ನೆಗೆ ಆನಂದೋದ್ವೇಗದ ಸ್ವರದಲ್ಲಿ ಉತ್ತರ :

"ಓ ಅತ್ತೆ... ನನ್ನನ್ನು ಕರಕೊಂಡು ಬರ್ಬೇಕೂಂತ ಅಣ್ಣ ಬರೆದಿದಾನೆ ಅತ್ತೆ—"

ಅತ್ತೆ ನೀಳವಾದ ನಿಟ್ಟುಸಿರು ಬಿಟ್ಟರು.

ಸೋಮವಾರ ಬೆಳಗು ಮುಂಜಾನೆ ಅಮ್ಮಿಯ ಮಾವ ಕಿರಿಯ ಮಗನನ್ನೂ ಸೊಸೆಯನ್ನೂ ಕರೆದುಕೊಂಡು ಗಾಡಿ ಏರಿದರು. ಹೊರಟಾಗ ಅಮ್ಮಿ ಅಳುತಳುತ ಅತ್ತೆಯ ಪಾದ ಹಿಡಿದು ನಮಿಸಿದಳು. ಗತಿಸಿದ ಮಗನ ನೆನಪನ್ನು ಜೀವಂತಗೊಳಿಸಿದ್ದ ಒಡವೆಯೂ ಹೊರಟು ಹೋಗುತ್ತಿದ್ದುದನ್ನು ಕಂಡು ಆ ಅತ್ತೆ ಕಣ್ಣೀರಿಟ್ಟರು.

"ಹೋಗಿ ಬಾ ಮಗಳೆ, ಹೋಗಿ ಬಾ...ಆಗಾಗ್ಗೆ ಬರ್ತಾ ಇರು ಮಗಳೆ, ಬರ್ತಾ ಇರು...ಇದು ನಿನ್ಮನೇನೆ ಅಮ್ಮಿ, ನಿನ್ಮನೇನೆ."

ಹಳ್ಳಿಯಿಂದ ಹೊರಬೀಳುವ ತನಕವೂ ಅಮ್ಮಿ ತಾನು ಬನಶಂಕರಿಯಾಗಿ ಬಾಳ್ವೆ ಮಾಡಲು ಬಂದಿದ್ದ ಆ ಮನೆಯನ್ನು ನೋಡುತ್ತಲಿದ್ದಳು. ಆ ಮನೆ, ಅಂಗಳ, ಹೊಲ...ಬಾಗಿಲಿಗೊರಗಿ ನಿಂತಿದ್ದ ಅತ್ತೆ...ತಾನೂ ಅಳುತ್ತ ತಾಯಿಯ ಸೆರಗು ಹಿಡಿದು ನಿಂತಿದ್ದ ನಾಣಿ...ಆ ಚಿತ್ರ ಕಿರಿದಾಗುತ್ತ ಬರುತ್ತಿತ್ತು...ಆದಾದ ಮೇಲೆ ತನ್ನ ಪತಿಯನ್ನು

ಸುಟ್ಟು ಬೂದಿಮಾಡಿದ ಹಳ್ಳಿಯ ಆ ಮೂಲೆ...ಆ ಬಳಿಕ—

ಗಾಡಿ ಎಡಕ್ಕೆ ತಿರುಗಿ ಕೊಂಡು ಮುಂದೆ ಸಾಗಿತು. ಎತ್ತರವಾದ ಬೆಟ್ಟದೊಂದು ತಪ್ಪಲು ನೋಟಕ್ಕೆ ತಡೆಯಾಗಿ ನಿಂತು ರಾಯನಹಳ್ಳಿಯನ್ನು ಅಮ್ಮಿಯ ದೃಷ್ಟಿಯಿಂದ ಮರೆ ಮಾಡಿತು.

ಆ ಕಣಿವೆಯಲ್ಲಿ ಗಾಡಿ ಸರಿಯಾಗಿ ಇಳಿಯಲಿಲ್ಲವೆಂದು ಗಾಡಿಯುವನು ಎತ್ತುಗಳಿಗೆ ಗದರಿಸುತ್ತಿದ್ದ:

"ನಿಮ್ ಮುಂಡವೋಚ್ತು."

ಜಪ್ಪೆನ್ನಲಿಲ್ಲ ಎತ್ತುಗಳು.

"ನಿಮ್ ತಲೆ ಬೋಳಿಸ್ತು."

ಜತೆಯಲ್ಲೆ ಬಾರು ಕೋಲಿನ ರಪ್ ರಪ್ ಸದ್ದು.

ಮಾವ ಮೃದುಧ್ವನಿಯಲ್ಲಿ ಅಂದರು :

"ಹಾಗನ್ಬಾರದಪ್ಪಾ—ಮೂಕ ದನಗಳಿಗೆ ಹಾಗೆ ಅಂತಾರೇನು? ಆರೀತಿ ಹೊಡೀ ತಾರೇನು?"

೪

ಗಾಡಿ ಜೀವನಹಳ್ಳಿ ಸೇರಿದ ರಾತ್ರೆ, ಹಾಲು ಚೆಲ್ಲಿದ ಹಾಗೆ ಬೆಳದಿಂಗಳಿತ್ತು. ಹೊಲ ಗಳಾಚೆ ಗಾಡಿ ನಿಂತಲ್ಲಿಗೇ ಬಂದ ರಾಮಕೃಷ್ಣ ಅವರನ್ನೆಲ್ಲ ಇದಿರ್ಗೊಂಡ. ಗಾಡಿಯಿಂದ ಇಳಿ ಯುತ್ತಿದ್ದವರನ್ನು ನೋಡುತ್ತ ಅವನೆಂದ :

"ಅತ್ತೆ ಬರಲಿಲ್ವೆ ಮಾವಯ್ಯ? ನಾಣಿನೂ ಬರಲಿಲ್ಲ!"

"ಇಲ್ಲವಪ್ಪ. ಆಕೆಗಂತೂ ಮೈ ಚೆನ್ನಾಗಿಲ್ಲ. ಮನೇಲೂ ಯಾರಾದರೂ ಇರಬೇಡ್ವೆ?"

ಆ ಮಾತು ನಿಜವಾಗಿದ್ದರೂ ರಾಮಕೃಷ್ಣನ ಮನಸ್ಸಿಗೆ ನೋವಾಯಿತು. ಆದರೂ ಅದನ್ನು ಮರೆಯಲೆತ್ನಿಸುವವನಂತೆ ಆತ ಹೇಳಿದ:

"ಅಜ್ಜಿ ಬಂದಿದಾರೆ ಅಮ್ಮಿ, ಬಾಳೆಮಣ್ಣೂರಿಂದ. ಅಂತೂ ಮೊಮ್ಮಗನ ಮದುವೆ ಗಾದರೂ ಬಂದ್ರು!"

"ಓ!" ಎಂದು ಸಂತೋಷದಿಂದ ಅಮ್ಮಿ ಉದ್ಗಾರವೆತ್ತಿದಳು.

ತನ್ನ ಹುಟ್ಟು ಹಳ್ಳಿಗೆ ಮತ್ತೆ ಬಂದಿದ್ದಳು ಅಮ್ಮಿ. ಬಾಲ್ಯದ ಬವಣೆಗಳನ್ನೆಲ್ಲ ಬೊಂಬೆ ಯಾಟವಾಗಿ ಮಾರ್ಪಡಿಸಿದ್ದ ಆ ವಾತಾವರಣ ಎಷ್ಟು ಹಿತಕರ! ಈಗ ರಾತ್ರೆ. ಬೆಳಗಾದ ಮೇಲೆ ಶಾನುಭೋಗರ ಮನೆಗೆ ಓಡಬೇಕು...ಅವರ ಮಡದಿ, ಮಗಳು...ಮೂರು ವರ್ಷ ಗಳಾಗಿದ್ದುವು ಅಮ್ಮಿ ಜೀವನಹಳ್ಳಿಯಿಂದ ಹೊರಟು. ಅವು ಕ್ಷಣಮಾತ್ರವೆಂಬಂತೆ ಕಳೆದು ಹೋದ ಮೂರು ವರ್ಷಗಳು. ಆ ಅವಧಿಯಲ್ಲಿ ಎಂತೆಂತಹ ಅನುಭವಗಳಾಗಿದ್ದುವು ಅವಳಿಗೆ!

ಹುಡುಗ ರಂಗ ಆಯಾಸದಿಂದ ಆಗಲೆ ತೂಕಡಿಸುತ್ತಿದ್ದ. ಅವರೆಲ್ಲರೂ ಬೇಗ ಬೇಗನೆ

ನಡೆದು ರಾಮಕೃಷ್ಣನ ಮನೆ ಸೇರಿದರು. ಅರವತ್ತು ದಾಟಿದ್ದ ಮುದುಕಿ, ಅಮ್ಮಿಯ ಅಜ್ಜಿ, ಅಂಗಳದಲ್ಲಿ ನಿಂತು ಮೊಮ್ಮಗಳನ್ನು ಬರಸೆಳೆದುಕೊಂಡಳು. ಹಿಂದೆ ಅವಳ ಬೆನ್ನಿಗೆ ಅಂಟಿಕೊಂಡೇ ಬೆಳೆದ ಪುಟ್ಟ ಹೆಣ್ಣು ಮಗು ಅಮ್ಮಿ ಈ ದಿನ ಮೈ ನೆರೆದ ಹುಡುಗಿ. ಅದು ತನ್ನದೇ ಮಾಂಸದೊಂದು ತುಣುಕು—ತನ್ನ ಮಗನ ಅಂಶ. ಅಮ್ಮಿಗೂ ಅಷ್ಟೇ. ವರ್ಷ ವರ್ಷಗಳು ಉರುಳಿದರೂ ಬಾಗದೆ ನಿಂತಿದ್ದ ಅಜ್ಜಿಯ ಬಲಶಾಲಿ ದೇಹ ಅವಳಿಗೊಂದು ಆಧಾರ ಸ್ತಂಭವಾಗಿತ್ತು, ಅದನ್ನು ಆತುಕೊಂಡು ಅವಳು ಮನದಣಿಯೆ ಅತ್ತಳು.

ಕಿವಿ ಮಾತು ಎನ್ನಿಸುವಂತಹ ಇಳಿದನಿಯಲ್ಲಿ ಅಜ್ಜಿ ಹೇಳಿದಳು :

"ನಿನ್ನ ಮದುವೆಗೆ ನಾನು ಬರಲೇ ಇಲ್ಲ ಮಗೂ...."

"ನನ್ನ ಮದುವೆ ಕತೆ ಮುಗೀತು ಅಜ್ಜೀ."

"ಕಂದಾ!"

"ಅಣ್ಣನ ಮದುವೆ ಹೊತ್ತಿಗಾದರೂ ಬಂದಿರಲ್ಲ ಅಜ್ಜಿ...."

"ಬಂದಿದೀನಿ ಚಿನ್ನಾ."

ಆ ಮುದುಕಿಯ ಸ್ವರ ಕಂಪಿಸಿ, ಕಣ್ಣುಗಳಲ್ಲಿ ಕಂಬನಿ ತುಂಬಿ, ಹನಿ ತೊಟ್ಟಿಕ್ಕಿತು. ಬದುಕಿನಲ್ಲಿ ಹಲವು ಸಹಸ್ರ ಬಾರಿ ಅತ್ತರೂ ಇಂಗದ ಅಳಲಿನ ಕಡಲು ಅವಳು.

ಅಮ್ಮಿಯ ಮಾವ ಕೈಕಾಲು ತೊಳೆದುಕೊಂಡರು. ಗಾಡಿಯವನನ್ನು ಕರೆದು ಅವನ ಎತ್ತುಗಳ ಉಸ್ತುವಾರಿಗೆ ಏರ್ಪಾಟುಮಾಡಿದರು. ಆ ಪುಟ್ಟ ಮನೆಯೊಳಗೆ ಬಂದು, ರಾಮಕೃಷ್ಣ ಹಾಸಿದ ಹೊಸ ಚಾಪೆಯ ಮೇಲೆ ಕುಳಿತರು. ಅವರ ಕಿರಿಯ ಮಗ ತಂದೆಯ ತೊಡೆಯ ಮೇಲೆ ತಲೆ ಇಟ್ಟು, ಮೈಗೆ ಮೈ ಆನಿಸಿ, ನಿದ್ದೆ ಹೋದ. ಹಿರಿಯ ಮಗನನ್ನು ಕಳೆದುಕೊಂಡಾಗ ಆದ ಗಾಯ ಇನ್ನೂ ಹಸುರಾಗಿತ್ತು. ಆ ಪುಟ್ಟ ಮನೆ, ತಾನು ಹಿಂದೆ ಇಲ್ಲಿಗೆ ಬಂದು ಸಂಬಂಧ ಬೆಳೆಸುವ ಮಾತನ್ನಾಡಿದ್ದು, ನಡೆದು ಹೋದ ಮದುವೆ....ಆ ನೆನಪುಗಳೂ ಹಸುರಾಗಿದ್ದುವು. ಅವರಿಗನಿಸುತಿತ್ತು : ತನಗಾದ ಅನ್ಯಾಯ, ಅಮ್ಮಿಯ ದುಃಖದೆದುರಲ್ಲಿ ಯಾವ ಲೆಕ್ಕ? ತನಗಾದರೋ ಬೇರೆ ಇಬ್ಬರು ಮಕ್ಕಳಿದ್ದಾರೆ. ಆದರೆ ಈ ಹುಡುಗಿ ಅಮ್ಮಿ? ಬದುಕೆಂದರೇನೆಂಬುದನ್ನು ಕಂಡು ಕೇಳಿ ಅನುಭವಿಸಿ ತಿಳಿಯುವ ಮೊದಲೇ ಮಣ್ಣಿನ ಗಡಿಗೆಯ ಹಾಗೆ ಅವಳ ಭವಿತವ್ಯ ಒಡೆದು ಹೋಯಿತಲ್ಲ?

ಹೊರಗೆ ಅಂಗಳದಲ್ಲಿ ಅಜ್ಜಿ ಮೊಮ್ಮಗಳ ಮಾತು ಕತೆ ನಡೆದೇ ಇತ್ತು.

"ಇದೆಲ್ಲ ಭಗವಂತನ ಮಾಯೆ, ಅಮ್ಮಿ. ಇಲ್ಲದೇ ಇದ್ದರೆ ನನ್ನಂಥ ಮುದುಕಿಗೆ ಮಾರಿ ರೋಗವೂ ಬರದೆ, ಎಳೇ ಕಸುಗಾಯಿಗಳನ್ನೇ ದೇವರು ಬಲಿ ತಗೋತಾನೆಯೋ?"

"ನಾನೂ ಸತ್ತಿದ್ದರೆ ಅಜ್ಜಿ?"

"ಹಾಗನ್ಬಾರ್ದು ಚಿನ್ನಾ. ಅದೆಲ್ಲಾ ನಾವು ಹೇಳಿದ ಹಾಗೆ ಆಗುತ್ತೆ?"

ರಾಮಕೃಷ್ಣ ಬಂದು ಮೆಲ್ಲನೆಂದ :

"ಸರ್‍ಹೋಯ್ತು! ಏಳು ಅಮ್ಮಿ. ಅಳೋದಕ್ಕೂ ಒಂದು ಮಿತಿ ಮೇರೆ ಬೇಡವೆ? ಕೈಕಾಲು ತೊಳಕೊಂಡು ಒಳಗ್ಹೋಗು. ಏಳಜ್ಜಿ ನೀನೂ."

ಅಜ್ಜಿ ಮೊಮ್ಮಗಳು ಎದ್ದರು.

ಅಣ್ಣ ಹೇಳಿದ :

"ಅಡುಗೆ ಏನ್ಮಾಡ್ತೀಯೋ ನೋಡು ಅಮ್ಮಿ. ರಾತ್ರೆ ಬಹಳ ಹೊತ್ತಾಯ್ತು-ಬರೇ ಅನ್ನ ಸಾರು ಸಾಕು ಅಂತಾರೆ ಮಾವ."

ಮಾವ ಸ್ನಾನ ಮಾಡಿ ಪೂಜೆಗೆ ಕುಳಿತರು.

ಆ ಬಳಿಕ ಊಟ.

ಎಲ್ಲರೂ ಮಲಗಿಕೊಂಡರು. ಆದರೆ ಅಜ್ಜಿ ಮೊಮ್ಮಗಳಿಗೆ ನಿದ್ದೆ ಬರಲಿಲ್ಲ. ಹೊರ ಜಗಲಿಯಲ್ಲಿ ಇಬ್ಬರೂ ಜತೆಯಾಗಿಯೇ ಮಲಗಿ, ಬೆಳಕು ಹರಿಯುವವರೆಗೂ ಮಾತನಾಡು ತ್ತಲೇ ಇದ್ದರು. ಆ ಅಜ್ಜಿಗಾದರೂ ಜೀವನದಲ್ಲಿ ಸುಖವಿತ್ತೆ ?

"ಸುಖ ಅನ್ನೋದು ಎಲ್ಲಿದೆ ಅಮ್ಮಿ? ಎಲ್ಲೂ ಇಲ್ಲ. ಸುಖ ಅನ್ನೋ ಮಾತಿಗೆ ಅರ್ಥವೇ ಇಲ್ಲ. ಮಕ್ಕಳ ಮನೆ ಅಂತ ಆ ಊರಿಂದ ಈ ಊರಿಗೆ ಬಂದೆ. ಈ ಊರಿಂದ ಆ ಊರಿಗೆ ಹೋದೆ. ಬಾಣಂತಿತನ ನೋಡ್ದೆ. ಮಕ್ಕಳ್ನ ಆಡಿಸ್ದೆ. ಏನೋ ಮಾತು ಏನೋ ವಿರಸ. ಮನಸ್ಸಿಗೆ ಬೇಸರ. ಆಮೇಲೆ ಬಾಳೆಮಣ್ಣೂರಿಗೆ ಬಂದು ಈ ಕೆಂಪು ಸೀರೆ ಬಾವುಟ ಊರಿದೆ. ದೇವಸ್ಥಾನ ಇದೆ, ಮಠ ಇದೆ, ದೇವರ ಸೇವೆ ಮಾಡ್ಕೊಂಡು ಇದ್ಬಿಡೋಣಾಂತ...."

"ನೀನು ಪುಣ್ಯವಂತೆ ಅಜ್ಜಿ."

"ಎಂಥಾ ಮಾತು ಹೇಳ್ತೀಯಾ ಬಿಡು. ಪುಣ್ಯವಂತೆ!—"

ಸಂಭಾಷಣೆ ಹರಿಯುತ್ತಿತ್ತು ಹಾಗೆಯೇ. ಹೂಂಗುಟ್ಟುತ್ತಲಿದ್ದ ಅಮ್ಮಿ ಸ್ವರ ತಗ್ಗಿಸಿ ತಗ್ಗಿಸಿ ಕೊನೆಗೆ ನಿದ್ದೆ ಹೋದಳು. ಅಜ್ಜಿಯೂ "ಪರಮಾತ್ಮ" ಎಂದು ಉದ್ಗಾರವೆತ್ತುತ್ತ. ಬಾಯಿ ಆಕಳಿಸಿ, ಚಿಟಿಕೆ ಬಾರಿಸಿ, ಕಣ್ಣು ಮುಚ್ಚಿಕೊಂಡಳು.

ಆದರೆ ಅಷ್ಟರಲ್ಲಿ ಕೋಳಿ ಕೂಗಿತು. ಆಕಾಶದಲ್ಲಿ ಬೆಳ್ಳಿ ಮೂಡಿತು. ಎಲ್ಲರಿಗಿಂತ ಮೊದಲಾಗಿ ಎದ್ದು ರಾಮಕೃಷ್ಣ ಹೊರಬಂದು ತಿರುಗಾಡುತ್ತ, ದೇವರ ಸ್ತೋತ್ರದ ಶ್ಲೋಕ ಗಳನ್ನು ಗುಣುಗುಣಿಸಿದ.

—ರಾಮಕೃಷ್ಣ ನೋಡಲು ಸುಂದರವಾಗಿದ್ದ, ತಂಗಿಯ ಹಾಗೆಯೇ. ಬಾಲ ಮೀಸೆ ಕುಡಿಯೊಡೆಯುತ್ತಿದ್ದ ಆ ಮುಖ ತೇಜಸ್ವಿಯಾಗಿತ್ತು. ಎಳೆತನದಲ್ಲೇ ಅನಿವಾರ್ಯವಾಗಿ ಹೊರಬೇಕಾಗಿ ಬಂದ ಬದುಕಿನ ಭಾರ ಆತನ ನಿಲುವಿಗೆ ಗಾಂಭೀರ್ಯದ ಒಪ್ಪವಿಟ್ಟಿತ್ತು. ಅವ ನನ್ನು ಅಳಿಯನಾಗಿ ಒಪ್ಪಿಕೊಳ್ಳಲು ಸಿದ್ಧರಿದ್ದ ಮಾವಂದಿರಿಗೆ ಕೊರತೆ ಇರಲಿಲ್ಲ. ಆತನಿಗೆ ಬೀಜ ಬಿತ್ತಿ ಬೆಳೆ ತೆಗೆಯಬಹುದಾದ ಒಂದಿಷ್ಟು ಹೊಲವಿತ್ತೆಂದ ಮೇಲೆ, ಅದು ಎಲ್ಲರ ದೃಷ್ಟಿಯಲ್ಲೂ 'ಒಳ್ಳೆಯ ಸಂಬಂಧ'ವೇ. ತಾಯ್ತಂದೆಯರ ಅಕಾಲ ಮರಣದಂತಹ ಘೋರ ನಷ್ಟವನ್ನೂ ಸಹಿಸಿ ಆತ ಸ್ವಾವಲಂಬಿಯಾಗಿ ಬೆಳೆದನೆಂಬ ವಿಷಯ ಅವನ ಬಗೆಗೆ ಕನಿಕರದೊಡನೆ ಮೆಚ್ಚುಗೆಯನ್ನೂ ಗಳಿಸಿತ್ತು. ವಯಸ್ಸು ಹದಿನೆಂಟೇ ಆದರೂ 'ಹುಡುಗ ಬುದ್ಧಿ' 'ಎಳೆ ನಿಂಬೇಕಾಯಿ' ಎಂದು ಯಾರೂ ರಾಮಕೃಷ್ಣನನ್ನು ದುರ್ಲಕ್ಷ್ಯ ಮಾಡುತ್ತಿರ ಲಿಲ್ಲ.

ಇನ್ನಷ್ಟು ದಿನ ಒಂಟಿಯಾಗಿರಬೇಕೆಂದು ರಾಮಕೃಷ್ಣ ನಿರ್ಧರಿಸಿದ್ದ. ಆದರೆ ಅಮ್ಮಿಯ ವೈಧವ್ಯ ಆ ನಿರ್ಧಾರ ಬದಲಾಗಲು ಕಾರಣವಾಯಿತು. ಮದುವೆಯ ಮಾತನ್ನು ಪದೇ ಪದೇ ಆಡುತ್ತಿದ್ದ ಆ ಹಳ್ಳಿಯ ಸದ್ಗೃಹಸ್ಥರಾದ ಶಾನುಭೋಗರು ಸಮೀಪದ ಹಳ್ಳಿ

ಯಿಂದೊಂದು ಹೆಣ್ಣು ಗೊತ್ತು ಮಾಡಿದರು. ರಾಮಕೃಷ್ಣನೂ ವಧುಪರೀಕ್ಷೆಯ ಶಾಸ್ತ್ರ ಮುಗಿಸಿದ. ಹನ್ನೆರಡು ದಾಟಿತ್ತು ಆ ಹುಡುಗಿಗೆ. ವಯಸ್ಸಿಗೆ ಬಂದಳೆಂದು ಅವಳ ತಂದೆ ತಾಯಿ ಮುಂದಿನ ಏರ್ಪಾಟಿಗಾಗಿ ಚಡಪಡಿಸುತ್ತಿದ್ದರು. ಮದುವೆ ಗೊತ್ತಾದಾಗ ಅವರ ಮೇಲಿದ್ದ ಹೊರೆ ಇಳಿಯಿತು. ವಧುವಿನ ಕಡೆಯವರು ವಿವಾಹದ ಸಿದ್ಧತೆ ನಡೆಸಿದರು.

ಶ್ಲೋಕಗಳನ್ನು ಯಾಂತ್ರಿಕವಾಗಿ ಉಚ್ಚರಿಸುತ್ತಿದ್ದರೂ ರಾಮಕೃಷ್ಣ ಅದೊಂದು ದಿನ ಬಿಟ್ಟು ಬುಧವಾರ ಬೆಳಗ್ಗೆ ಹೊರಡಬೇಕಾದ ದಿಬ್ಬಣದ ಯೋಚನೆ ಮಾಡುತ್ತಿದ್ದ. ವಾದ್ಯ ದವರಿಗೆ ಹೇಳಿಯಾಗಿತ್ತು. ಶಾನುಭೋಗರಂತೂ ತಮ್ಮ ಮನೆಯ ಗಾಡಿಯನ್ನು ಕಟ್ಟಿಸು ವುದು ಖಂಡಿತ. ಜತೆಯಲ್ಲೇ ರಾಯನಪಳ್ಳಿಯಿಂದ ಬಂದ ಗಾಡಿಯನ್ನೂ ಕಟ್ಟಿಸಿದ ರಾಯಿತು....

ಕೆಮ್ಮಿದ ಸದ್ದು ಕೇಳಿ ರಾಮಕೃಷ್ಣ ಹಿಂತಿರುಗಿ ನೋಡಿದ. ಅಮ್ಮಿಯ ಮಾವ ಎದ್ದು ಹೊರಬಂದಿದ್ದರು.

" ಏನು ರಾಮೂ ಇಷ್ಟು ಬೇಗ ಎದ್ದೆ ? "

" ಎಚ್ಚರವಾಯಿತು. ಎದ್ಬಿಟ್ಟೆ."

ಅವರಿಗೆ ನಗು ಬಂತು. " ಅಲ್ಲವೆ ಪಾಪ! ಯಾರಿಗೆ ನಿದ್ದೆ ಬರುತ್ತೆ ಹೇಳು ? "

ರಾಮಕೃಷ್ಣ ನಾಚಿದ. ಏನು ಉತ್ತರ ಹೇಳಬೇಕೆಂಬುದು ಅವನಿಗೆ ತೋಚಲಿಲ್ಲ.

ಆದರೆ ಆ ಮಾವ ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಅವರ ತುಟಿಗಳ ಮೇಲಿನ ನಗು ಹಾಗೆಯೇ ನಿಂತಿತ್ತು. ಮೂವತ್ತು ವರ್ಷಗಳಿಗೆ ಹಿಂದೆಯೊಮ್ಮೆ ಅಂಥದೇ ದಿನ ಅವರೂ ಅದೇ ರೀತಿ ಮಾಡಿರಲಿಲ್ಲವೆ ? ಆಗ ಅವರ ತಂದೆ ಎದ್ದು ಬಂದು, " ಹುಚ್ಚಪ್ಪಾ, ಒಳಗ್ಹೋಗಿ ಮಲಕೋ " ಎಂದು ನಗುತ್ತ ಗದರಿಸಿರಲಿಲ್ಲವೆ ?

ಪ್ರಕೃತಿಯ ಮೌನಕ್ಕೆ ಭಂಗ ಉಂಟಾಗದ ಹಾಗೆ ಬಲು ಮೆಲ್ಲನೆ ರಾಮಕೃಷ್ಣ ಹೇಳಿದ :

" ನಿದ್ದೆ ಬಂತೆ ಮಾವಯ್ಯ ? "

" ಚೆನ್ನಾಗಿ ಬಂತು. ಕೈಕಾಲು ತೊಳಕೊಂಡು ಹೋಗೋಣಾಂತ ಎದ್ದೆ."

ಹಾಗೆ ಹೇಳಿ ಅವರು 'ಕೈಕಾಲು ತೊಳೆದುಕೊಂಡು' ಹೋದರು. ಹೋಗುತ್ತಾ " ಮಲಕೋತಿಯೋ ಅಥ್ವಾ ಸುತ್ತಾಡ್ಕೊಂಡು ಬರ್‍ತೀಯೋ ? " ಎಂದು ಕೇಳಿದರು.

" ಬಂದೆ. ನೀವು ಹೋಗಿ ಮಾವಯ್ಯ."

ಬರುವೆನೆಂದರೂ ಆತ ಮತ್ತೆ ಒಳಹೋಗಲಿಲ್ಲ. ಯಾವು ಯಾವುದೋ ಹಾಡುಗಳಿಂದ ಅಲ್ಲೊಂದು ಇಲ್ಲೊಂದು ಚರಣವನ್ನು ಸ್ಮರಿಸಿಕೊಳ್ಳುತ್ತ, ಸ್ವಲ್ಪ ಗಟ್ಟಿಯಾಗಿಯೇ ಉಚ್ಚರಿ ಸುತ್ತ, ಬಾವಿಯಿಂದ ನೀರು ಸೇದಿ ಸೇದಿ ಬಾಳೆಯ ಗಿಡಗಳಿಗೆ ಸುರಿದ. ಹಂಡೆಗೆ ನೀರು ತುಂಬಿಸಿ ಬಚ್ಚಲೊಲೆಗೆ ಉರಿಹಾಕಿದ. ತಣ್ಣನೆಯ ಗಾಳಿ ಬೀಸಿತು. ಒಲೆಯ ಎದುರಲ್ಲೇ ಕುಳಿತು ಮೈಕಾಯಿಸುತ್ತ, ಬೆಂಕಿಯ ಬಣ್ಣ ಬಣ್ಣದ ನಾಲಗೆಗಳನ್ನು ದಿಟ್ಟಿಸಿದ,

ಅಷ್ಟರಲ್ಲಿ ಅಜ್ಜಿ ಬಚ್ಚಲ ಬಳಿಗೆ ಬಂದಳು. ಮೇಲೆ ತಿಂಗಳ ಬೆಳಕು. ಎದುರಲ್ಲಿ ಬೆಂಕಿಯ ಜ್ವಾಲೆ ದೂರದಿಂದ, ಪೂರ್ವದಿಂದ, ಬರುತ್ತಿದ್ದ ಮಸಕು ಮಸಕಾದ ಅರುಣ ರಶ್ಮಿ. ಅವುಗಳ ನಡುವೆ ಆ ಅಜ್ಜಿ ಮುದ್ದುಮುದ್ದಾಗಿ ಕಂಡಳು. ವಾಸ್ತವವಾಗಿ, ಆಗ ಪ್ರತಿ ಯೊಂದು ವಸ್ತುವೂ ಸುಂದರವಾಗಿಯೇ ತೋರುತ್ತಿತ್ತು, ರಾಮಕೃಷ್ಣನಿಗೆ.

ಪ್ರೀತಿಯೇ ಮಾತಿನ ರೂಪು ತಳೆದು ಬಂದ ಹಾಗೆ ಅವನು ಮಾತನಾಡಿದ :

"ಯಾಕಜ್ಜಿ, ಇಷ್ಟು ಬೇಗ ಎದ್ದದ್ದು ?"

ಅಜ್ಜಿ ಅವನ ಬಳಿಯಲ್ಲಿ ಕುಳಿತಳು.

"ಬೇಗ್ನೆ ಏಳೋಕೂ ನಿನ್ನ ಒಪ್ಗೆ ಬೇಕೇನೋ ರಾಮು? ಆಗ್ಹೋಯ್ತು! ನಾಳೆ ಮಹಾರಾಣಿ ಬರ್‍ತಾಳಲ್ಲಾ, ಅವಳಿಗೆ ಹೇಳು ಈ ಮಾತ್ನ. ಖುಷಿಯಾಗಿ ಸೂರ್ಯ ನೆತ್ತಿ ಮೇಲೆ ಬರೋವರ್‍ಗೂ ಗೊರಕೆ ಹೊಡೀಲಿ!"

ರಾಮಕೃಷ್ಣ ಹಿ—ಹ್ಹಿ ಎಂದು ನಕ್ಕ. ಅಜ್ಜಿಯು ಮೊಣಕಾಲನ್ನು ತನ್ನ ಕೈಗಳಿಂದ ಆವರಿಸಿ, ಮೊಣಗಂಟಿನ ಮೇಲೆ ಮುಖವಿರಿಸಿ, ಆಕೆಯು ಕಣ್ಣುಗಳನ್ನೆ ಮೊಮ್ಮಗ ದಿಟ್ಟಿಸಿದ. ಮತ್ತೊಮ್ಮೆ ಮಗುವಾಗಿ ಅಜ್ಜಿಯ ಬೆನ್ನೇರುವ ಬಯಕೆಯಾಯಿತು ಅವನಿಗೆ. ರಾಮಕೃಷ್ಣ ನಲ್ಲಿ ತನ್ನ ಮಗನ ಪ್ರತಿ ಮೂರ್ತಿಯನ್ನು ಕಾಣುತ್ತ ಆ ವೃದ್ಧೆ ಆತನ ತಲೆಗೂದಲ ಮೇಲೆ ಕೈಯಾಡಿಸಿದಳು. "ಜಾಣ, ನನ್ಮಗು ಜಾಣ," ಎಂದಳು.

ಬೆಳಕು ಹರಿದ ಮೇಲೆ ಎಲ್ಲರಿಗಿಂತ ತಡವಾಗಿ ಎದ್ದವಳು ಅಮ್ಮಿ. ಎಚ್ಚರವಾದಾಗ ಪಿಳಿಪಿಳಿ ಕಣ್ಣು ಬಿಟ್ಟು ಛಾವಣಿಯನ್ನು ನೋಡಿದಳು. ಒಂದೆರಡು ಕಡೆ ಬೆಳಕು ಒಳಬರು ತ್ತಿತ್ತು. ಆ ಬೆಳಕು ಹೇಗೆ ಬಂತೆಂಬುದೇ ಅವಳಿಗೆ ಅರ್ಥವಾಗಲಿಲ್ಲ. ಆದರೆ ಮರುಕ್ಷಣವೆ ಸಮಸ್ಯೆ ಬಗೆಹರಿಯಿತು. ಹೆಚ್ಚು ಕಡಿಮೆ ಮೂರು ವರ್ಷಗಳ ಕಾಲ ತಾನು ದಿಟ್ಟಿಸಿ ನೋಡುತ್ತಿದ್ದ ಛಾವಣಿ ಅದಾಗಿರಲಿಲ್ಲ. ಇದು ಅತ್ತೆಯ ಮನೆಯಾಗಿರಲಿಲ್ಲ. ಅವಳ ಮನೆ ಯಾಗಿತ್ತು. ಅವಳು ಹುಟ್ಟಿ ಬಂದು ಮೊದಲ ಬಾರಿ ಲೋಕದ ಬೆಳಕನ್ನು ಕಂಡಿದ್ದ ಮನೆ...... ಹಾಗೆ ಮಾಡನ್ನೆ ದಿಟ್ಟಿಸುತ್ತ ಮಲಗಿರುವುದು ಎಷ್ಟೊಂದು ಸುಖಕರ! ಏಳಲೇ ಬೇಡವೆನಿಸಿತು ಅವಳಿಗೆ. ಆದರೆ ತಾನು ಇಲ್ಲಿಗೆ ಬಂದಿರುವ ಉದ್ದೇಶ? ಓ! ಇನ್ನೊಂದೇ ದಿನ ಕಳೆದ ರಾಯಿತು. ನಾಳೆ ದಿಬ್ಬಣ!...ಒಮ್ಮೆಲೆ ಅಣ್ಣನನ್ನು ನೋಡುವ ಬಯಕೆಯಾಯಿತು ಅಮ್ಮಿಗೆ. ಅವಳು ಎದ್ದಳು. ಬಿಚ್ಚಿ ಕೆದರಿದ್ದ ತಲೆಗೂದಲನ್ನು ಹಿಡಿಹಿಡಿದು ಕಟ್ಟಿದಳು. ಅದೇನೂ ನಡುವಿನಿಂದ ಕೆಳಕ್ಕಿಳಿದ ನೀಳವಾದ ಕೇಶರಾಶಿಯಾಗಿರಲಿಲ್ಲ. ದೊರಗು ದೊರ ಗಾದ ಸುರುಳಿ ಸುರುಳಿಯಾದ ಕೂದಲ ಗೊಂಚಲಿನಂತಿತ್ತು...ಅದನ್ನು ಮುಟ್ಟುತ್ತಲಿದ್ದಂತೆ ಅವಳ ಮುಖ ಬಾಡಿತು. ಇನ್ನು ಆ ಹಣೆ. ಅಲ್ಲಿ ಇನ್ನೆಂದೂ ಕುಂಕುಮದ ಬೊಟ್ಟಿಡ ಬಾರದು. ಮೂಗುಬಟ್ಟನ್ನು ಕಳೆದುಕೊಂಡಿದ್ದ ಬರಿಮೂಗು....ಆ ತೂತು....ರೆಕ್ಕೆ ಬಿಚ್ಚಿ ಅದೇ ಆಗ ಹಾರತೊಡಗಿದ ಅವಳ ಹೃದಯ ಹಕ್ಕಿ ಬಲ್ಲೋನೆಯಂತೆ ಸುರಿದ ನೆನಪುಗಳ ಮಳೆಯಲ್ಲಿ ತೋಯ್ದು ಮುದುಡಿತು.

"ಅಮ್ಮೀ," ಎಂದು ಅಜ್ಜಿ ಕರೆದಳು.

ಇನ್ನು ಅತ್ತೆಯ ಸ್ವರವಿಲ್ಲ. ಮಮತೆಯಿಂದ ತನ್ನನ್ನು ಕಂಡ ಆ ಅತ್ತೆಯನ್ನು ಇನ್ನು ಎಂದಾದರೂ ಅವಳು ಕಾಣುವಳೋ ಇಲ್ಲವೋ.

"ಬಂದೆ ಅಜ್ಜೀ...."

ಅಮ್ಮಿ ಮುಖ ತೊಳೆದು ಬಂದಾಗ ಅಜ್ಜಿ ಎಂದಳು :

"ಕಾವೇರಿ ನಿನ್ನೆ ಬಂದಿದ್ಲು ಕಣೇ. ನೀನು ಬರೋದು ಅವಳಿಗೆ ಗೊತ್ತು. ಬೆಳಿಗ್ಗೆ ಬರ್‍ತೀನಿ ಅಂದ್ಲು."

ಕಾವೇರಿ ಶಾನುಭೋಗರ ಮಗಳು. ಅಮ್ಮಿಗಿಂತ ವಯಸ್ಸಿನಲ್ಲಿ ಒಂದು ವರ್ಷ ಚಿಕ್ಕವಳು. ಅಮ್ಮಿಯ ಮದುವೆಗೆ ಸ್ವಲ್ಪ ಮುಂಚಿತವಾಗಿ ಆವಳ ಮದುವೆಯಾಗಿತ್ತು. ಕೈಹಿಡಿದವನು ಮನೆಯಳಿಯನೇ. ಋತುಮತಿಯಾದ ಕಾವೇರಿ ತಾಯ್ಮನೆಯಲ್ಲೆ ಗೃಹಿಣಿಯಾಗಿದ್ದಳು.

ಅಲ್ಲಿ ಅವಳು ಸುಖಿ.

ಅಣ್ಣ ರಾಮಕೃಷ್ಣ ನೊಂದ ಸ್ವರದಲ್ಲಿ ಹೇಳಿದ :

"ಇದೇನೆ ಈ ಅಳುಮೋರೆ ಅಮ್ಮಿ ? ಮುಟ್ಟಿದರೆ ಸಾಕು ಕಣ್ಣೀರು ಸೋರೋ ಹಾಗಿದೆಯಲ್ಲೇ...ನೋಡಮ್ಮ. ಇದೊಂದೂ ಚೆನ್ನಾಗಿಲ್ಲ. ಬಂದೋರ ಮುಂದೆಲ್ಲಾ ನೀನು ಅಳ್ತಾ ಕೂತರೆ ಸಹಿಸೋಕಾಗಲ್ಲ ನನ್ನಿಂದ."

"ಇಲ್ಲಣ್ಣ. ಅಳೋದಿಲ್ಲ."

"ಜಾಣೆ, ಯಾಕಳ್ತಾಳೆ...ಅತ್ತರೇನು, ಹೋದ ಭಾಗ್ಯ ವಾಪಸು ಬರುತ್ಯೆ ?"

—ಅಜ್ಜಿಯ ಆ ಮಾತು ಪೂರೈಸುವುದರೊಳಗೇ ಅಮ್ಮಿಯ ಕೆನ್ನೆಗಳ ಮೇಲೆ ಕಣ್ಣೀರ ಧಾರೆಗಳು ಕ್ಷಣಕಾಲ ಮೂಡಿ ಮಾಯವಾದುವು. ನಿಟ್ಟುಸಿರುಬಿಟ್ಟು ಅಮ್ಮಿ ಚೇತರಿಸಿಕೊಂಡಳು.

ಆಗಲೆ, ಗಾಡಿ ಇಳಿಬಿಟ್ಟಿದ್ದ ಜಾಗಕ್ಕೆ ಹೋಗಿಬಂದ ಅಮ್ಮಿಯ ಮಾವ, "ಇವತ್ತು ನಾಳೆ ಮಳೆ ಬರೋದನ್ನೇ ನೆಲ ಕಾದು ನಿಂತ ಹಾಗಿದೆ," ಎಂದರು.

"ಹೌದು ಮಾವಯ್ಯ, ಊರಹೊರಗಿನ ಕೆರೆಯ ನೀರು ಬತ್ತಿಯೇ ಹೋಗಿದೆ. ಹೊಲೆಯರ ಗೋಳು ಕೇಳಬೇಡಿ," ಎಂದು ರಾಮಕೃಷ್ಣ ಹೇಳಿದ.

ಅಮ್ಮಿ ಸ್ನಾನಕ್ಕಿಳಿಯಬೇಕು ಎನ್ನುತ್ತಿದ್ದಾಗ ಕಾವೇರಿ ಬಂದಳು. ಬಾಲ್ಯದ ಒಡನಾಡಿಗಳು ಕಣ್ದಣಿಯೆ ಒಬ್ಬರನ್ನೊಬ್ಬರು ನೋಡಿದರು. ಅಮ್ಮಿ ಮುಗುಳುನಕ್ಕಳು. ಮೈ ತುಂಬಿದ್ದ ಕಾವೇರಿಯನ್ನಾಕೆ ಹಿಡಿದು ಮುಟ್ಟಿ ದಿಟ್ಟಿಸಿದಳು.

"ಚೆನ್ನಾಗಿದ್ದೀಯಾ ಕಾವೇರೂ ?" ಎಂದಳು.

ಕಾವೇರಿಯ ಬಾಯಿಯಿಂದ ಮಾತು ಸುಲಭವಾಗಿ ಹೊರಡಲಿಲ್ಲ. ಗೆಳತಿಯ ದುಃಖದಲ್ಲಿ ಸಹಭಾಗಿನಿಯಾಗಲು ಬಂದಿದ್ದಳಾಕೆ. ಪ್ರಯಾಸದಿಂದ, ಉಗುಳು ನುಂಗುತ್ತ, ಅವಳೆಂದಳು :

"ಚೆನ್ನಾಗಿದ್ದೀನಿ ಅಮ್ಮಿ."

ಆ ಮಾತಿನ ಜತೆಯಲ್ಲೆ, 'ನೀನು ಹೇಗಿದೀಯಾ ?' ಎಂದು ಅವಳು ಕೇಳಲಿಲ್ಲ. ಹಾಗೆ ಕೇಳಬೇಕೆಂದು ತೋರಲಿಲ್ಲ ಆಕೆಗೆ.

ಅಮ್ಮಿಯ ಮಾವ ಶಾನುಭೋಗರ ಮನೆಗೆ ಹೋಗಿ ಬಂದರು. ಮರುದಿನ ದಿಬ್ಬಣ ಹೊರಡಲು ಸಿದ್ಧತೆಗಳು ನಡೆದುವು. ಬಟ್ಟೆ ಬರೆ ಸಾಮಾನುಗಳನ್ನು ಉತ್ಸುಕತೆಯಿಂದ ಎಲ್ಲರೂ ಜೋಡಿಸಿಟ್ಟರು...ಹಿರಿಯಣ್ಣನ ಮರಣದ ಬಳಿಕ ತನ್ನ ತುಂಟತನವೆಲ್ಲವನ್ನೂ ಮರೆತಿದ್ದ ರಂಗ ಬೆಳಿಗ್ಗೆ ಸ್ವಲ್ಪ ಹೊತ್ತಿನೊಳಗಾಗಿಯೇ ಅಜ್ಜಿಯ ಬೆನ್ನಿಗೆ ಅಂಟಿಕೊಂಡ. ಅಮ್ಮಿ ಎಷ್ಟೋ ಕಾಲದ ಮೇಲೆ ನಗಲು ಮತ್ತೊಮ್ಮೆ ಕಲಿಯುತ್ತಾ, "ನೀನು ಇಲ್ಲೇ ಇದ್ಬಿಡು ರಂಗಣ್ಣ. ಅಜ್ಜಿ ಜತೇಲಿ ಇಲ್ಲೇ ಇದ್ಬಿಡು," ಎಂದಳು. ಆಕೆಗೆ ದೊರೆತುದು, "ಅಜ್ಜೀನ ನಮ್ಮೂರಿಗೇ ಕರಕೊಂಡು ಹೋಗ್ತೀನಿ" ಎಂಬ ರಂಗನ ಉತ್ತರ.

ಕರಕೊಂಡು ಹೋಗುವುದು… ಅಮ್ಮಿಯ ಪಾಲಿಗಾದರೋ, ಕರಕೊಂಡು ಹೋಗುವವರು ಯಾರೂ ಇರಲಿಲ್ಲ.

ಓಡಾಟ ಮಾತು ನಗೆ ಕೆಲಸಗಳ ನಡುವಿನಲ್ಲೂ, ಅಕ್ಕಿಯೊಳಗಿನ ಪುಡಿಕಲ್ಲಿನ ಹಾಗೆ, ಕಹಿ ನೆನಪು ಅಮ್ಮಿಯನ್ನು ಬಾಧಿಸಿತು.

ಊಟವಾಗಿ ಹೊತ್ತು ತಿರುಗಿದ ಮೇಲೆ ರಾಮಕೃಷ್ಣ ಹೊರ ಹೊರಟ.

"ನಾಳೆ ಸ್ನೇಹಿತರು ಯಾರು ಯಾರು ಬರ್‍ತಾರೋ ನೋಡ್ಕೊಂಡು ಬರ್‍ತೀನಿ," ಎಂದ.

"ಇವತ್ತು ಚಂದ್ರ ಮೂಡೋದು ನಾಲ್ಕು ಘಳಿಗೆಗೆ. ಬೇಗನೆ ಬಂದ್ಬಿಡು ರಾಮೂ. ಹರಟೆ ಹೊಡೀತಾ ನಿಂತ್ಕೋ ಬೇಡ. ಹೊತ್ತು ಕಂತೋಕ್ಮುಂಚೇನೇ ಬಂದ್ಬಿಡಪ್ಪ," ಎಂದಳು ಅಜ್ಜಿ.

"ಓಹೋ. ಬಂದ್ಬಿಡ್ತೀನಿ."

ರಾಮಕೃಷ್ಣ ಅಂಗಳಕ್ಕಿಳಿದ. ಅಮ್ಮಿ ಅವನನ್ನು ಹಿಂಬಾಲಿಸಿ ನಾಲ್ಕು ಹೆಜ್ಜೆ ಬಂದಳು.

"ಅಣ್ಣ—ನಾಳೆ ಇಷ್ಟೊತ್ಗೆ—"

ಅವನ ಮುಖ ಕೆಂಪಗಾಯಿತು.

"ಹೋಗೇ ಹೋಗೇ."

"ಮದುವೆ ಮಂಟಪ!"

"ಅಮ್ಮಿ! ಸುಮ್ನಿರ್‍ತಾರ್‍ದೇನೆ?"

"ಓ! ಈಗ್ಲೇ ಇಷ್ಟು ಜಂಭ!"

"ಹೀ—"

"ಇನ್ನು ಅತ್ತಿಗೆ ಬಂದ್ಮೇಲೆ ಯಾರೊ ನನ್ನನ್ನು ಕೇಳೋರು?"

ಪ್ರೀತಿಯ ಆ ಮಾತುಗಳಿಂದ ಅಣ್ಣನ ಮುಖವರಳಿತು. ಆದರೂ ಕೋಪದ ನಟನೆ ಮಾಡುತ್ತ "ಹೊಡೀತೀನಿ ನೋಡು" ಎಂದು ಕೈಯೆತ್ತಿದ.

ಅಜ್ಜಿ ಒಳಗಿನಿಂದಲೇ, "ಏನೋ ಅದು ಗಲಾಟೆ?" ಎಂದು ನಗುತ್ತ ಕೇಳಿದಳು.

"ನೋಡಜ್ಜೀ ಹೊಡೀತಾನೆ" ಎಂದು ರಾಗವೆಳೆದಳು ಅಮ್ಮಿ, ದೂರು ಕೊಡುತ್ತಾ.

ಅಜ್ಜಿ ಹೊರ ಬಂದು ಆಡಬಹುದಾದ ನಗೆ ಮಾತುಗಳನ್ನು ಕಲ್ಪಿಸಿಕೊಳ್ಳುತ್ತ, ರಾಮಕೃಷ್ಣ ನಸುನಗುತ್ತ ಹೊಲದ ಅಂಚನ್ನೇರಿ ಬೇಗ ಬೇಗನೆ ನಡೆದು ಹೋದ.

ಊಟವಾದ ಬಳಿಕ ಅಮ್ಮಿಯು ಮಾವ ಬಲು ಹೊತ್ತಿನವರೆಗೆ ನಿದ್ದೆ ಹೋದರು. ಅಮ್ಮಿ ಕ್ಷಣವೂ ಸುಮ್ಮನಿರಲಿಲ್ಲ. ಆ ಮೂರು ವರ್ಷಗಳ ಕಾಲ ಒಂಟಿ ಬಾಳ್ವೆ ನಡೆಸಿದ್ದ ಅಣ್ಣನ ಕೈಯಲ್ಲಿ ಅವರ ಮನೆ ಒಪ್ಪ ಓರಣವಿಲ್ಲದೆ ಅಂದಗೆಟ್ಟಿತ್ತು. ಮದುವೆಯಾದ ಮೇಲೆ ಆದಷ್ಟು ಬೇಗನೆ ಬರಲಿದ್ದ ಅತ್ತಿಗೆಯನ್ನು ಮನಸಿನಲ್ಲೇ ಅಮ್ಮಿ ಚಿತ್ರಿಸಿಕೊಂಡಳು, ಅಣ್ಣ ಅತ್ತಿಗೆಯೊಡನೆ ಸುಖವಾಗಿ ಸಂಸಾರ ಮಾಡುವುದನ್ನು ಕಣ್ತುಂಬ ನೋಡಬೇಕೆಂಬುದೇ ಅವಳ ಈಗಿನ ಬಯಕೆ. ಆ ಸಂಸಾರವನ್ನು ಸುಖಮಯ ಮಾಡಲು ತಾನು ನೆರವಾಗಬೇಕೆಂಬುದೇ ಅವಳ ಆಸೆ. ಅದನ್ನು ಈಡೇರಿಸಲು ಮೊದಲ ಹೆಜ್ಜೆ ಎಂಬಂತೆ ಅಮ್ಮಿ ಮನೆಯ ಒಳ ಹೊರಗನ್ನು ಸಾರಿಸಿ ಗುಡಿಸಿ ಚೊಕ್ಕಟಗೊಳಿಸಿದಳು.

ಬೆಳಿಗ್ಗೆ ಗೆಳತಿಯನ್ನು ಕಾಣಲು ಬಂದಾಗ ಕಾವೇರಿ ಕೇಳಿದ್ದಳು :

" ನೀನಿನ್ನು ಇಲ್ಲೇ ಇರ್ತಿಯಂತೆ, ಹೌದೆ ? "

" ಇರ್ತೀನಿ."

" ಮೊನ್ನೆ ನಮ್ಮನೇಗೆ ಬಂದಿದ್ದಾಗ ಹಾಗೆ ಹೇಳಿದ್ನಂತೆ ನಿಮ್ಮಣ್ಣ."

" ಹೌದು. ಅಲ್ಲಿ ಇನ್ನು ಯಾಕಿರ್ಬೇಕು ಹೇಳು ? "

" ನೀನು ಇಲ್ಲೇ ಇರ್ತೀಂತ ಕೇಳಿ ನನಗೆಷ್ಟು ಖುಷಿಯಾಯ್ತೂಂತ ! "

ಅಮ್ಮಿ ಸ್ವಲ್ಪ ಹೊತ್ತು ಮೌನವಾಗಿದ್ದಳು ಆಗ. ಆಕೆಗೆ ಸ್ವತಃ ಖುಷಿಯಾಗಿತ್ತೋ ಇಲ್ಲವೋ. ಆದರೆ ಜೀವನ ಆ ಘಟ್ಟವನ್ನು ಬಂದು ಮುಟ್ಟಿತ್ತು.

ಅಂಗಳ ಸಾರಿಸುತ್ತಿದ್ದಾಗ ಅಮ್ಮಿಗೆ ಒಂದೇ ಸಮನೆ ಅತ್ತೆಯ ಮನೆಯು ನೆನಪಾಯಿತು. ಆಕೆ ರಂಗನನ್ನು ಕರೆದಳು.

" ರಂಗಣ್ಣ, ಇಲ್ಲಿ ಬಾ,"

ಅಜ್ಜಿಗೆ ಅಂಟಿ ಕುಳಿತಿದ್ದ ರಂಗ ಉತ್ತರವಿತ್ತ.

" ಊಹೂಂ ಬರಲ್ಲ."

" ಅತ್ತಿಗೆ ಕರೆದರೆ ಒಲ್ಲೆ ಅನ್ಬಾರದು ಮರೀ. ಹೋಗೋ," ಎಂದು ಅಜ್ಜಿಯೇ ರಂಗನನ್ನು ಒಪ್ಪಿಸಿ ಒಳಗಿಂದ ಕಳುಹಿದಳು.

" ನಾಣೇನೂ ಬರ್ಬೇಕಾಗಿತ್ತು ಅಲ್ವಾ ? " ಎಂದಳು ಅಮ್ಮಿ.

ರಂಗ ಅಲ್ಲಿ ಬಿದ್ದಿದ್ದ ಮರದ ಕೊರಡಿನ ಮೇಲೆ ಕುಳಿತು, " ಹೂಂ " ಎಂದ.

" ನಾನಿನ್ನು ಊರಿಗೆ ಬರಲ್ಲ, ರಂಗ."

" ಯಾಕಮ್ಮೀ ? "

ಸಲಿಗೆಯ ಆ ಸ್ವರದಲ್ಲಿದ್ದ ಕಾತರವನ್ನು ಅಮ್ಮಿ ಗುರುತಿಸಿಕೊಂಡಳು. ಅವಳಿಗೆ ಸಮಾಧಾನವಾಯಿತು.

" ನಾನು ಇಲ್ಲೇ ಇರ್ತೀನಿ."

ರಂಗ ಉತ್ತರವೀಯಲಿಲ್ಲ. ಅವನ ಮುಖ ಬಾಡಿತು.

" ಯಾಕಮ್ಮೀ ? "

" ಅತ್ತಿಗೆ ಮನೆಗೆ ಬರೋವರ್ಗೂ ಅಣ್ಣ ಒಬ್ನೇ ಇರೋಕಾಗುತ್ತಾ ? ಅಲ್ದೆ... ಆಮೇಲೂ ಅಷ್ಟೆ...ನಾನು ಅವರ್ಜತೇಲಿ ಇರೋದು ಬೇಡ್ವಾ ? "

ರಂಗ ಮೌನವಾಗಿದ್ದ. ಅವನ ಯೋಚನೆ ಎಲ್ಲಿಂದೆಲ್ಲಿಗೋ ಹರಿಯುತ್ತಿತ್ತು. ಆತ ಹೇಳಿದ :

" ನಿಮ್ಮಣ್ಣ ತುಂಬಾ ಒಳ್ಳೇವನು ಅಮ್ಮೀ."

" ಹೂಂ ? " ಎಂದಳು ಅಮ್ಮಿ ಅಭಿಮಾನದಿಂದ.

" ನಮ್ಮಣ್ಣನ ಹಾಗೆ, ಅಲ್ವಾ ? "

ಅಮ್ಮಿಯ ಕಣ್ಣಿನ ಕಟ್ಟೆಯೊಡೆಯಿತು. ಅಳಬಾರದೆಂದು ಮಾಡಿದ ನಿರ್ಧಾರ ಘಳಿಗೆ ಘಳಿಗೆಗೂ ಮಣ್ಣುಗೂಡುತ್ತಿತ್ತಲ್ಲ ?

ಪೊರಕೆಯನ್ನು ಝಾಡಿಸಿ, " ಥೂ ! ಕಸ ! ಕಸ ! " ಎನ್ನುತ್ತಾ ಅಮ್ಮಿ ಸೆರಗಿನ ತುದಿಯಿಂದ ಕಣ್ಣೊರೆಸಿಕೊಂಡಳು.

ವ್ಯಾಕುಲಗೊಂಡು ರಂಗ ಕೇಳಿದ :

“ ಏನಮ್ಮೀ ಕಣ್ಣಿಗೆ ಕಸ ಬಿತ್ತೆ ? ”

“ ಹೂಂ ಕಣೋ.”

“ ಅಜ್ಜೀನಾ ಕೂಗ್ಲಾ ? ”

“ ಬೇಡ ಬೇಡ...”

...ಮಾವ ಎದ್ದು ಬಂದವರು ಸೊಸೆಯ ಕೆಲಸ ನೋಡಿದರು. ಅವರಿಗೆ ತಿಳಿಯದಂತೆಯೇ ನಿಟ್ಟುಸಿರೊಂದು ಹೊರಬಿತ್ತು. ಚಿನ್ನದಂತಹ ಸೊಸೆ. ಮುಖ್ಯ, ತಾವು ಭಾಗ್ಯವಂತರಲ್ಲ...

ಅವರ ಆ ಯೋಚನೆಗಳನ್ನು ಬದಿಗೊತ್ತಲು ನೆರವಾಗುವಂತೆ ರಂಗ ಕೇಳಿದ :

“ ಗಾಡಿಯವನು ಎತ್ತುಗಳಿಗೆ ಹುರುಳಿ ತಿನ್ಸಿದ್ನಾ ಅಪ್ಪಯ್ಯ ? ”

“ ಹೂಂ.”

“ ಹುಲ್ಲು—ನೀರು ? ”

“ ಅದೂನೂ. ಯಾಕೆ—ಎತ್ತುಗಳನ್ನು ನೋಡಿಕೊಂಡು ಬರ್ಬೇಕೇನು ? ನಡಿ, ಅಂಗಿ ಹಾಕ್ಕೊ.”

ಹಾಗೆ, ಬೇಗನೇ ಬರುವುದಾಗಿ ಹೇಳಿ ಮಾವ ರಂಗನನ್ನು ಕರೆದುಕೊಂಡು ಹೋದರು...

...ಅವರು ಹೇಳಿದಂತೆಯೇ ಬೇಗನೆ ಬಂದರು.

ಆದರೆ ರಾಮಕೃಷ್ಣ ಬರಲಿಲ್ಲ.

ಮುಚ್ಚಂಜೆಯಾಯಿತು, ಹೊತ್ತು ಕಂತಿ ಕತ್ತಲಾಯಿತು. ಆದರೂ ರಾಮಕೃಷ್ಣನ ಸುಳಿವಿಲ್ಲ. ಮಾವಯ್ಯ ಅಜ್ಜಿಯನ್ನು ಕೇಳಿದರು. ಅಜ್ಜಿ ಅಮ್ಮಿಯನ್ನು ಕೇಳಿದಳು. ಅಮ್ಮಿ ಮತ್ತೆ ಮತ್ತೆ “ ಬೇಗ್ಬರ್ತೀನಿ ಅಂದಿದ್ದ,” ಎಂಬ ಮಂತ್ರವನ್ನೇ ಜಪಿಸಿದಳು.

“ ಸ್ನೇಹಿತರ ಜತೇಲಿ ಮಾತಾಡ್ತಾ ನಿಂತನೇನೊ ? ” ಎಂದರು ಮಾವ.

“ ಅವನು ಯಾವಾಗಲೂ ಅಷ್ಟೆ. ಹೇಳಿದ ಹೊತ್ತಿಗೆ ಯಾವತ್ತೂ ಬಂದೋನಲ್ಲ,” ಎಂದು ಅಜ್ಜಿ ಸಮಾಧಾನಗೊಳಿಸುವ ಮಾತನ್ನಾಡಿದಳು. ತನಗೆ ಬೆಂಬಲ ದೊರೆಯಲೆಂದು ಅಜ್ಜಿ ಮೊಮ್ಮಗಳತ್ತ ತಿರುಗಿ, “ ಅಲ್ವೆ ಅಮ್ಮಿ ? ” ಎಂದಳು.

ಅಮ್ಮಿ ಹೌದೆನ್ನಲೂ ಇಲ್ಲ ; ಅಲ್ಲವೆನ್ನಲೂ ಇಲ್ಲ. ಅವಳ ನೋಟ ಅಂಗಳದಾಚೆಗೆ ಕತ್ತಲೆಯನ್ನು ಸೀಳಿಕೊಂಡು ದೂರ ದೂರ ಸಂಚರಿಸಲು ಯತ್ನಿಸುತ್ತಿತ್ತು. ಎಲ್ಲಿರಬಹುದು ತನ್ನಣ್ಣ ? ಕಾವೇರಿಯ ಮನೆಯಲ್ಲೆ ? ಗೌಡರ ಮನೆಯಲ್ಲೆ ? ಎಲ್ಲಿ ? ಎಲ್ಲಿ ? ಆಕೆಯ ಹೃದಯ ಡವಡವನೆ ಹೊಡೆದುಕೊಳ್ಳುತ್ತ ಕ್ಷಣಕ್ಷಣವೂ ಕೇಳುತಿತ್ತು—ಎಲ್ಲಿ ? ಎಲ್ಲಿ ?

ಬಹಳ ಹೊತ್ತು ಆಕೆಗೆ ಉತ್ತರ ದೊರೆಯಲಿಲ್ಲ.

ಕೊನೆಗೆ ಉತ್ತರ ರೂಪವಾಗಿ ಆತನೇ ಬಂದ.

ಆದರೆ ಬಂದ ಆ ರೀತಿ—?

“ ಅಮ್ಮೀ ! ಅಜ್ಜೀ ! ಅಮ್ಮೀ ! ”

ಗುರುತಿಸುವುದು ಕಷ್ಟವೆನಿಸುವಷ್ಟು ಮಾರ್ಪಾಟು ಹೊಂದಿದ್ದ ರಾಮಕೃಷ್ಣನ ಸ್ವರ.

“ ಅಮ್ಮೀ ! ಅಜ್ಜೀ ! ಅಮ್ಮೀ ! ಅಯ್ಯೋ ! ”

ಆ ' ಅಯ್ಯೋ ' ಪ್ರತಿಧ್ವನಿಸಿತು, ಬಲು ಕರ್ಕಶವಾಗಿ.

ಅಮ್ಮಿ ಧಿಗ್ಗನೆದ್ದು ಅಂಗಳಕ್ಕೆ ಹಾರಿದಳು. ಅಜ್ಜಿ ಎಡವಿ ಎದ್ದು ಓಡುತ್ತ ಬಂದಳು. ಮಾವ ಕಂದೀಲನ್ನೆತ್ತಿಕೊಂಡು ಹೊರಬಂದರು. ರಂಗ ದಿಗ್ಭ್ರಮೆಗೊಂಡು ಅಳತೊಡಗಿದ.

ರಾಮಕೃಷ್ಣ ಮೇಲುಸಿರು ಬಿಡುತ್ತ ಏದುತ್ತ ತುಳಸಿಕಟ್ಟೆಯ ಬಳಿ ಬಿದ್ದುಬಿಟ್ಟ.

ಕರುಳು ಕಿತ್ತು ಬರುವ ಹಾಗೆ " ಅಯ್ಯಯ್ಯೋ ! " ಎಂದು ಕಿರಿಚಿ ದೊಡ್ಡಧ್ವನಿ ತೆಗೆದು ಅಳುತ್ತಾ ಅಮ್ಮಿ ಅಣ್ಣನನ್ನು ಎದೆಗವಚಿಕೊಂಡಳು. ಆತ ಬೆರಳು ಸಂಜ್ಞೆಯಿಂದ ಬಲಗಾಲಿನ ಮೀನ ಖಂಡದತ್ತ ಬೊಟ್ಟು ಮಾಡಿದ. ಮಾವಯ್ಯ ಅದರ ಬಳಿ ಕಂದೀಲು ಹಿಡಿದರು. " ಏನಾಯ್ತಪ್ಪಾ ನನ್ನ ಮಗೂಗೆ ? " ಎನ್ನುತ್ತ ಅಜ್ಜಿ ಬಾಗಿ ನೋಡಿದಳು. ಅಲ್ಲೊಂದು ಗಾಯವಾಗಿ ನೆತ್ತರಿನ ಧಾರೆ ಕೆಳಕ್ಕಿಳಿಯುತ್ತಿತ್ತು. ಗಾಯದ ಸುತ್ತಲೂ ಬಣ್ಣ ನೀಲಿ ಹಸುರಿಗೆ ತಿರುಗಿತ್ತು.

ತಡೆದು ತಡೆದು ರಾಮಕೃಷ್ಣ ಹೇಳುತ್ತಿದ್ದ :

" ಹಾವು...ಕಚ್ಬಿಡ್ತು...ಕಾಲ್ನಿಂದ ಝಾಡಿಸ್ದೆ ಓಡ್ಬಂದೆ...ಇಲ್ಲೇ ಕೆಳಕ್ಕೆ."

ಅಲ್ಲೇ ಅಂಗಳದ ಕೆಳಗೆ ಹೊಲದ ಅಂಚಿನಲ್ಲಿ ಹಾವು ಕಾದು ಕುಳಿತು ಮದುವಣಿಗನಿಗೆ ಸ್ವಾಗತ ಬಯಸಿತ್ತು.

ರಂಗ-ಅಮ್ಮಿಯರ ರೋದನವನ್ನು ತಡೆಯಲೆಂದು ಮಾವ ಹೇಳಿದರು :

" ಅಳಬೇಡಿ. ಅಳಬೇಡಿ. ಅಪಾಯವೇನೂ ಇಲ್ಲ...ಅದು ವಿಷದ ಹಾವಲ್ಲ."

ತಾನು ಹೇಳುತ್ತಿರುವುದು ಸುಳ್ಳು ಎಂಬುದು ಗೊತ್ತಿದ್ದೂ ಅವರು ಹಾಗೆಂದರು. ರಾಮಕೃಷ್ಣನ ಮುಖದ ಮೇಲೆ ಮಾತ್ರ ನೋವಿನ ನಗೆಯೊಂದು ಮಿಂಚಿತು. ಅದು " ನಿಜ ವನ್ನು ನಾನು ಬಲ್ಲೆ " ಎಂದು ಸೂಚಿಸುವ ನಗೆ.

ಮಾವ, ತಾನು ಮಾತನಾಡುತ್ತಿದ್ದಂತೆಯೇ ಉಟ್ಟಿದ್ದ ಪಂಚೆ ಹರಿದು, ಗಾಯದ ಮೇಲಕ್ಕೂ ಕೆಳಕ್ಕೂ ಬಿಗಿದು ಕಟ್ಟಿದರು. ತೊಡೆಗೂ ಬಿಗಿದರು. ಹಾಗೆ ಮಾಡುತ್ತ ಅವರೆಂದರು:

" ಇಲ್ಲಿ ಸಮೀಪ್ದಲ್ಲೇ ಯಾರೂ ಇಲ್ವೆ ? "

" ಮುನಿಯಾ ಅಂತ ಕೂಗೀಪ್ಪಾ. ಆ ಹೊಲೆಯರೋನು ಬರ್ತಾನೆ." ಎಂದಳು ಅಜ್ಜಿ.

ಮಾವ, " ಮುನಿಯಾ ! " ಎಂದು ಮೂರು ನಾಲ್ಕು ಸಾರೆ ಗಟ್ಟಿಯಾಗಿ ಕೂಗಿದರು. ಆದರೆ ಮುನಿಯನಿಗಾಗಲೇ ಅಮ್ಮಿಯ ರೋದನ ಅಪಾಯದ ಸಂದೇಶ ತಲಪಿಸಿತ್ತು. ಯಾರಿಗೇನಾಯಿತೆಂದು ತಿಳಿಯದಿದ್ದರೂ ಆತ ತಾಳೆಯ ಗರಿಯ ಸೂಡರು ಬೀಸಿಕೊಂಡು ಓಡಿಬಂದ.

" ಹಾವು ! " ಎಂದರು ಮಾವ : " ಇಲ್ಲಿ ವಿಷದ ಔಷಧಿಯೋರು ಯಾರಿದಾರಪ್ಪಾ ? "

ಆ ಆಘಾತದ ಎದುರಲ್ಲೂ ಅಜ್ಜಿಯ ಯೋಚನಾಶಕ್ತಿ ಕುಂಠಿತವಾಗಿರಲಿಲ್ಲ. ಅವಳೆಂದಳು : " ಆ ಘಟ್ಟದ ಕೆಳಗಿನ ಶೀನಪ್ಪ ಹಳ್ಳೀಲಿದಾನೇನೋ ಮುನಿಯ ? "

" ಓ ! ಅವ್ರೆ."

" ಕರ್ಕೊಂಡ್ಬಾಪ್ಪ...ಬಿರ್ರನೆ ಹೋಗು," ಎಂದರು ಮಾವ ; " ಮನೆ ಹಿಂದ್ಗಡೆಯಿಂದ ಹಾಸಿ ಹೋಗಪ್ಪಾ, " ಎಂದೂ ಹೇಳಿದರು.

ಸ್ವಲ್ಪ ಹೊತ್ತಿಗೆ ಅಳು ನಿಂತಿತು. ರಾಮಕೃಷ್ಣ ನೋವು ಸಹಿಸಲಾರದೆ ನರಳುತ್ತಿದ್ದ.

ಅವನ ನೀಳವಾದ ದೇಹ ಗಾಯಗೊಂಡ ಹಾವಿನಂತೆ ಬಳುಕಿ ಮೈಮುರಿಯುತ್ತಿತ್ತು.

ಅರ್ಧ ಘಂಟೆಯ ಹೊತ್ತು ಬಲು ಪ್ರಯಾಸದಿಂದ ಕಳೆಯಿತು. ಹಳ್ಳಿಯ ನಾಲ್ಕು ಮೂಲೆಗಳಿಂದ ದೀಪಗಳ ಮೆರವಣಿಗೆ ಬಂತು...ಕಂದೀಲು...ತಾಳೆಗರಿಯ ಸೂಡರು...ಬಡಿಗೆ ದೊಣ್ಣೆ. ಮಾತುಗಳೆಲ್ಲ ಒಂದರಲ್ಲೊಂದು ಬೆರೆತು ಅಸ್ಪಷ್ಟವಾದ ಸ್ವರ ಹೊರಟು ವಾತಾವರಣವನ್ನೆ ಕಲಕಿತು. ಸ್ವಲ್ಪ ಹೊತ್ತಿನಲ್ಲೇ ಅಮ್ಮಿಯ ಮನೆಯಂಗಳದ ತುಂಬ ಜನ ನೆರೆದರು. ಎಲ್ಲರೂ ಮಾತನಾಡುವವರೇ—ಎಲ್ಲರೂ ಸಲಹೆ ಕೊಡುವವರೇ.

ಅಮ್ಮಿಯ ರೋದನವೊಂದೇ ಹೃದಯ ಭೇದಕವಾಗಿ ಪ್ರತಿಸ್ಪರ್ಧಿ ಇಲ್ಲದೆ ಮೊರೆಯಿತು.

"ನಮ್ಮಣ್ಣನ್ನ ಬದುಕ್ಸೀಪ್ಪಾ! ನಮ್ಮಣ್ಣನ್ನ ಬದುಕ್ಸೀ!"

ಮಾಡಬೇಕಾದ್ದನ್ನೆಲ್ಲ ಮಾಡಿದರು. ಘಟ್ಟದ ಕೆಳಗಿನ ಶೀನಪ್ಪ ಅಮೆಯ ನಡಿಗೆಯಿಂದ ಕಾರ್ಯೋನ್ಮುಖನಾದ. ಅವನು ತಂದ ಹಸುರೆಲೆಗಳನ್ನು ಅರೆದು ಒಬ್ಬರು ರಸ ತೆಗೆದರು. ಅವನ ಸೂಚನೆಯಂತೆ ಇನ್ನೊಬ್ಬರು ಹಾವು ಕಚ್ಚಿದ ಜಾಗಕ್ಕೆ ಉರಿಯುವ ಕೆಂಡವನ್ನಿಟ್ಟರು. ಶೀನಪ್ಪ ತನ್ನದೇ ಆದ ವಿಚಿತ್ರ ಮಂತ್ರೋಚ್ಚಾರಣೆಯನ್ನೂ ನಡೆಸಿದ. ಕೆಂಡದಿಂದ ಸುಟ್ಟ ಮೇಲೆ, ರಸವನ್ನು ಸುರಿದುದಾಯಿತು. ರಾಮಕೃಷ್ಣ ಸಾವಿನೊಡನೆ ಸೆಣಸಾಡಿದ. ನಿಶ್ಚಲನಾಗಿ ಅವನನ್ನು ಅಂಗಾತ ಮಲಗಿಸಲು ನಾಲ್ವರ ಸಾಮರ್ಥ್ಯ ಬೇಕಾಯಿತು.

ಹಾವು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಬಡಿಗೆ ದೊಣ್ಣೆ ತಂದವರು ತಮ್ಮ ಸಿದ್ಧತೆ ವ್ಯರ್ಥವಾಯಿತೆಂದರು.

ಯಾರೋ ಒಬ್ಬರಿಂದ ಮಾತು ಬಂತು.

"ಸರ್ಪ ಹೌದೋ ಅಲ್ಲವೋ! ಎಂಥ ಹಾವು ಕಚ್ಚಿದರೂ ರಕ್ತ ಬರುತ್ತೆ."

ಚಂದ್ರೋದಯವಾಯಿತು. ಅಷ್ಟರಲ್ಲೆ, ರಾಮಕೃಷ್ಣ ಚಡಪಡಿಸುತ್ತಿದ್ದಂತೆ, ಶೀನಪ್ಪ ಮಂತ್ರೋಚ್ಚಾರಣೆಯ ಧ್ವನಿಯನ್ನೂ ವೇಗವನ್ನೂ ಹೆಚ್ಚಿಸಿದ. "ಈಗ್ನೋಡಿ. ಇನ್ನೈದ್ನಿಮಿಷದೊಳಗೆ ವಿಷವೆಲ್ಲ ಹೊರಗೆ ಬಂದ್ಬಿಡ್ತದೆ," ಎಂದ.

ಅಷ್ಟರಲ್ಲೆ ಬಲು ಶುಭ್ರವಾದ ದೊಡ್ಡ ಕಂದೀಲು ಬಂತು—ಶಾನುಭೋಗರ ಮನೆಯ ಕಂದೀಲು. ಅದನ್ನು ಹೊತ್ತಿದ್ದ ಆಳಿನ ಹಿಂದೆ ಸ್ನಾನದ ಅಂಗವಸ್ತ್ರವನ್ನಷ್ಟೆ ಮೈಮೇಲೆ ಹಾಕಿಕೊಂಡಿದ್ದ ಶಾನುಭೋಗರು, ಹಿಂದಿನಿಂದ ಅವರ ಅಳಿಯ, ಅಳಿಯನ ಹಿಂದೆ ಮಗಳು ಕಾವೇರಿ.

ದೊಡ್ಡ ಕಂದೀಲನ್ನೂ ರಾಮಕೃಷ್ಣನ ಎದುರುಗಿಟ್ಟರು. ಆ ದೀಪವನ್ನು ನೋಡಿ ಅವನು ಮುಗುಳು ನಕ್ಕಂತೆ ತೋರಿತು. ಯಾರನ್ನೋ ಕರೆಯಲು ಅಪೇಕ್ಷಿಸಿದಂತೆ ಅವನ ಕೈ ಚಲಿಸಿತು.

ಶೀನಪ್ಪ ಮಂತ್ರೋಚ್ಚಾರಣೆಯನ್ನು ನಿಲ್ಲಿಸಿ ಮೌನವಾದ.

ರಾಮಕೃಷ್ಣನ ವಿವರ್ಣವಾಗಿದ್ದ ದೇಹದಿಂದ ಪ್ರಾಣವಾಯು ಹೊರಟುಹೋಯಿತು.

ಹಲವು ಕಂಠಗಳು "ಹಾ!" ಎಂದುವು.

"ಅಯ್ಯೋ!" ಎನ್ನುತ್ತ ಅಮ್ಮಿ ಮೂರ್ಛೆಹೋದಳು.

೫

ನೆರೆದಿದ್ದವರ ಶೈತ್ಯೋಪಚಾರದಿಂದ ಅಮ್ಮಿಗೆ ಬೇಗನೆ ಪ್ರಜ್ಞೆ ಮರಳಿ ಬಂತು. ಅವಳು ಕ್ಷೀಣ ಸ್ವರದಲ್ಲಿ ಬಡಬಡಿಸತೊಡಗಿದಳು :

" ಎಲ್ಲಿ ನನ್ನಣ್ಣ ? ಏನ್ಮಾಡಿದಿರಿ ನನ್ನಣ್ಣನ್ನ ? "

ಸತ್ತವರನ್ನು ಏನು ಮಾಡುತ್ತಾರೆ ? ಆದರೆ ಆ ಕೊನೆಯ ಹೆಜ್ಜೆಯನ್ನಿಡಲು ಯಾರೂ ಮುಂದಾಗಲಿಲ್ಲ. ಹಗಲೆಲ್ಲ ಉತ್ಸಾಹಿಯಾಗಿ ಓಡಾಡುತ್ತಿದ್ದ ಆ ಯುವಕ ನಾಳೆ ಆ ಹೊತ್ತಿಗೆ ವಧುವಿನ ಕೈಹಿಡಿಯಬೇಕಾಗಿದ್ದ ಮದುವಣಿಗ, ನಿಜವಾಗಿಯೂ ಸತ್ತನೆಂದು ನಂಬಲು ಯಾರೂ ಸಿದ್ಧರಿರಲಿಲ್ಲ.

ಅಮ್ಮಿಯ ಮಾವ ಜಗಲಿಯ ಮೇಲೆ ಕುಳಿತವರು ಕುಳಿತೇ ಇದ್ದರು. ಮಗುವಿನಂತೆ ನಾಲ್ಕು ನಿಮಿಷ ಅವರು ಬಿಕ್ಕಿ ಬಿಕ್ಕಿ ಅತ್ತರು. ವಿಧಿಯ ಕ್ರೌರ್ಯ ಇದನ್ನು ಮೀರಿಸುವುದು ಸಾಧ್ಯವೇ ? ಯಾಕೆ ಹೀಗಾಗಬೇಕು ? ಯಾಕೆ ? ಆ ಮಕ್ಕಳು ಮಾಡಿದ ತಪ್ಪೇನು ?... ಅವರು ಆ ಪ್ರಶ್ನೆಗಳನ್ನು ಪುನಃ ಪುನಃ ಮೌನವಾಗಿಯೂ ಕೇಳುತ್ತಿದ್ದರು, ಗಟ್ಟಿಯಾಗಿಯೂ ಕೇಳುತ್ತಿದ್ದರು.

ಅವರನ್ನು ಸಂತೈಸುವ, ಅಮ್ಮಿಯನ್ನು ಆಜ್ಜಿಯನ್ನು—ಎಲ್ಲರನ್ನೂ ಸಂತೈಸುವ ಜವಾಬ್ದಾರಿ ಶಾನುಭೋಗರ ಮೇಲೆ ಬಿತ್ತು. ನಡೆದ ಘಟನೆಯಿಂದ ಸ್ವತಃ ದಿಗ್ಮೂಢರಾಗಿದ್ದ ಅವರು ಚೇತರಿಸಿಕೊಳ್ಳುತ್ತ, ಮುಂದಿನ ಯೋಚನೆ ಮಾಡಿದರು.

ರಾಮಕೃಷ್ಣನನ್ನು ಬೀಳ್ಕೊಡುವ ಸಿದ್ಧತೆಯ ಮಾತು ಬಂದೊಡನೆ ಅಜ್ಜಿ ಮತ್ತೊಮ್ಮೆ ಗೋಳಾಡಿದಳು :

" ಸರಿಯಾಗಿ ನೋಡೀಪ್ಪಾ...ಮಗೂಗೆ ಎಚ್ಚರವಾಯ್ತೋ ಏನೋ...ನೋಡೀಪ್ಪಾ ಇನ್ನೊಂದ್ಸಾರಿ."

ಅಜ್ಜಿಯ ಸ್ವರ ಕೇಳಿ ಅಮ್ಮಿ ಕೂಗಾಡಿದಳು. ಅಮ್ಮಿಯ ಆರೈಕೆ ಮಾಡುತ್ತಿದ್ದ ಕಾವೇರಿ ಕಣ್ಣೀರು ಕರೆದಳು.

ಯಾರು ಅತ್ತರೇನು ? ಆಗುವ ಕೊನೆಯ ಕೆಲಸ ಆಗಿಯೇ ತೀರಬೇಕು. ರಾಮಕೃಷ್ಣನದೆಂದು ಗುರುತಿಸುವಂತೆ ಉಳಿದಿದ್ದ ದೇಹವನ್ನು ಲೋಕದ ಕಣ್ಣಿನಿಂದ ಮರೆಮಾಡುವ ಕೆಲಸವಾಗಬೇಕು.

ಏರ್ಪಾಟುಗಳಾದ ಮೇಲೆ ಸ್ಮಶಾನ ಯಾತ್ರೆ. ಮಸಣದ ಮನೆಯಾಗಿ ಮಾರ್ಪಟ್ಟಿದ್ದ ಮದುವೆಯ ಮನೆಯಿಂದ ತಿಂಗಳ ಬೆಳಕಿನಲ್ಲಿ ಅವರು ನಡೆದರು. ಅಳಿದವನ ರಕ್ತಸಂಬಂಧಿಯಾಗಿ ಉಳಿದಿದ್ದ ಒಬ್ಬಳೇ ಒಬ್ಬಳು, ಅಮ್ಮಿ, ಅಣ್ಣನ ಚಿತೆಗೆ ಬೆಂಕಿ ಇರಿಸಿದಳು. ಅಳುತ್ತಲೇ ಇದ್ದ ಆ ತಂಗಿ ಒಮ್ಮೆಲೆ ಸುಮ್ಮನಾದಳು. ಔಡುಗಚ್ಚಿ ಮೌನವಾಗಿ, ಅಣ್ಣನ ದೇಹ ಅಗ್ನಿಗೆ ಆಹುತಿಯಾಗುತ್ತಿದ್ದುದನ್ನು ನೋಡಿದಳು. ಆಕೆಯ ತಲೆಗೂದಲು ಕೆದರಿ ಕಣ್ಣು ಬೆನ್ನು ಭುಜಗಳ ಮೇಲೆ ಬಿದ್ದಿತ್ತು. ಕಡೆದ ಅಮೃತಶಿಲೆಯಂತಿದ್ದ ಆ ಮುಖ ಬೆಳಕಿನಲ್ಲಿ ಮಿನುಗುತ್ತಿತ್ತು.

ಆ ಬಳಿಕ ಅಮ್ಮಿ ನೆರೆದಿದ್ದವರಿಗೆ ಯಾವ ತೊಂದರೆಯನ್ನೂ ಕೊಡಲಿಲ್ಲ. ಅವರು ಸ್ಮಶಾನದಿಂದ ಹೊರಟಾಗ ಆಕೆಯೂ ಹೊರಟಳು. ಅವಳನ್ನು ಸಮಾಧಾನಪಡಿಸುವುದು ಬಲು ಕಷ್ಟವಾಗಬಹುದೆಂದು ಭಾವಿಸಿದ್ದ ಶಾನುಭೋಗರಿಗೆ, ಆಕೆಯ ಮಾವನಿಗೆ, ಆಶ್ಚರ್ಯ ವಾಗದಿರಲಿಲ್ಲ.

ಹಾದಿಯಲ್ಲಿ ಅಮ್ಮಿ ಒಂದು ಮಾತು ಅಂದಳು :

"ಅಣ್ಣ ಇವತ್ತೇ ಸತ್ತದ್ದು ಒಳ್ಳೆಯದಾಯಿತು, ಅಲ್ವಾ ಮಾವ ?"

ಮಾವ, 'ಹಾಗನ್ಬಾರದು' ಎಂದು ಹೇಳಲು ಬಾಯಿತೆರೆದರು. ಆದರೆ ಮಾತು ಹೊರಡಲಿಲ್ಲ. ಎಂತಹ ಮಾತನ್ನು ಆಡಿದ್ದಳು ಆ ಹುಡುಗಿ! ಶಾನುಭೋಗರಿಗೆ ಅದು ಅರ್ಥ ವಾಯಿತು. ಬೇರೆ ಕೆಲವರಿಗೆ ಕೂಡಾ. ಅದನ್ನು ಕೇಳಿ ಅರ್ಥಮಾಡಿಕೊಂಡವರೆಲ್ಲ ಮೂಕ ರಾದರು.

'ಇವತ್ತು ಸಾಯುವ ಬದಲು ಇನ್ನೆರಡು ದಿನಗಳ ಬಳಿಕ ಅಣ್ಣ ಸತ್ತಿದ್ದರೆ?' ಆಗ ಆ ಸಾವು ಮತ್ತಷ್ಟು ಕ್ರೂರವಾಗುತ್ತಿತ್ತು. ಅವನು ಕೈಹಿಡಿದು ತನ್ನ ಅತ್ತಿಗೆಯಾಗಿ ಬರಲಿದ್ದ ಆ ಹುಡುಗಿ—

...ಮನೆಯಲ್ಲಿ ಅಜ್ಜಿ ಕಲ್ಲು ಬೊಂಬೆಯ ಹಾಗೆ ಒಂದು ಮೂಲೆಯಲ್ಲಿ ಕುಳಿತಿದ್ದಳು. ಅಂಗಳಕ್ಕೆ ಬರುತ್ತ ಅಮ್ಮಿ ಎಂದಳು :

"ಎಲ್ಲಾ ಆಗ್ಹೋಯ್ತು ಅಜ್ಜಿ. ಅಣ್ಣ ಹೊರಟ್ಹೋದ."

...ಒಬ್ಬೊಬ್ಬರಾಗಿ ಹಳ್ಳಿಯವರು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಮಗಳು ಮತ್ತು ಅಳಿಯನನ್ನು ಹಿಂದೆಯೇ ಕಳುಹಿಕೊಟ್ಟಿದ್ದ ಶಾನುಭೋಗರೊಬ್ಬರು ಮತ್ತೂ ಸ್ವಲ್ಪ ಹೊತ್ತು ಕುಳಿತರು.

"ನಾಳೆ ದಿವಸ ವಧುವಿನ ಕಡೆಯವರಿಗೆ ಸುದ್ದಿ ತಿಳಿಸ್ಬೇಕು, ಅಲ್ವೆ ?"

"ಹೌದು," ಎಂದರು ಅಮ್ಮಿಯ ಮಾವ.

"ನೀವು ಪ್ರಯಾಣ ಬೆಳೆಸೋದು ಯಾವತ್ತು ?"

"ನಾಳೆ ಒಂದು ದಿವಸ ಇರ್ತೀನಿ."

ಸ್ವಲ್ಪ ಹೊತ್ತು ಮೌನವಾಗಿದ್ದು ಶಾನುಭೋಗರು ಪಿಸುಮಾತಿನಲ್ಲಿ ಕೇಳಿದರು :

"ಪಾಪ! ಆ ಮಗೂಗೆ ಇನ್ನು ಯಾರು ಗತಿ ?"

ಅದೇ ಸ್ವರದಲ್ಲಿ ಮಾವ ಉತ್ತರವಿತ್ತರು :

"ನನ್ನದೇನೂ ಅಭ್ಯಂತರ ಇಲ್ಲ ಇವರೆ. ಅಮ್ಮಿ ಬಂದರೆ ಕರಕೊಂಡು ಹೋಗ್ತೀನಿ."

ರಾಮಕೃಷ್ಣ ತೀರಿಹೋದ ಮೂರನೆಯ ದಿನ ಕಳೆದು ಮೂರನೆಯ ದಿನ ಬಂತು. ತಂದೆ ಮತ್ತು ಮಗ ರಾಯನಹಳ್ಳಿಗೆ ಹೋಗಲು ಹೊರಟು ನಿಂತರು. ಅಮ್ಮಿಯ ಮಾವ ಮತ್ತೊಮ್ಮೆ ಕೇಳಿ ನೋಡಿದರು. ಗಂಡನ ಮನೆಯಲ್ಲಿ ಆಕೆಗೆ ದೊರೆತಿದ್ದ ಹೆಸರು ಹಿಡಿದು ಕರೆದು ಕೇಳಿದರು :

"ಬರೋ ಹಾಗಿದ್ದರೆ ಬಂದುಬಿಡು ಬನಶಂಕರಿ. ನಿನ್ನ ಒಂದು ಜೀವ ನಮಗೆ ಯಾವ ಕಾಲಕ್ಕೂ ಹೆಚ್ಚಾಗೊಲ್ಲ. ಬರ್ತೀಯಾ? ಏನು ಹೇಳು."

"ಬೇಡಿ ಮಾವ. ನಿಮ್ಮ ಮಾತು ನನಗೆ ದೇವರ ಮಾತು ಇದ್ದ ಹಾಗೆ. ಆದರೆ

ಇದೊಂದು ಸಲ ಕ್ಷಮಿಸಿ. ಈ ಜನ್ಮದಲ್ಲಿ ಇನ್ನು ನನ್ನಿಂದಾಗಿ ಯಾರೂ ಎಂಥ ಮಾತೂ ಕೇಳಬಾರದು. ನನ್ನಿಂದಾಗಿ ಯಾರಿಗೂ ತೊಂದರೆಯಾಗಬಾರದು."

ಆ ಸ್ವರವನ್ನು ಗುರುತಿಸುವುದೇ ಆಕೆಯ ಮಾವನಿಗೆ ಕಷ್ಟವಾಯಿತು. ಮೂರು ವರ್ಷಗಳ ಹಿಂದೆ ಬೆರಗುಗಣ್ಣು ಬಿಡುತ್ತ ಕುಲುಕುಲು ನಗುತ್ತ ಸಂಕೋಚದ ಮುದ್ದೆಯಾಗಿ ಗಂಡನ ಮನೆಗೆ ಬಂದಿದ್ದ ಸೊಸೆಗೂ ಸ್ಥಿರವಾದ ಗಂಭೀರವಾದ ಸ್ವರದಿಂದ ಆತ್ಮ ವಿಶ್ವಾಸದ ಮಾತನ್ನಾಡುತ್ತಿದ್ದ ಈ ಸೊಸೆಗೂ ನಡುವೆ ಅಳೆಯಲಾಗದ ಅಂತರವಿದ್ದ ಹಾಗೆ ಅವರಿಗೆ ತೋರಿತು.

"ನಿನ್ನಿಷ್ಟ. ಇಲ್ಲೇ ಇರ್ತೀಯೇನು ಹಾಗಾದರೆ ?"

"ಇರ್ತೀನಿ. ಅಜ್ಜಿಗೂ ಯಾರೂ ದಿಕ್ಕಿಲ್ಲ. ಒಟ್ಟಿಗೆ ಇರ್ತೀವಿ."

"ಸರಿಯಮ್ಮ. ಯಾವತ್ತಾದರೊಮ್ಮೆ ಬಂದು ನೋಡ್ತೀನಿ. ನೀನೂ ಆಗಾಗ್ಗೆ ಬಂದರಾಯಿತು. ದೇವರು ನಿನಗೆ ಒಳ್ಳೇದು ಮಾಡಲಿ."

ಅಮ್ಮಿ ಮಾವನ ಪಾದ ಮುಟ್ಟಿ ನಮಸ್ಕರಿಸಿದಳು.

"ಯಾಕಮ್ಮ ? ಏಳು."

ಮಗನತ್ತ ನೋಡುತ್ತ ಅವರೆಂದರು :

"ನಡಿ ರಂಗ. ಅಕ್ಕ ಬರಲ್ವಂತೆ. ನಾವು ಹೋಗೋಣ."

ಅಕ್ಕನೊ - ಅತ್ತಿಗೆಯೊ—...ಆ ಹುಡುಗನೆಂದ :

"ಹಾಗಾದರೆ ನಾವು ಹೋಗ್ಬೇಕಾ ಅಮ್ಮಿ ?"

"ಹೋಗ್ಬನ್ನಿ ರಂಗಣ್ಣ."

ಮಾವ ಮಗನೊಡನೆ ಹೊಲಗಳನ್ನು ಹಾದು ನಡೆದು, ಗಾಡಿ ಬಿಟ್ಟಿದ್ದ ಜಾಗ ತಲಪಿ, ರಾಯನಹಳ್ಳಿಗೆ ಹೊರಟರು. ಅವರ ಮನಸ್ಸು ಮುದುಡಿತ್ತು. "ಎಷ್ಟು ವಿಸ್ಮಯಕರ ಈ ವಿಶ್ವ ! ಏನಾಗಬೇಕಿದ್ದುದು ಏನಾಗಿ ಹೋಯಿತು !"

ಮನೆ ಸೇರಿದಾಗ ಕೈಹಿಡಿದಾಕೆಯಿಂದ ಪ್ರಶ್ನೆ ಬರುವುದು : ಎಲ್ಲ ಸಾಂಗವಾಗಿ ಜರಗಿತೆ ? ಆಗ ತಾನು ಏನು ಉತ್ತರ ಕೊಡಬೇಕು ? ನಿಜ ಹೇಳಿದರೆ ಆಕೆ ನಂಬಬಹುದೆ ? ಯಾರಾದರೂ ನಂಬಬಹುದೆ ?

"ಅಣ್ಣ ಇವತ್ತೇ ಸತ್ತದ್ದು ಒಳ್ಳೇದಾಯಿತು" ಎಂದಿದ್ದಳು ಅಮ್ಮಿ. ಆ ಮಾತಿನ ಹಿಂದೆ ಎಂತಹ ನೋವು ಇದ್ದಿರಬೇಡ! ಹೆಣ್ಣಿನ ಸಂಕಟ ಹೆಣ್ಣೇ ಬಲ್ಲಳು. ಮದುವೆಯ ಬಳಿಕ ರಾಮಕೃಷ್ಣನಿಗೆ ಹಾವು ಕಡಿದು ಇನ್ನೊಂದು ಹೆಣ್ಣು ವಿಧವೆಯಾಗುವ ಸನ್ನಿವೇಶ... ಗಾಡಿ ಚಲಿಸಿತು. ಅವರು ಎಷ್ಟು ಬೀಳ್ಕೊಡಲು ಯತ್ನಿಸಿದರೂ ಆ ಯೋಚನೆಗಳು ಅವರ ಜತೆಯಲ್ಲೇ ಬಂದುವು.

...ಆಯಾಸವಾಯಿತೆಂದು ಮಲಗಿದ ಅಮ್ಮಿಗೆ ಏಳಬೇಕೆಂದೇ ತೋರಲಿಲ್ಲ. ಮೆಮಳು ಚಿಟ್ ಚಿಟಲೆನ್ನುತ್ತಿತ್ತು. ತಲೆ ನೋಯುತ್ತಿತ್ತು. ಹತ್ತು ಹಾದಿಗಳಿಂದ ಆಕಾಶವೇರುತ್ತಿದ್ದ ಯೋಚನೆಗಳೆಲ್ಲ ಮರಳಿ ಬರುತ್ತಿದ್ದುವು. ನೆಟ್ಟ ದೃಷ್ಟಿಯಿಂದ ನೋಡುತ್ತ ಮಲಗಿದಾಗ, ಯೋಚನೆಗಳು ಸ್ವಾಧೀನಕ್ಕೆ ಬಂದು ಮೆದುಳಿನ ಮಡಕೆಗಳಲ್ಲಿ ಮರೆಯಾದುವು. ಮೆಲ್ಲನೆ ಮಂಪರು ಬಂತು.

ಒಂದೆರಡು ಸಾರಿ ಅಜ್ಜಿ ಕರೆದರು ;

"ಅಮ್ಮೀ...ಅಮ್ಮೀ..."

"ಹೂಂ...ಹೂಂ..."

ಅಷ್ಟೆ. ಏಳಬಯಸಲಿಲ್ಲ ಅಮ್ಮಿ. ಮಗುವಿಗೆ ನಿದ್ದೆ ಬಂತೇನೋ ಎಂದು ಅಜ್ಜಿ ಗಟ್ಟಿಯಾಗಿ ಕರೆಯಲೂ ಇಲ್ಲ. ನಿದ್ದೆಯೂ ಅಲ್ಲದ ಎಚ್ಚರವೂ ಅಲ್ಲದ ಆ ಅವಸ್ಥೆ, ಹಾಗೆಯೇ ಸದಾ ಕಾಲವೂ ಇರಬೇಕು ಎಂದು ಅವಳ ಹೃದಯ ಬಯಸಿತು.

...ನೋವನ್ನು ಮರೆಯುವ ದಿವ್ಯೌಷಧಿಯಾದ ನಿದ್ದೆ. ನಿದ್ದೆಯ ಹೊದಿಕೆಯೊಳಗೆ ಹಗಲುರಾತ್ರೆಗಳೆಲ್ಲ ಒಂದೇ.

ಅಮ್ಮಿ ಅನಂತರದ ದಿನಗಳಲ್ಲಿ ಏಳುತ್ತಿದ್ದಳು, ದುಡಿಯುತ್ತಿದ್ದಳು, ಮಾತನಾಡುತ್ತಿದ್ದಳು. ಅದೆಲ್ಲಾ ಯಾಂತ್ರಿಕವಾಗಿ. ಅವಳ ಎಳೆಯ ಹೃದಯ ನಿದ್ದೆ ಹೋಗಿತ್ತು—ಮೆದುಳು ನಿದ್ದೆ ಹೋಗಿತ್ತು.

ಶಾನುಭೋಗರು ಮೇಲ್ವಿಚಾರಣೆ ವಹಿಸಿ, ರಾಮಕೃಷ್ಣನ ಸಾವಿಗೆ ಸಂಬಂಧಿಸಿದ ಉಳಿದ ಕ್ರಿಯೆಗಳನ್ನು ಆಗಮಾಡಿಸಿದರು. ಸ್ನೇಹಮಯಿ ಕಾವೇರಿ ಆಗಾಗ್ಗೆ ಬಂದು, ಅಮ್ಮಿಯ ಮನಸ್ಸು ಮುರಿದುಬೀಳದಂತೆ ಆಸರೆಯಾಗಿ ನಿಂತಳು.

ಸಣ್ಣಪುಟ್ಟ ನೋವಿಗೆ ದಿನದ ನಿದ್ದೆ ಔಷಧಿಯಾದರೆ, ಆಳವಾದ ಅಳಲಿಗೆ ಪರಿಣಾಮಕಾರಿಯಾದ ಔಷಧಿ—ಕಾಲ. ದಿನಗಳುರುಳಿ ತಿಂಗಳಾದ ಹಾಗೆ, ತಿಂಗಳುಗಳೂ ಹಿಮ್ಮೆಟ್ಟಿದ ಹಾಗೆ, ಅಮ್ಮಿ ಚೇತರಿಸಿಕೊಂಡಳು. ಆದರೆ ಆಗಲೂ ದುಂಡಗೆ ವಿಶಾಲವಾದ ಆವಳ ಮುಖ ನಿರ್ವಿಕಾರವಾಗಿತ್ತು. ತುಟಿಗಳು ಬಿಗಿದುಕೊಂಡು ಕಿರಿದಾದುವು. ಕಣ್ಣುಗಳು ಉತ್ಸಾಹದಿಂದ ಅರಳಲೇ ಇಲ್ಲ.

ಬಹಳ ದಿನಗಳ ಮೇಲೆ ಅಜ್ಜಿ ಕೇಳಿದಳು :

"ಬಾಳೆಮಣ್ಣೂರಲ್ಲಿ ನನ್ನ ಅರಿವೆ ಅಂಚಡಿ ಏನಾದುವೂ ?"

ಅಜ್ಜಿ ತನ್ನ ಆಸ್ತಿಯ ವಿಷಯವೆತ್ತಿದುದನ್ನು ಕಂಡು ಅಮ್ಮಿಗೆ ತಮಾಷೆ ಎನಿಸಿತು,

"ಮನೆಯೊಳಗೆ ಭದ್ರವಾಗಿ ಇಟ್ಟಿದಿಯೇನು ?"

"ಮನೇನಂತೆ ! ಹಟ್ಟಿ ಅನ್ಬಾರ್ದೇನೊ ?"

"ಬ್ರಾಹ್ಮಣರ ಹಟ್ಟೀನ ಮನೆ ಅಂತಲೇ ಅಲ್ವಾ ಕರಿಯೋದು ?"

"ಲೇವಡಿ ಬೇರೆ ಮಾಡ್ತಾಳೆ ! ಯಾಕೇ, ಈ ಮುದುಕೀನ ನೀನು ಹಂಗ್ಸೋದು ?"

"ಹೋಗಜ್ಜಿ, ನಿನ್ನ ಸಿಟ್ಬೋ ನೀನೊ..."

ಅಜ್ಜಿ ನಕ್ಕಳು—ತನ್ನನ್ನು ಗೇಲಿ ಮಾಡುವ ಮಟ್ಟಿಗಾದರೂ ಮೊಮ್ಮಗಳು ಹಸನ್ಮುಖಿಯಾದಳೆಂದು ಅವಳಿಗೆ ಸಂತೋಷವಾಯಿತು,

ಆದರೆ ಬಾಳೆಮಣ್ಣೂರಿನ ಪ್ರಸ್ತಾಪವನ್ನು ಮತ್ತೊಮ್ಮೆ ಅಜ್ಜಿ ಮಾಡದಿರಲಿಲ್ಲ.

"ಕಾವೇರಿ ತಂದೆಗೆ ಹೇಳಿದರಾಯ್ತು. ಯಾರಾದ್ರೂ ಹೋಗೋ ಜನರ ಕೈಲಿ ಹೇಳಿದ್ರೆ ತಂದ್ಕೊಡ್ತಾರೆ."

"ಹೌದು, ಹೌದು, ತಂದ್ಕೊಡ್ತಾರೆ ! ಯಾವ ಜಾತಿಯೊ ಯಾವ ಜನವೊ, ತಂದ್ಕೊಡ್ತಾರೆ ! ತರದೆ ಏನು ಮಾಡಿಯಾರು ಪಾಪ !"

"ಯಾಕಜ್ಜಿ ರೇಗ್ತೀಯ ?"

"ಅಲ್ಲ ಅಮ್ಮಿ. ಇಷ್ಟು ಕೆಟ್ಹೋಯ್ತೆ ಕಲಿಕಾಲ ? ಆಚಾರ ವಿಚಾರ ಒಂದೂ ಬೇಡವೆ ?"

ಆಚಾರ ವಿಚಾರದ ವಿಷಯ ಬಂದಾಗ ಅಮ್ಮಿಯ ಮುಖ ಬಾಡಿತು. ಜೀವನದ ಮಧ್ಯಾಹ್ನದಲ್ಲಿ ಗಂಡನನ್ನು ಕಳೆದುಕೊಂಡ ಅಜ್ಜಿ, ಅಮ್ಮಿಯ ತಲೆಗೂದಲಿನ ಬಗೆಗೆ ಯೋಚಿಸಿದ್ದಳು ಎಷ್ಟೋ ಬಾರಿ. ಮೊಗ್ಗು ಅರಳುವುದಕ್ಕೆ ಮುಂಚೆಯೇ ಅದನ್ನು ಹಿಸುಕಿ ಎಸೆಯ ಬಯಸುವವರು ಅವಳ ಅಭಿಪ್ರಾಯದಲ್ಲಿ ನಿಜವಾಗಿಯೂ ದುರಾತ್ಮರು. ಬಾಲವಿಧವೆ ಅಮ್ಮಿಯನ್ನು ಕಂಡು ಜೀವನಹಳ್ಳಿಯಲ್ಲಿ ಕೊಂಕುನುಡಿ ಆಡಿದ ಒಬ್ಬಿಬ್ಬರಿಗೆ ತನ್ನ ಕಟು ಮಾತಿನ ರುಚಿಯನ್ನೂ ಅಜ್ಜಿ ಆಗಲೆ ತೋರಿಸಿದ್ದಳು. ಆದರೂ ಆಚಾರ ಸಂಪ್ರದಾಯಗಳ ಸಮರ್ಥನೆ ಮಾಡುವುದು ಅವಳ ಸ್ವಭಾವ. ಎಳೆಯರು ಯಾವಾಗಲೂ ಸಂಪ್ರದಾಯ ವಿರೋಧಿಗಳೆಂಬುದು ಆಕೆಯ ಅಭಿಪ್ರಾಯ.

ಆದರೆ ಅಮ್ಮಿಯ ಮುಖ ಬಾಡಿದುದನ್ನು ಕಂಡಾಗ ಅಜ್ಜಿಗೆ ಪಶ್ಚಾತ್ತಾಪವಾಯಿತು. ಎಷ್ಟೊಂದು ಕೋಮಲ ಮೊಮ್ಮಗಳ ಮನಸ್ಸು ! ಇನ್ನೆಂದೂ ಅವಳ ಮನಸ್ಸನ್ನು ನೋಯಿಸುವ ಮಾತನ್ನು ತಾನು ಆಡಬಾರದು—ಎಂದುಕೊಂಡಳು ಅಜ್ಜಿ.

ಬಾಳೆಮಣ್ಣೂರಿನ ಕೆಲಸ ಮಾತ್ರ ಹಾಗೆಯೇ ಉಳಿಯಿತು. ವಾಸ್ತವವಾಗಿ ಅಜ್ಜಿ ಆ ಊರಿನ ವಿಷಯ ಪ್ರಸ್ತಾಪಿಸಲು ಅರಿವೆ ಅಂಚಡಿಯೊಂದೇ ಕಾರಣವಾಗಿರಲಿಲ್ಲ. ಆಕೆಗೆ ಬಾಳೆಮಣ್ಣೂರಿನ ಕ್ರಮಬದ್ಧ ಜೀವನ ಒಗ್ಗಿಹೋಗಿತ್ತು. ಅಲ್ಲಿಯ ದೇವಸ್ಥಾನದ ಒಳ ಹೊರ ಅಂಗಣವನ್ನು ಸ್ವಚ್ಛವಾಗಿಡುವುದು ; ಪೂಜೆಯಾಗಿ ದೇವರಿಗೆ ನೈವೇದ್ಯ ಅರ್ಪಿತ ವಾದ ಬಳಿಕ ತನ್ನ ಪಾಲಿನ ಪ್ರಸಾದ ಪಡೆದು ಒಪ್ಪೊತ್ತಿನ ಊಟವನ್ನು ಕಂಠಪೂರ್ತಿಯಾಗಿ ಮಾಡುವುದು ; ಸಂಜೆಗೆ ಹರಿಕಥೆ, ಪುರಾಣ ಇಲ್ಲವೆ ಮಠದಲ್ಲಿ ಪ್ರವಚನ ; ವಾಸಕ್ಕೆ, ಊರ ಒಳಗೂ ಅಲ್ಲ ಹೊರಗೂ ಅಲ್ಲ ಎನ್ನುವಂತಹ ಜಾಗದಲ್ಲಿ ಹುಲ್ಲು ಛಾವಣಿಯ ಬಾಡಿಗೆ ಇಲ್ಲದೊಂದು ಪುಟ್ಟಮನೆ...ಎಲ್ಲ ಮಕ್ಕಳೊಡನೆಯೂ ಇದ್ದು ಸಂಸಾರ ಸುಖ ಸಾಕುಸಾಕೆನಿಸಿದ ಮೇಲೆ, ದೇವರ ಸಾನ್ನಿಧ್ಯದಲ್ಲಿ ಪ್ರಾಣ ನೀಗಬೇಕೆಂಬುದು ಅವಳ ಆಸೆಯಾಗಿತ್ತು. ಆದರೆ ಮೊಮ್ಮಗನ ಮದುವೆ ಸುದ್ದಿ ಬಂದು, ಇಹದ ಬಂಧನದಲ್ಲಿ ಮತ್ತೆ ಅವಳು ಸಿಲುಕಿ ಬೀಳುವಂತೆ ಮಾಡಿತು.

ಅಜ್ಜಿಯ ಮಗನೇ ಕಷ್ಟಪಟ್ಟು ಜೀವನಹಳ್ಳಿಯ ಆ ಹೊಲ ಮನೆಗಳನ್ನು ಸಂಪಾದಿಸಿದ್ದ. ಅದನ್ನು ಉಳಿಸಿಕೊಳ್ಳುವುದು ಸಂಸಾರಿಗಳ ಕೆಲಸ. ಹೊಲದಲ್ಲಿ ಬೆಳೆ ಬರುವ ಹಾಗೆ ಇಲ್ಲ ದುಡಿಯಬೇಕು ; ಹೊಲೆಯರಿಂದ ದುಡಿಸಬೇಕು ; ಅಳೆದು ಸುರಿದು ಹತ್ತು ಸಾರೆ ಲೆಕ್ಕ ಹಾಕಿ ದಿನ ನೂಕಬೇಕು, ಇಲ್ಲಿ ನಿಶ್ಚಿಂತೆಯಿಂದ ಇರುವುದು ಆಗದ ಮಾತು.

ಬಾಳೆಮಣ್ಣೂರು ಅಜ್ಜಿಯನ್ನು ಕರೆಯುತ್ತಿತ್ತು. ಅದಕ್ಕಾಗಿಯೇ ಆಗಾಗ್ಗೆ ಅರಿವೆ ಅಂಚಡಿಯ ನೆಪದಿಂದ ಆಕೆ ಬಾಳೆಮಣ್ಣೂರಿನ ಹೆಸರೆತ್ತುತ್ತಿದ್ದಳು. ಅಮ್ಮಿ ನಿರಾಶೆ ಹುಟ್ಟಿಸುವ ಹಾಗೆ ಮರುನುಡಿದಾಗ, ಅಜ್ಜಿ ರೇಗುತ್ತಿದ್ದಳು ; ರೇಗಿದೊಡನೆಯೆ ಪಶ್ಚಾತ್ತಾಪ ಪಡುತ್ತಿದ್ದಳು.

ಬಿಡುವಿನ ಸಮಯದಲ್ಲಿ ಅಜ್ಜಿ, ತನ್ನ ಅನುಭವದ ಕತೆಗಳನ್ನು ಅಮ್ಮಿಗೆ ಹೇಳುತ್ತಿದ್ದಾಗಲೆಲ್ಲ, ಬಾಳೆಮಣ್ಣೂರಿನ ಮಾತು ಬರುತ್ತಿತ್ತು...ಅದೇನು ಜೀವನಹಳ್ಳಿಯಂತಹ

ಕುಗ್ರಾಮವೆ? ಎರಡು ಸಾವಿರ ಜನ ವಸತಿಯಿದ್ದ ದೊಡ್ಡ ಪಟ್ಟಣ! ಹೋಗುವವರೆಷ್ಟು ಜನ—ಬರುವವರೆಷ್ಟು! ಊರಿಗೆ ತಗಲಿಕೊಂಡೇ ಹರಿಯುವ ಭದ್ರಾನದಿ...ಪ್ರತಿ ವರ್ಷವೂ ಫಾಲ್ಗುಣದಲ್ಲಿ ನಡೆಯುವ ವೀರಭದ್ರ ಭದ್ರಕಾಳಿಯರ ತೇರಿನ ಉತ್ಸವ...ಆಹಾ...ಆ ವೈಭವ ವರ್ಣಿಸುವುದು ಆದಿಶೇಷನಿಂದಲೂ ಆಗದ ಕೆಲಸ!

ಅಜ್ಜಿಯ ಉದ್ದೇಶವನ್ನು ಸೂಕ್ಷ್ಮವಾಗಿ ತಿಳಿದುಕೊಂಡ ಅಮ್ಮಿ ರೇಗಿಸಬೇಕೆಂದೇ ಅವಳನ್ನು ಕೇಳುವಳು:

"ನಿಜವಾಗಿಯೂ ಅಷ್ಟು ಚೆನ್ನಾಗಿದ್ಯೆ ಅಜ್ಜಿ?"

"ಛೆ, ಇಲ್ಲ. ಸುಳ್ಳು ಹೇಳ್ತಿದೀನಿ!"

"ರೇಗ್ಬೇಡ."

ಒಂದು ದಿನ ಅಮ್ಮಿ ನೇರವಾದ ಪ್ರಶ್ನೆಕೇಳಿ ಅಜ್ಜಿಯನ್ನು ಗೊಂದಲದಲ್ಲಿ ಕೆಡವಿದಳು.

"ನಿಂಗೆ ಬಾಳೆಮಣ್ಣೂರಲ್ಲೆ ಇರೋಕೆ ಇಷ್ಟವೆ ಅಜ್ಜಿ?"

ಘಾಟಿ ಹುಡುಗಿ! ಎಂದಾದರೂ ಹೇಳಲೇ ಬೇಕಾಗಿದ್ದ ವಿಷಯ. ಹೇಳಲಾರದೆ ಅವರೆಗೂ ಅಜ್ಜಿ ದಿನ ತಳ್ಳಿದ್ದಳು. ಈಗ ಮುನ್ಸೂಚನೆ ಇಲ್ಲದೆಯೇ ಆ ಪ್ರಶ್ನೆ ಬಂದಿತ್ತು. ಏನು ಉತ್ತರ ಕೊಡಬೇಕು ಆಕೆ?

"ಹೇಳಜ್ಜಿ, ಪರವಾಗಿಲ್ಲ."

ಅಜ್ಜಿಗೆ ಆಶ್ಚರ್ಯವಾಯಿತು. ಅಮ್ಮಿಯೇ ವಯಸ್ಸಿನಲ್ಲಿ ತನಗಿಂತ ಹಿರಿಯಳು; ತಾನೇ ಎಳೆಯ ಮಗುವೇನೋ—ಎಂದು ಭ್ರಮೆಪಡುವಂತಾಯಿತು. ಸೋಲನ್ನೊಪ್ಪಿ ಕೊಳ್ಳಲಾರದೆ, ಒಪ್ಪದೆ ಬೇರೆ ಹಾದಿಯಿಲ್ಲದೆ, ಮುಖ ಕೆಂಪೇರಿತು; ಸ್ವರ ಕಂಪಿಸಿತು. ಅವಳೆಂದಳು:

"ಏನೋ ಒಂದು ಆಸೆಯಿತ್ತು ಮಗು...ಕಡೆಗಾಲಕ್ಕೆ ಲಕ್ಷ್ಮೀನಾರಾಯಣನ ಸಾನ್ನಿಧ್ಯ ದಲ್ಲೇ ಇರಬೇಕೂಂತ."

"ಸರಿ ಹಾಗಾದರೆ."

"ಏನು?"

"...ಏನಿಲ್ಲ."

"ನಿನ್ನ ಒಬ್ಬಳ್ನೇ ಇಲ್ಲಿ ಬಿಟ್ಬಿಟ್ಟು ಹೋಗು ಅಂತಿಯೇನು?"

"ನಾನು ಅಂದರೆ ನಿಂಗೆ ಪ್ರೀತಿನಾ ಅಜ್ಜಿ?"

"ಛೆ! ಎಲ್ಲೀದು ಪ್ರೀತಿ!"

"ನನ್ನನ್ನೂ ಕರಕೊಂಡು ಹೋಗು ಹಾಗಾದರೆ."

"ನನ್ಜತೇಲಿ ಬರ್ತೀಯಾ?!"

"ಹೂಂ."

"ನನ್ನಾಣೆ?"

"ಹೂನಜ್ಜಿ..."

ಅಜ್ಜಿಗೆ ಬಲು ಸಂತೋಷವಾಯಿತು. ಆದರೆ, ಇದ್ದುದನ್ನೆಲ್ಲ ಬಿಟ್ಟು ಹೊರಡುವುದು ಸುಲಭದ ಮಾತಾಗಿತ್ತೆ? ಆ ಮನೆ—ಹೊಲ—ಅವುಗಳನ್ನೇನು ಮಾಡಬೇಕು? ಮಾರು

ವುದೆ? ಪಿತ್ರಾರ್ಜಿತವಾಗಿ ಬಂದುದನ್ನು ಅಮ್ಮಿ ಮಾರುವುದೆ? ಅಜ್ಜಿಯಾದ ತಾನು, ವಂಶವನ್ನು ಉಳಿಸಬೇಕಾದವಳು, ಅದನ್ನು ಮಾರಗೊಡುವುದೆ?

ಆದರೆ ಬೇರೆ ಹಾದಿ ಇರಲಿಲ್ಲ. ಅಜ್ಜಿ ಅಮ್ಮಿಯನ್ನು ಕೇಳಿದಳು :

"ಈ ಹೊಲ ಮನೆ ಏನ್ಮಾಡೋಣವೇ?"

"ಕಾವೇರಿಗೆ ಈ ವಿಷಯ ಹೇಳ್ತೀನಿ, ಅಜ್ಜಿ."

ತಾನು ಅದನ್ನೇ ಸಲಹೆ ಮಾಡಬೇಕು ಎಂದಿದ್ದರೆ, ಮೊಮ್ಮಗಳಿಂದ ಅದೇ ಉತ್ತರ ಬಂದಿತ್ತು! ಈ ಅಮ್ಮಿಯಿಗಾಗ ಕೂಸು ಅಲ್ಲವೇ ಅಲ್ಲ. ಆಕೆಯ ವಿಚಾರ ಸರಣಿ ಸೂಕ್ಷ್ಮ ವಾಗಿತ್ತು. ದಿಟ್ಟತನವಿತ್ತು ಮಾತಿನಲ್ಲಿ...

ಅಮ್ಮಿ ಕಾವೇರಿಯೊಡನೆ ಈ ವಿಷಯವೆತ್ತಿದಾಗ ಆಕೆ ವ್ಯಥೆಪಟ್ಟಳು.

"ಅಂತೂ ಹೋಗಲೇಬೇಕಂತೀಯಾ ಅಮ್ಮಿ?"

"ಹೋಗದೇನು ಮಾಡ್ಲಿ? ಬಸವಿಯಾಗಿ ಬದುಕೋದಕ್ಕೆ ಈ ಊರಾದರೇನು? ಆ ಊರಾದರೇನು? ಈ ಹೊಲ ಸಾಗುವಳಿ ಮಾಡ್ತಾ ಇರೋಕೆ ನಾನೇನು ಗಂಡು ಮಗನೆ ಕಾವೇರಿ? ಅಜ್ಜಿಗಂತೂ ಆ ಊರು ಒಗ್ಗಿ ಹೋಗಿದೆ. ಅಲ್ಲೇ ದೇವರ ಸಾನ್ನಿಧ್ಯದಲ್ಲಿ ಇದ್ಕೊಂಡು ಸಾಯ್ಬೇಕೂಂತ ಅವಳ ಆಸೆ...ಅಂತೂ ಉಸಿರು ಇರೋವರ್ಗೆ ನಾನೂ ಬದುಕಿರ್ಬೇಕು ನೋಡು."

"ಕೆಟ್ಟ ಮಾತು ಯಾಕಾಡ್ತೀಯಾ?"

ಅಮ್ಮಿಯ ಕಂಠ ಗದ್ಗದಿತವಾಯಿತು :

"ಕೆಟ್ಟ ಮಾತು ನನಗೇನು ಇಷ್ಟವೆ? ಇರೋ ವಿಷಯ ಹೇಳಿದೆ."

"ಆಗಲಿ ಅಮ್ಮಿ, ಅಪ್ಪನಿಗೆ ಈ ವಿಷಯ ಹೇಳ್ತೀನಿ."

ಶಾನುಭೋಗರ ಮನಸಿನಲ್ಲೂ ಅಮ್ಮಿಯ ಭವಿತವ್ಯದ ಚಿಂತೆ ಇತ್ತು. ಅವರದು ವೈದಿಕ ಮನೆತನ. ಅವರ ಕುಟುಂಬದಲ್ಲಾಗಿದ್ದರೆ ವಿಧವೆಯೊಬ್ಬಳು ಕೇಶಮುಂಡನ ಮಾಡಿಸಿಕೊಳ್ಳದೆ ಇರುವುದು ಸಾಧ್ಯವಿರಲಿಲ್ಲ. ಆದರೆ ಅವರ ಪುಣ್ಯದಿಂದ, ದಯಾಮಯನಾದ ಭಗವಂತ ಅಂತಹ ಸಂಕಷ್ಟವನ್ನು ಅವರಿಗೆ ತಂದೊಡ್ಡಿರಲಿಲ್ಲ. ಆದರೆ ಭಗವಂತ ನಿಷ್ಕರುಣಿಯಾಗಿ ಅಮ್ಮಿಯನ್ನು ಚಿತ್ರಹಿಂಸೆಗೆ ಒಳಗು ಮಾಡಿದ್ದ. ಶಾನುಭೋಗರು ಆಗಾಗ್ಗೆ ಯೋಚಿಸುತ್ತಿದ್ದರು. ಅಮ್ಮಿ ಇನ್ನು ಸಾಯುವವರೆಗೂ ಹಾಗೆಯೇ ಇರಬೇಕಲ್ಲವೆ? ಇನ್ನೊಂದು ಮದುವೆ—? ಎಂಥ ಮಾತು! ಮದುವೆಯಲ್ಲ—ಬೋಡಮ್ಮನಾಗದೆ, ಹೆರಳು ಹಾಕಿಕೊಳ್ಳುವ ಅವಕಾಶ ಅವಳಿಗೆ ಉಳಿದಿರುವುದೇ ದೊಡ್ಡ ವಿಷಯ. ಆದರೂ ಜನರ ಬಾಯಿ ಮುಚ್ಚಿಸುವುದು ಕಷ್ಟ. ಆಕೆಗೀಗ ಹದಿನೈದು ವರ್ಷ......ಯಾರಿಗೆ ಗೊತ್ತು? ಆ ಹಳ್ಳಿಯಲ್ಲೇ ಇದ್ದು ಏನಾದರೂ ಅನಾಹುತವಾದರೆ? ಬಾಳೆಮಣ್ಣೂರಲ್ಲಿ ಏನೂ ಆಗಲಾರದೆಂಬುದಕ್ಕೆ ಆಧಾರವೇನು? ಯಾರು ರಕ್ಷಿಸಬೇಕು ಅವಳನ್ನು?...ದೇವರು—ದೇವರೇ ಆ ಬಡಪಾಯಿಯನ್ನು ರಕ್ಷಿಸಬೇಕು. ಮನುಷ್ಯರು ಏನನ್ನು ಮಾಡಬಲ್ಲರು? ಮನುಷ್ಯರಿಂದ ಏನು ಸಾಧ್ಯ?

"ಅಪ್ಪಯ್ಯ."

"........"

"ಓ ಅಪ್ಪಯ್ಯ, ನಾನು ಕರೆದದ್ದು ಕೇಳಿಸ್ತಾ?"

" ಏನಮ್ಮಾ ಅದು ? "

" ಅಮ್ಮಿ ವಿಷಯ. ಆ ಹೊಲ—ಮನೆ ವಿಷಯ."

" ತಾಳು, ತಾಳು. ಯೋಚ್ನೆಮಾಡಿ ಹೇಳ್ತೀನಿ."

ಶಾನುಭೋಗರು ಯೋಚನೆ ಮಾಡಿದರು, ದೀರ್ಘವಾಗಿ, ಬಹಳ ದಿನ. ಆ ಹೊಲ ಮನೆಗಳನ್ನು ಅವರೇ ವಹಿಸಿಕೊಳ್ಳಬಹುದು. ಯಾರಾದರೂ ಒಳ್ಳೆಯ ಒಕ್ಕಲುಗಳನ್ನು ನೇಮಿಸಬಹುದು. ಆದರೆ ಜನರು ಏನಾದರೂ ಅಂದರೆ ? ಜನಾಭಿಪ್ರಾಯಕ್ಕೆ ಹೆದರಿದಷ್ಟು ಪ್ರಾಯಶಃ ಬೇರೆ ಯಾವುದಕ್ಕೂ ಶಾನುಭೋಗರು ಹೆದರುತ್ತಿರಲಿಲ್ಲ.

ಹೊಲವನ್ನು ಮಾರುವುದೇ ಮೇಲು, ಎಂದುಕೊಂಡರು ಶಾನುಭೋಗರು. ಇಳಿ ಮೂಲೆಯ ಗೌಡ ಆಗಲೆ ಹೇಳಿಕಳುಹಿಸಿದ್ದ. ನಿರ್ಗತಿಕಳಾದ ಹೆಣ್ಣು ಆ ಹೊಲ ಮಾರುವ ಕಾಲ ಬಂದೇ ಬರುವುದೆಂದು ರಾಮಕೃಷ್ಣನ ಚಿತೆ ಉರಿದ ದಿನವೇ ಆತ ಲೆಕ್ಕ ಹಾಕಿದ್ದನೋ ಏನೋ. ಅವನಿಗೇ ಮಾರಬಹುದು. ಏನಿಲ್ಲವೆಂದರೂ ಎಂಟೊಂಭತ್ತು ನೂರು ರೂಪಾಯಿ ಗಳಾದರೂ ದೊರೆಯುವುದು ಖಂಡಿತ......

ಅಮ್ಮಿಯನ್ನೂ ಅಜ್ಜಿಯನ್ನೂ ಒಂದು ದಿನ ಕರೆಕಳುಹಿದರು. ತನ್ನ ಅಳಿಯನನ್ನೂ ಮಗಳನ್ನೂ ಎದುರಲ್ಲಿ ಕೂಡಿಸಿಕೊಂಡೇ ಅವರೆಂದರು :

" ನೋಡು ಅಮ್ಮಿ. ನಂಗೆ ನೀನು ಬೇರೆ ಅಲ್ಲ, ಕಾವೇರಿ ಬೇರೆ ಅಲ್ಲ. ನೀನು ಅಜ್ಜಿ ಜತೇಲಿ ಇಲ್ಲಿರೋದು ಹಿತವೋ, ಬಾಳೆಮಣ್ಣೂರಲ್ಲಿ ಇರೋದು ಹಿತವೋ ನನಗೆ ತಿಳೀದು. ಎಲ್ಲೇ ಇದ್ದರೂ ನಿನಗೊಂದಿಷ್ಟು ಸುಖ ಸಿಗಲಿ ಅನ್ನೋದೇ ನನ್ನ ಆಸೆ. ಏನು ನಿನ್ನಿಷ್ಟ ಹೇಳು ? ಹೊಲ ಮಾರ್ಬೇಕೂಂತಾನೋ, ಗೇಣಿಗೆ ಕೊಡ್ಬೇಕೂಂತಾನೋ ? "

ಅಮ್ಮಿ ಉತ್ತರವಿತ್ತಳು :

" ನಂಗ್ತಿಳೀದು. ನೀವೇ ಹೇಳಿ."

" ಅಜ್ಜಿ ಏನಂತಾರೆ ? "

" ನನ್ನನ್ನು ಏನ್ಕೇಳ್ತೀರಾ ? ಅಮ್ಮಿ ನಿಮ್ಹುಡುಗಿ ಇದ್ದ ಹಾಗೆ. ಹ್ಯಾಗನಿಸುತ್ತೋ ಹಾಗ್ಮಾಡಿ" ಎಂದಳು ಅಜ್ಜಿ.

" ಹೋಗಲಮ್ಮ. ಇಷ್ಟು ಹೇಳು ಅಮ್ಮಿ. ನಿನ್ನ ಹೆಸರಲ್ಲಿ ಹೊಲ ಇರ್ಬೇಕೂಂತ ನಿನಗೆ ಆಸೆಯೊ ? "

" ಇಲ್ಲ."

" ಸರಿ ಹಾಗಾದರೆ. ಇಳಿಮೂಲೆ ಗೌಡ ಎಂಟುನೂರ ಐವತ್ತು ಕೊಡೋಕೆ ಒಪ್ಪಿ ದಾನೆ. ನಾಳೆ ಆತನನ್ನ ಬರಹೇಳ್ತೀನಿ. ಕಾಗದ ಪತ್ರ ಆಗಲಿ."

ಅಮ್ಮಿ ಎದ್ದು ಶಾನುಭೋಗರ ಪಾದ ಹಿಡಿದು ವಂದಿಸಿ ಬಂದು ಹೇಳಿದಳು :

" ನಂಗೆ ಅದೊಂದೂ ತಿಳೀದು. ಯಾವ ಗೌಡರ ಜತೇಲೂ ನಾನು ಮಾತಾಡ್ಬೇಕಾದ್ದಿಲ್ಲ. ಎಲ್ಲ ನೀವೇ ಮಾಡಿ ಮುಗಿಸಿ."

" ಅಂದರೆ—? "

" ನನಗೆ ಹಣವೂ ಬೇಡ. ನಿಮ್ಮಲ್ಲೇ ಇರ್ಲಿ. ಬೇಕಾದರೆ ಯಾವತ್ತಾದರೂ ಬಂದು ಇಸಕೋತೇನೆ."

ಶಾನುಭೋಗರಿಗೂ ಕುತ್ತಿಗೆಯ ನರಗಳು ಬಿಗಿದು ಬಂದುವು. ಈ ಬಾಲೆಯನ್ನು ಸುಖಿಯಾಗಿ ಮಾಡಲು ತಾನು ಏನನ್ನೂ ಮಾಡಲಾರೆನಲ್ಲ—ಎಂದು ತಮ್ಮ ಅಸಹಾಯ ಕತೆಗಾಗಿ ಅವರು ಕೊರಗಿದರು.

"ಹಾಗಲ್ಲ ಅಮ್ಮಿ. ಇದು ವ್ಯವಹಾರದ ವಿಷಯ. ಕೊನೆಯ ಪಕ್ಷ ಹೊಲ ಮಾರೋಕೆ ನನಗೆ ಅಧಿಕಾರ ಕೊಟ್ಟಿದ್ದೀಂತ ಒಂದು ದಸ್ತಾವೇಜಾದರೂ ಆಗಬೇಕು."

"ಆಗಲಿ. ಬರೀರಿ."

ಶಾನುಭೋಗರ ಸೂಚನೆಯಂತೆ ಅವರ ಅಳಿಯ ರಾಜಮುದ್ರೆಯ ಅಧಿಕೃತ ಕಾಗದ ವನ್ನು ತಂದ. ಅವರು ಹೇಳಿದಂತೆ ದಸ್ತಾವೇಜನ್ನು ಬರೆದ. ಅವರು ತೋರಿಸಿಕೊಟ್ಟ ಜಾಗದಲ್ಲಿ ಅಮ್ಮಿ 'ಬನಶಂಕರಮ್ಮನ ರುಜು' ಎಂದು ಸಹಿ ಹಾಕಿದಳು.

ಅಜ್ಜಿಯ ತಲೆಯ ಮೇಲಿಂದ ದೊಡ್ಡದೊಂದು ಭಾರ ಇಳಿದ ಹಾಗಾಯಿತು. ಆಕೆ ಹೊರಡುವ ಸಿದ್ಧತೆ ಮಾಡಿದಳು. ದಿನ ಗೊತ್ತುಮಾಡಿದಳು.

ಊರು ಬಿಡುವುದೆಂದು ಗೊತ್ತಾದಮೇಲೆ ಅಮ್ಮಿಯ ಮನಸ್ಸು ಜಡವಾಯಿತು. ಹೃದಯ ಭಾರವಾಯಿತು. ಆ ದಿನ ಸಮೀಪ ಬಂತು ಎಂದಾಗ, ಆಕೆ ಬಹಿಷ್ಠೆಯಾದಳು. ಮತ್ತೊಮ್ಮೆ ಪ್ರಯಾಣದ ಮುಹೂರ್ತ ನೋಡಬೇಕಾಯಿತು.

ಹುಡುಗಿ ಅಮ್ಮಿಯ ಮನಸ್ಸು ಉಲ್ಲಾಸವಾಗಿರಲಿಲ್ಲ. ಹಿಂದೊಮ್ಮೆ ಜೀವನಹಳ್ಳಿ ಯನ್ನು ಬಿಟ್ಟು ಗಂಡನ ಮನೆಗೆಂದು ಅವಳು ತೆರಳಿದ್ದುದು ನಿಜ. ಆದರೆ ಅದು ಬೇರೆಯ ವಾತಾವರಣ -ಈಗಿನದು ಬೇರೆ. ಈಗಲಾದರೋ ಕುತೂಹಲದಿಂದ ಇದಿರುನೋಡಬೇಕಾದ 'ನಾಳೆ' ಇರಲಿಲ್ಲ. ಬಾಳೆಮಣ್ಣೂರನ್ನು ಅಜ್ಜಿ ವರ್ಣಿಸಿದ್ದು ನಿಜ. ಆದರೆ ಆ ಬಣ್ಣನೆಯಿಂ ದೇನೂ ಅಮ್ಮಿ ಆಕರ್ಷಿತಳಾಗಿರಲಿಲ್ಲ. ಅತ್ತೆಯ ಬಾಯಿಯಿಂದಲೂ ಚಿಕ್ಕಮಗಳೂರನ್ನು ಕುರಿತು ಅಂತಹ ಬಣ್ಣನೆಯನ್ನು ತಾನು ಕೇಳಿರಲಿಲ್ಲವೆ? ಕೈಹಿಡಿದ ಗಂಡ ಆ ಊರಲ್ಲಿ ತೀರಿ ಕೊಂಡಾಗ ಅಮ್ಮಿ ಎಲ್ಲ ದೊಡ್ಡ ಊರುಗಳನ್ನೂ ದ್ವೇಷಿಸಿದ್ದಳು. ಆದರೆ ಅಂತಹ ದ್ವೇಷ ದಿಂದ ಏನೂ ಪ್ರಯೋಜನವಿರಲಿಲ್ಲ. ವಿಷಮಶೀತ ಜ್ವರ—ಸರಿಯಾದ ಚಿಕಿತ್ಸೆ ಇಲ್ಲದೆ ಹೋದುದು —ದೇವರು—ಎಂದೆಲ್ಲ ಮಾವನೇ ಹೇಳಿರಲಿಲ್ಲವೆ?

ಹಾಗೆ ಯಾವ ಗೊತ್ತು ಗುರಿಯೂ ಇಲ್ಲದೆ ಅಮ್ಮಿ ಯೋಚಿಸುತ್ತಿದ್ದಳು. ಗೊತ್ತು ಗುರಿ ಇಲ್ಲದ ಯೋಚನೆ, ಗೊತ್ತುಗುರಿ ಇಲ್ಲದ ಜೀವನ.

ಅಂತಹ ಜೀವನಕ್ಕೆ ಯಾವ ಊರಾದರೇನು?...ಹಾಗೆ ನಿರಾಸಕ್ತಿಯ ಭಾವನೆಯಲ್ಲೇ ಅಮ್ಮಿ ಹೊರಡಲು ಸಿದ್ಧಳಾದಳು,

ಜೀವನಹಳ್ಳಿಯಿಂದ ಬಾಳೆಮಣ್ಣೂರಿಗೆ ಇದ್ದ ಹಾದಿ, ರಾಯನಹಳ್ಳಿ ಚಿಕ್ಕಮಗಳೂರುಗಳ ಮೇಲಿಂದ ಹೋಗುತ್ತಿತ್ತು. ಆದರೆ ಅಜ್ಜಿ ಬೇರೊಂದು ಹಾದಿಯಿಂದ ಬಂದಿದ್ದಳು. ಜೀವನ ಹಳ್ಳಿಯಿಂದ ಹತ್ತು ಮೈಲಿವರೆಗೆ ಕಾಲ್ನಡಿಗೆ, ಆ ಬಳಿಕ ಮೂವತ್ತಾರು ಮೈಲಿ ಎತ್ತಿನ ಗಾಡಿ.

"ಯಾವ ಹಾದೀಲಿ ಹೋಗ್ತೀರಾ ಅಮ್ಮಿ?" ಎಂದರು ಶಾನುಭೋಗರು.

ರಾಯನಹಳ್ಳಿಗೆ ಮತ್ತೆ ಹೋಗುವ ಪ್ರಮೇಯ! ಅಲ್ಲಿಂದ, ತನ್ನ ಭವಿತವ್ಯದ ಬಗೆಗೆ ತೀರ್ಪು ಕೊಡಲ್ಪಟ್ಟ ಚಿಕ್ಕಮಗಳೂರಿಗೆ!

" ಅಜ್ಜಿ ಬಂದ ಹಾದೀನೇ ಮೇಲು " ಎಂದಳು ಅಮ್ಮಿ.

ಆ ಉತ್ತರದ ಹಿಂದಿನ ಸೂಕ್ಷ್ಮವೇದನೆಯನ್ನು ಶಾನುಭೋಗರೂ ಕಾವೇರಿಯೂ ತಿಳಿದುಕೊಳ್ಳದೆ ಇರಲಿಲ್ಲ.

"ಹಾಗೇ ಆಗಲಿ ಅಮ್ಮಿ. ಜತೇಲಿ ಬರೋಕೆ ಒಬ್ಬ ಆಳ್ನ ಗೊತ್ಮಾಡ್ತೀನಿ.... ನಿನ್ನ ಹಣ ಇಲ್ಲೇ ಇರುತ್ತೆ...ಬೇಕಾದಾಗ ಬಾ."

ಗೆಳತಿಗೊಂದು ಉಡುಗೊರೆ ಕೊಡಬೇಕೆಂದು ಕಾವೇರಿ ಚಡಪಡಿಸಿದಳು...ಬೆಳ್ಳಿಯ ಕುಂಕುಮದ ಕರಡಿಗೆ ? ಥೂ ! ಅಮ್ಮಿಗೆ ಅದು ಯಾಕೆ ಬೇಕು ?—ತನ್ನ ಕೊರಳಿನ ಹಾರ ? ಅಯ್ಯೊ ! ಎಂಥ ಯೋಚನೆ ! ಬಳೆಗಳು ?...ಅಳಬೇಕೆನ್ನಿಸಿತು ಕಾವೇರಿಗೆ... ಒಂದು ಸೀರೆಯನ್ನು ? ಆಕೆಯ ಮದುವೆಯ ಕಾಲದಲ್ಲಿ ಬೆಲೆಬಾಳುವ ಎರಡು ಸೀರೆ ತಂದಿದ್ದರು. ಅವುಗಳಲ್ಲೊಂದನ್ನು—ಧರ್ಮಾವರದ್ದನ್ನು — ಸ್ನೇಹದ ಕಾಣಿಕೆಯಾಗಿ ಕೊಟ್ಟರೆ ? ಅಮ್ಮಿ ಬೇಡವೆನ್ನಬಹುದು. 'ನನಗೆ ಯಾಕೆ ? ಯಾಕೆ ಈ ವಿಧವೆಗೆ ?' ಎನ್ನಬಹುದು. ಆದರೆ ಒಳ್ಳೆ ಸೀರೆಯನ್ನೂ ಉಡಬಾರದೆಂದು ಹೇಳಿರುವ ಶಾಸ್ತ್ರ ಯಾವುದು ?

ತನ್ನ ಮನೆಯವರಿಗೆ ತಿಳಿಯದ ಹಾಗೆ ಕಾವೇರಿ ತನ್ನ ಒಳ್ಳೆಯ ಸೀರೆಯನ್ನು ಮಡಚಿ ಸೆರಗಿನೊಳಗೆ ಮುಚ್ಚಿಟ್ಟುಕೊಂಡು, ಅಮ್ಮಿಯೊಡನೆ ಆಕೆಯ ಮನೆಯ ವರೆಗೂ ಬಂದಳು.

ಅಮ್ಮಿ ತನ್ನ ಪುಟ್ಟ ಸಾಮಾನುಗಳನ್ನು ಕಟ್ಟಲೆಂದು ಒಂದು ಹಳೆಯ ಸೀರೆಯನ್ನು ನೆಲದ ಮೇಲೆ ಹಾಸಿದಳು. ಅದರ ಮೇಲೆ, ಇದ್ದ ಬಟ್ಟೆ ಬರೆಗಳನ್ನೂ ಅಜ್ಜಿಯದನ್ನೂ ಸೇರಿಸಿ ಇಡತೊಡಗಿದಳು. ಆಕೆ ತನ್ನತ್ತ ಬೆನ್ನು ಮಾಡಿದ್ದಾಗ ಕಾವೇರಿ ಅಮ್ಮಿಯ ಬಟ್ಟೆಗಳ ನಡುವೆ ತನ್ನ ಕಾಣಿಕೆಯನ್ನು ಬಚ್ಚಿಟ್ಟುದಾಯಿತು. ಯಶಸ್ವಿಯಾಗಿ ಆ ಕೆಲಸ ನಿರ್ವಹಿಸಿದಾಗ ಕಾವೇರಿಗಾದ ಸಂತೋಷ ಅಷ್ಟಿಷ್ಟಲ್ಲ. ನಗುನಗುತ್ತ ಅಮ್ಮಿಯ ಜತೆಯಲ್ಲಿ ತಾನೂ ಆ ಸಾಮಾನು ಈ ಸಾಮಾನನ್ನು ಅಲ್ಲಿಂದ ಇಲ್ಲಿಂದ ತಂದು ನಡುಮನೆಯಲ್ಲಿಟ್ಟಳು.

ಕತ್ತಲಾಗುವುದಕ್ಕೆ ಮುಂಚೆಯೇ ಕಾವೇರಿ ಮನೆಗೆ ಹೋದಳು. ಮರುದಿನ ಬೆಳಿಗ್ಗೆ ಅಮ್ಮಿ, ಅಜ್ಜಿಯರೊಡನೆ ಹೊರಡಬೇಕಾಗಿದ್ದವನು ಬಂದು, ಆ ರಾತ್ರೆ ಅಲ್ಲಿಯೇ ತಂಗಿದ.

ಬೆಳಗಾಗುವುದಕ್ಕೆ ಮುಂಚೆಯೆ ಶಾನುಭೋಗರೂ ಅವರಾಕೆಯೂ ಕಾವೇರಿಯೂ ಆಕೆಯ ಗಂಡನೂ ಅಮ್ಮಿಯ ಮನೆಗೆ ಬಂದರು.

ಅಜ್ಜಿ ಮತ್ತು ಮೊಮ್ಮಗಳು ಹೊರಟುದಾಯಿತು.

ಅಮ್ಮಿ , ಶಾನುಭೋಗರ ಮತ್ತು ಅವರಾಕೆಯ ಆಶೀರ್ವಾದ ಪಡೆದಳು. " ಎಲ್ಲಾದರೂ ಸುಖವಾಗಿರು " ಎನ್ನುವ ಆಶೀರ್ವಾದ !

ಅಮ್ಮಿ—ಕಾವೇರಿಯರು ಪರಸ್ಪರರನ್ನು ಅಗಲಲಾರದೆ ಅತ್ತುದಾಯಿತು.

" ಈಗಲೇ ಹೊರಟರೆ ವಾಸಿ. ಬಿಸಿಲು ಚೆನ್ನಾಗಿ ಬರೋಕ್ಮುಂಚೆ ಒಂದೆರಡು ಹರದಾರಿ ಹೋಗ್ಬಹುದು," ಎಂದರು ಶಾನುಭೋಗರು.

ಕತ್ತು ಬಿಗಿದು ಬಂತು. ಏನನ್ನೋ ಹೇಳಬೇಕೆಂದಿದ್ದಳು ಅಮ್ಮಿ. ಆದರೆ ಮಾತು ಹೊರಡಲಿಲ್ಲ.

ಅಜ್ಜಿ " ಬರ್ತೀವಪ್ಪಾ ಇನ್ನು...ಹೋಗಿ ಬರ್ತೀವಿ," ಎಂದಳು.

ಎದುರಲ್ಲಿ ಆಳುಮಗ...ಅಮ್ಮಿ...ಹಿಂದಿನಿಂದ ಅಜ್ಜಿ...

ಮೆಲ್ಲಮೆಲ್ಲನೆ ನಡೆದು ಅವರು ಮಬ್ಬು ಬೆಳಕಿನಲ್ಲಿ ಮರೆಯಾದರು.

ಶಾನುಭೋಗರ ಸಂಸಾರ ಅವರನ್ನು ನೋಡುತ್ತ ನಿಂತಿತ್ತು.

ಅವರಾಕೆ ಹೇಳಿದರು :

" ಪಾಪ ! ಚಿನ್ನದಂಥ ಹುಡುಗಿ ! "

ಕಾವೇರಿ ಬಿಕ್ಕಿ ಬಿಕ್ಕಿ ಅತ್ತಳು.

೬

ಜೀವನಹಳ್ಳಿ ಬಿಟ್ಟ ಆ ಮೂವರೂ ಮರುದಿನ ರಾತ್ರೆ ಬಾಳೆಮಣ್ಣೂರು ಸೇರಿದರು. ಕಾಲ್ನಡಿಗೆಯ ಬಳಿಕ ಗೊತ್ತುಮಾಡಿ ತಂದಿದ್ದ ಗಾಡಿ ಊರಿನ ಪಶ್ಚಿಮ ಮೂಲೆಯಲ್ಲಿದ್ದ ದೇವಾಲಯದ ಬಳಿ ನಿಂತಿತು. ಅಲ್ಲೆ ಅರ್ಚಕರ ಮನೆ ಇತ್ತು. ಗಾಡಿ ಮನೆಯ ಎದುರು ನಿಂತುದನ್ನು ನೋಡಿ, ಅರ್ಚಕರ ವಯಸ್ಸಾದ ಹೆಂಡತಿ ಹೊರಬಂದು, " ಯಾರೂ " ಎಂದು ರಾಗವೆಳೆದಳು.

ಗಾಡಿಯೊಳಗಿಂದಲೆ ಅಜ್ಜಿ ಹೇಳಿದಳು :

" ನಾನು ಶೇಷಮ್ನೋರೇ...ಸುಬ್ಬಿ..."

" ಓ ಸುಬ್ಬಕ್ಕಾ ? ಯಾವಾಗ್ಬಂದ್ರಿ...ಇಳೀರಿ."

" ಇಲ್ಲ...ಮೊಮ್ಮಗಳು ಬಂದಿದಾಳೆ. ಮಡಿ ಉಟ್ಕೊಂಡು ನಾಳೆ ಬರ್ತೀನಿ...ನಮ್ಮನೇ ಅಲ್ಲೇ ಇದೆಯೋ ಇಲ್ವೋ ಹೋಗಿ ನೋಡ್ತೀನಿ ! "

" ಇಲ್ದೆ ಏನು ? ನಿಮ್ಮನೇಗೂ ಕನ್ನಹಾಕೋರುಂಟೆ ಸುಬ್ಬಕ್ಕ ? "

ತುಟಿ ಬಿಗಿದು ಕುಳಿತಿದ್ದ ಅಮ್ಮಿಗೆ ಶೇಷಮ್ಮನವರ ಹಾಸ್ಯಪ್ರವೃತ್ತಿ ಕಂಡು ನಗಬೇಕೆಂದು ತೋರಿತು.

ಆದರೆ ಅಷ್ಟರಲ್ಲೆ ಗಾಡಿಯವನು ಬೆನ್ನು ಚಪ್ಪರಿಸಿದನೆಂದು ಎತ್ತುಗಳು ಮುಂದೆ ನಡೆದುವು. ಸುಬ್ಬಕ್ಕನ ಮೊಮ್ಮಗಳನ್ನು ನೋಡುವ ಕುತೂಹಲದಿಂದ ಶೇಷಮ್ಮ ಕೊರಳು ಕೊಂಕಿಸಿದಳು. ಆದರೆ ಆ ಕತ್ತಲೆಯಲ್ಲಿ ಅವಳಿಗೆ ಅಮ್ಮಿ ಕಾಣಿಸಲಿಲ್ಲ.

...ಅಜ್ಜಿಯ ಒಂಟಿ ಜೀವನಕ್ಕೆ ಅನುಗುಣವಾಗಿದ್ದ ಆ ಪುಟ್ಟ ಮನೆಯನ್ನು ಅಮ್ಮಿ ಸೇರಿದ್ದಾಯಿತು. ಆಳುಮಗ ಅದೊಂದು ದಿನ ಬಾಳೆಮಣ್ಣೂರಲ್ಲಿದ್ದು ಜೀವನಹಳ್ಳಿಗೆ ವಾಪಸು ಹೊರಟುಹೋದ.

...ಅಲ್ಲಿಂದ ಅಮ್ಮಿಯ ಜೀವನದಲ್ಲಿ ಇನ್ನೊಂದು ಅಧ್ಯಾಯದ ಆರಂಭ. ಅದು ಏರು ತಗ್ಗುಗಳಿಲ್ಲದ ಶೋಕಸಂತೋಷಗಳಿಲ್ಲದ ಏಕಪ್ರಕಾರವಾದ ಜೀವನ. ಅಜ್ಜಿ ಆಕೆಯನ್ನು ಅರಗಿಣಿಯಂತೆ ಸಾಕಿದಳು. ತಾನು ಜೀವಮಾನವೆಲ್ಲ ಉಳಿಸಿ ಕೂಡಿಟ್ಟಿದ್ದ ಪುಡಿಕಾಸನ್ನು ಖರ್ಚುಮಾಡಿ ಅಮ್ಮಿಗೆ ಯಾವ ವಿಧದಲ್ಲೂ ತೊಂದರೆಯಾಗದಂತೆ ನೋಡಿಕೊಂಡಳು.

ಆದರೆ ಅಜ್ಜಿ ಇದಿರಿಸಬೇಕಾದ ಸಮಸ್ಯೆಗಳು ಇಲ್ಲದಿರಲಿಲ್ಲ. ಅಮ್ಮಿಯೇನು ಪುಟ್ಟ ಮಗುವೆ ? ಆಕೆ ಸಕೇಶಿಯಾದ ಎಳೆಯ ಜೀವ. ಆಕೆಯೊಡನೆ ಅಜ್ಜಿ ದೇವಾಲಯಕ್ಕೆ ಹೊರ

ಟರೂ ಸಾಕು, ಸಾವಿರ ಕಣ್ಣುಗಳು ಅವರನ್ನು ಹಿಂಬಾಲಿಸುತ್ತಿದ್ದುವು. ಅಜ್ಜಿ ಅಮ್ಮಿಯರಿಬ್ಬರಿಗೂ ಅದು ಹೊಸ ಅನುಭವ. ಸ್ವಲ್ಪ ಮಟ್ಟಿಗೆ ಅಜ್ಜಿ ಅಳುಕಿದಳು. ವಯಸ್ಸಿನ ಆತಂಕವನ್ನೂ ಗಮನಿಸದೆ ನೇರವಾಗಿದ್ದ ಅವಳ ಬೆನ್ನು ಸ್ವಲ್ಪ ಬಾಗಿತು. ದೇಹ ಮುದುಡಿಕೊಂಡಿತು.

"ಯಾಕಜ್ಜಿ, ಮೈ ಚೆನ್ನಾಗಿಲ್ವೆ ?" ಎಂದು ಅಮ್ಮಿ ಕೇಳಿದಳು.

"ಹಾಗೇನೂ ಇಲ್ಲವಲ್ಲ. ಚೆನ್ನಾಗಿಯೇ ಇದೀನಿ."

"ಮುಖ ಬಾಡಿದೆ."

"ಏನೇ ಇದು ? ಒಳ್ಳೇ ಪರೀಕ್ಷೆ ಮಾಡ್ತಾ ಇದೀಯಲ್ಲೇ !"

ನಿಜವಾಗಿ ಮುಖಬಾಡಿಸಿಕೊಂಡಿದ್ದುದು ಅಜ್ಜಿಯಲ್ಲ, ಅಮ್ಮಿ. ಅವಳೆಂದಳು :

"ನಾನು ಬಂದು ನಿನಗೆ ಸುಮ್ಮಸುಮ್ಮನೆ ತೊಂದರೆ, ಅಲ್ವೆ ಅಜ್ಜಿ ?"

"ಯಾಕಮ್ಮಿ ಹಾಗಂತೀಯಾ ?"

"ದೇವರ ಸಾನ್ನಿಧ್ಯದಲ್ಲಿ ನೆಮ್ಮದಿಯಿಂದ ಇರಬೇಕೂಂತ ನೀನಿದ್ರೆ…ಈಗ ಇಲ್ಲಿ ನನ್ನನ್ನು ನೋಡ್ಕೊಳ್ಳೋ ಜವಾಬ್ದಾರೀನೇ ಆಯ್ತು."

"ಏನು ನೋಡ್ಕೊಳ್ಳೋದೂಂದ್ರೆ ? ನಿನ್ನನ್ನು ತಲೆಮೇಲೆ ಹೊತ್ಕೊಂಡಿದೇನೆಯೆ ನಾನು !"

"ಹೋಗಲಿ ಬಿಡಜ್ಜಿ, ಯಾಕೆ ಮಾತು ?"

ಕಸಿವಿಸಿಗೊಂಡ ಮನಸಿನಿಂದಲೇ ಆ ದಿನ ಅಜ್ಜಿ ದೇವಾಲಯಕ್ಕೆ ಹೋದಳು. ದಿನ ನಿತ್ಯದಂತೆ ಕೆರೆಯಲ್ಲಿ ಮಿಂದು ಮಡಿಯುಟ್ಟು ದೇವಸ್ಥಾನದ ಒಳಕೆಲಸ ಮಾಡಿದಳು. ಮಠಕ್ಕೆ ಹೋದಳು.

ಮಠದ ವೃದ್ಧಯತಿಯಲ್ಲಿ ಆಕೆಗೆ ಅಪಾರ ಭಕ್ತಿ. ಆ ಸ್ವಾಮಿಯ ಧರ್ಮನಿಷ್ಠೆಗೆ ಸುಬ್ಬಕ್ಕ ಮಾರುಹೋಗಿದ್ದಳು. ಹಿಂದೆ ವಾರಕ್ಕೊಮ್ಮೆಯಾದರೂ ಯತಿ ತನ್ನನ್ನು ಮಾತನಾಡಿಸದೇ ಇದ್ದರೆ ಅಜ್ಜಿಗೆ ನೆಮ್ಮದಿ ಇರುತ್ತಿರಲಿಲ್ಲ.

ಮಠದಲ್ಲಿ ಸ್ವಾಮಿಗಳು ಪಟ್ಟದ ದೇವರ ಪೂಜೆಯಲ್ಲಿ ನಿರತರಾಗಿದ್ದರು. ಅಜ್ಜಿ ಹೊರಗೆ ಬಾಗಿಲ ಬಳಿ ಕುಳಿತು ಮನಸಿನಲ್ಲೆ 'ಓಂ ನಮಃ ಶಿವಾಯ' ಜಪಿಸತೊಡಗಿದಳು… ಸ್ವಲ್ಪ ಹೊತ್ತಿನಲ್ಲೆ ಮಂತ್ರೋಚ್ಚಾರಣೆ ಗಟ್ಟಿಯಾಯಿತು. ಸ್ವಾಮಿಗಳು ಹೊರಬಂದರು. ಮಂತ್ರಪಠನದ ನಡುವಿನಲ್ಲೆ, "ಏನು ಸುಬ್ಬಕ್ಕ ? ಆರೋಗ್ಯವೊ ?" ಎಂದು ಕೇಳಿದರು.

"ಭಗವಂತನ ಕೃಪೆಯಿಂದ ಇಷ್ಟರ ಮಟ್ಟಿಗಿದೆ ಸ್ವಾಮಿ."

ಸ್ವಲ್ಪ ಹೊತ್ತಾದ ಮೇಲೆ ಯತಿವರ್ಯರು ಹೊರಬಂದು ಕೃಷ್ಣಾಜಿನದ ಮೇಲೆ ಕುಳಿತರು.

"ಒಂದು ತಿಂಗಳಾಯಿತಲ್ಲವೆ ನೀನು ಬಂದು ?"

"ಹೌದು ಸ್ವಾಮಿ. ಎರಡು ಮೂರು ಸಾರೆ ಪ್ರವಚನಕ್ಕೆ ಬಂದಿದ್ದೆ. ಮಾತನಾಡುವ ಅವಕಾಶ ದೊರೀಲಿಲ್ಲ."

"ಅದಕ್ಕೆಲ್ಲಾ ಅವಕಾಶ ಕಾದು ಕುಳಿತರೆ ಆಗುತ್ಯೆ ಸುಬ್ಬಕ್ಕ ? ಮಠ ಅಂದರೆ ಹೀಗೆಯೇ. ಮುಂದೆ ನುಗ್ಗಿ ಬಂದವರು ಮುಂದೆ. ಹಿಂದುಳಿದವರು ಹಿಂದೆಯೇ."

"ನಾನು ಹಳ್ಳಿಯವಳು. ನನಗೇನು ತಿಳೀತದೆ ?"

"ಮೊಮ್ಮಗಳನ್ನೂ ಕರಕೊಂಡು ಬಂದಿದೀಯಂತೆ."

"ಹೌದು."

"ಸಕೇಶಿಯಂತೆ."

"ಹೌದು ಸ್ವಾಮಿ...ಏನೂ ತಿಳೀದ ಮಗು."

"ಗೊತ್ತಾಯ್ತು...ಅಯ್ಯೊ ಪಾಪ ಅನಿಸುತ್ತೆ. ಆದರೆ ಬ್ರಹ್ಮಲಿಪಿ ಒಮ್ಮೆ ಬರೆವದ್ದನ್ನ ಅಳಿಸೋಕಾಗಲ್ಲ ಸುಬ್ಬಕ್ಕ."

ಜೋಲು ಮೋರೆ ಹಾಕಿಕೊಂಡಿದ್ದ ಅಜ್ಜಿ ಸ್ವಾಮಿಗಳ ಕನಿಕರದ ನುಡಿಗೆ ತಾನು ಪಾತ್ರಳಾದೆನೆಂದು ಸಮಾಧಾನಪಟ್ಟಳು.

"ಹೋಗಲಿ, ಏನಿದ್ದರೂ ಅನುಭವಿಸಿಯೇ ತೀರಬೇಕು. ದೇವರಲ್ಲಿ ಭಯಭಕ್ತಿ ವ್ರತ ನಿಯಮ ಅಂತ ಶ್ರದ್ಧೆ ಹುಟ್ಟಿಸು. ಜೋಪಾನವಾಗಿ ನೋಡ್ಕೊ ಸುಬ್ಬಕ್ಕ."

"ಆಗಲಿ ಸ್ವಾಮಿ."

"ಊಟಕ್ಕೇನೂ ತೊಂದರೆ ಇಲ್ಲ ತಾನೆ ?"

"ಇಲ್ಲ ಸ್ವಾಮಿ, ಮೊಮ್ಮಗ ಮದುವೆಗೇಂತ ಕೂಡಿಸಿಟ್ಟಿದ್ದ ಚಿಲ್ಲರೆ ಪುಡಿಕಾಸಿತ್ತು."

ಅದು ನಿಜವಾಗಿರಲಿಲ್ಲ. ವಾಸ್ತವವಾಗಿ ಆ ದುಡ್ಡೆಲ್ಲವೂ ಅಜ್ಜಿಯದೇ. ಆದರೂ ಮೊಮ್ಮಗನ ವಿಷಯವೆತ್ತಬೇಕೆಂದು ಅಜ್ಜಿ ಹಾಗೆ ಹೇಳಿದಳು.

"ಹೌದು, ಕೇಳಿದೆವು. ಅನಿಷ್ಟ ಯಾವಾಗಲೂ ಹಾಗೆಯೇ ಒಂದೊಂದಾಗಿ ಬರೋದಿಲ್ಲ. ನಿನ್ನ ಮೊಮ್ಮಗನ ಸಮಾಚಾರವೂ ತಿಳಿಯಿತು. ಇಂಥಾದ್ದರಲ್ಲೇ ಮನುಷ್ಯನ ಪರೀಕ್ಷೆಯಾಗುವುದು. ಮನುಷ್ಯ ದೇವರಲ್ಲಿ ವಿಶ್ವಾಸ ಕಳೆದುಕೊಳ್ಳುವುದೂ ಹೀಗೆಯೇ. ಅಂಥ ಸಂದರ್ಭದಲ್ಲೇ ಜನರ ದೈವಭಕ್ತಿ ಹೆಚ್ಚಬೇಕು."

"ಹೌದು, ಸ್ವಾಮಿ."

"ಆಗಲಿ ಸುಬ್ಬಕ್ಕ. ದೇವರಲ್ಲಿ ವಿಶ್ವಾಸವಿಟ್ಟು ನಡೆದುಕೊಳ್ಳಿ...ಈಗ ನೀನು ತೀರ್ಥ ಪ್ರಸಾದ ತೆಗೆದುಕೊಂಡು ಹೋಗು...ಏನಾದರೂ ಕಷ್ಟವಿದ್ದರೆ ಬಂದು ನಿವೇದನೆ ಮಾಡಿಕೋಬಹುದು."

"ಅಪ್ಪಣೆ ಮಹಾಸ್ವಾಮಿ."

ತೀರ್ಥಪ್ರಸಾದ ಪಡೆದುಕೊಂಡು ಅಜ್ಜಿ ಮಠದಿಂದ ಹೊರಬಿದ್ದಳು. ಆಕೆಯ ಮನಸ್ಸಿಗೆ ಎಷ್ಟೋ ಸಮಾಧಾನವಾಗಿತ್ತು. ದೇವಾಲಯದಲ್ಲಿ ಮಹಾಮಂಗಳಾರತಿಯಾಗುವ ತನಕವೂ ಕಾದಿದ್ದು ದಿನದ ಪ್ರಸಾದ ಪಡೆದು ಅಜ್ಜಿ ಮನೆಗೆ ಬಂದಳು.

ಬೆಳಿಗ್ಗೆ ಅಮ್ಮಿಗಾಗಿ ಮನೆಯಲ್ಲೆ ಒಂದಿಷ್ಟು ತಿಂಡಿತಿನಿಸು ಏನಾದರೂ ಮಾಡಬೇಕಾಗುತ್ತಿತ್ತು. ಸಂತೆಯಿಂದ ಕೊಂಡುಕೊಂಡ ಅಕ್ಕಿಯನ್ನಿಷ್ಟು ನೀರಿನಲ್ಲಿ ನೆನೆಹಾಕಿ, ಅಮ್ಮಿ ಪಕ್ಕದ ಮನೆಯಲ್ಲಿ ಹಿಟ್ಟು ರುಬ್ಬಿಕೊಂಡು ಬರುತ್ತಿದ್ದಳು. ಹೊಸದಾಗಿ ಕೊಂಡುಕೊಂಡ ಮನೆಯ ಸರಂಜಾಮಿನ ಕೆಲವು ಪುಟ್ಟ ಸಾಮಗ್ರಿಗಳಲ್ಲಿ ಒಂದಾದ ಕಬ್ಬಿಣದ ಕಾವಲಿಯ ಮೇಲೆ ಅಜ್ಜಿ ಇಲ್ಲವೆ ಅಮ್ಮಿ ದೋಸೆ ಹುಯ್ಯುತ್ತಿದ್ದರು. ಅಜ್ಜಿ ಮಾತ್ರ ಮಧ್ಯಾಹ್ನ ದೇವರ ಪ್ರಸಾದ ದೊರೆಯುವವರೆಗೂ ಉಪವಾಸವಿರುವ ಪದ್ಧತಿಯನ್ನು ಒಮ್ಮೆಯೂ ಮುರಿಯಲಿಲ್ಲ. ಈಗ

ಲಾದರೋ ಆ ಪ್ರಸಾದ ಸ್ವಲ್ಪ ಹೆಚ್ಚಾಗಿಯೇ ದೊರೆಯುತ್ತಿತ್ತು. ಅರ್ಚಕರೆದುರು ಅಜ್ಜಿ "ಮೊಮ್ಮಗಳು ಇದಾಳಪ್ಪಾ. ಮರೀ ಬೇಡಿ," ಎಂದು ನೆನಪು ಹುಟ್ಟಿಸುತ್ತಾ, ಇಷ್ಟಿಷ್ಟು ಹೆಚ್ಚು ದೊರಕಿಸುತ್ತಿದ್ದಳು.

ಒಂದೊಂದು ಸಲ ಅಮ್ಮಿಯೂ ಅಜ್ಜಿಯ ಜತೆಯಲ್ಲಿ ದೇವಸ್ಥಾನಕ್ಕೆ ಹೋಗುವುದಿತ್ತು. ಆಗ ಎಲ್ಲರೂ ತನ್ನನ್ನೆ ದಿಟ್ಟಿಸಿ ನೋಡುತ್ತಿದ್ದಂತೆ ಭಾಸವಾಗುತಿತ್ತು ಅಮ್ಮಿಗೆ. ಬೀದಿಯಲ್ಲಿ ನಡೆದು ಹೋಗುತ್ತಿದ್ದರೆ ಅವಳ ಮುಖ ವಿವರ್ಣವಾಗುತಿತ್ತು. ಕೊನೆಗೆ ಅವಮಾನಿತಳಾದವಳಂತೆ ಅದು ಕಪ್ಪಿಡುತ್ತಿತ್ತು.

ದಿನಗಳು ಕಳೆದುವು. ಮಾಸ—ಋತುಗಳು ಬದಲಾದುವು.

ಈಗೀಗ ದೇವಾಲಯದವರೂ ಮಠದವರೂ ಅಜ್ಜಿಯೊಡನೆ ಹೆಚ್ಚು ಸ್ನೇಹದಿಂದ ಮಾತನಾಡುತ್ತಿದ್ದರು. ಆಗ ಅಜ್ಜಿಗೆ, ತಾನು ಎಲ್ಲರಿಗೂ ಬೇಕಾದವಳಾಗುತ್ತಿದ್ದೇನೆ—ಎಂಬ ಹೆಮ್ಮೆ. ಆದರೆ ಕ್ರಮೇಣ ಸ್ನೇಹದಿಂದ ಮಾತನಾಡುತ್ತಿದ್ದವರು ಅಮ್ಮಿಯ ಸುಖದುಃಖ ವಿಚಾರಿಸತೊಡಗಿದರು.

"ನಿನ್ನ ಮೊಮ್ಮಗಳ ಹೆಸರೇನು ಸುಬ್ಬಕ್ಕ?"

"ಬನಶಂಕರಿ ಆಚಾರ್ರೆ..."

ಅಥವಾ—

"ಎಲ್ಲಿ ಈಚೆಗೆ ಬನಶಂಕರಿ ಕಾಣಿಸ್ತಾನೇ ಇಲ್ಲ..."

"ಮೊನ್ನೆ ತಾನೇ ಬಂದಿದ್ಲಲ್ಲಾ ಭಟ್ರೆ."

ಇಲ್ಲವೆ—

"ನಿಮ್ಮನ್ನು ನೋಡಿದರೆ ದುಃಖವಾಗುತ್ತೆ ಸುಬ್ಬಕ್ಕ. ವಯಸ್ಸಾದಾಗ ಎಂಥ ಜವಾಬ್ದಾರಿ ನಿಮಗೆ!"

"ಏನ್ಮಾಡೋದು ಹೇಳೀಮ್ಮ. ಪಡಕೊಂಡು ಬಂದದ್ದು. ಅನುಭೋಸ್ಬೇಕು."

ಆ ಆಸಕ್ತಿಯ ವೈಖರಿ ಹಿತವಾಗಿರಲಿಲ್ಲ. ಅಜ್ಜಿಯ ಕಣ್ಣು ಕಿರಿದಾಗಿ ನೋಟ ಆಳವಾಯಿತು. ಅಮ್ಮಿಯ ಮಾತೆತ್ತಿದವರನ್ನು ನುಂಗುವ ಹಾಗೆ ಅವಳು ನೋಡಿದಳು.

ಹಾಗೂ ಹೀಗೂ ಎರಡು ವರ್ಷಗಳು ಕಳೆದುವು; ಹಾಗೆಯೇ ಇನ್ನೊಂದು ವರ್ಷ.

ಹದಿನೆಂಟರ ಬನಶಂಕರಿ ಯುವತಿ. ತಾನು ಉಡಿಯಲ್ಲಿ ಕೆಂಡ ಕಟ್ಟಿಕೊಂಡಿದ್ದಂತೆ ಅಜ್ಜಿಗೆ ತೋರಿತು. ಅಮ್ಮಿ ಅಜ್ಜಿಯ ಪಾಲಿಗೆ ಗಂಟಲಿನೊಳಗಿನ ಬಿಸಿ ತುಪ್ಪ.

ವಿನಾಕಾರಣವಾಗಿ ಅಜ್ಜಿ ಈಗ ರೇಗುತ್ತಿದ್ದಳು. ಆಕೆಯನ್ನು ಇತರರು ಮಾತನಾಡಿಸುವುದೇ ಕಷ್ಟವಾಯಿತು. "ಸುಬ್ಬಕ್ಕನಿಗೆ ಅರುವತ್ತರ ಅನಂತರದ ಅರುಳು ಮರುಳು" ಎಂದು ಹಲವರು ಗೇಲಿ ಮಾಡಿದರು. ಹಾಗೆ ನಗೆಮಾತನ್ನಾಡಿದ ಬಳಿಕ, ಅಜ್ಜಿಯ ಮೊಮ್ಮಗಳ ವಿಷಯ ಮನಸ್ಸಿನಲ್ಲೆ ಯೋಚಿಸುತ್ತ ಅವರೆಲ್ಲ ಮುಗುಳುನಗುತ್ತಿದ್ದರು.

ಸುಬ್ಬಕ್ಕನಿಗೆ ಮೊಮ್ಮಗಳ ಸಾಕುವಿಕೆ ಸಾವು ಬದುಕಿನ ಪ್ರಶ್ನೆಯಾಗಿತ್ತು. ತನ್ನ ವಂಶದ ಮಾನವನ್ನೆ ಕಾಪಾಡುವ ಭಾರವಿತ್ತು ಆವಳ ಮೇಲೆ. ಆಕೆ ಮಠದ ವೃದ್ಧ ಯತಿಗಳಲ್ಲಿ ತನ್ನ ಗೋಳನ್ನು ತೋಡಿಕೊಂಡಳು.

"ನಿನ್ನ ಎರಡನೇ ಮಗನ ಮನೇಲಿ ಬನಶಂಕರಿನ ಬಿಡೋಕೆ ಆಗಲ್ವೆ?" ಎಂದು

ಅವರು ಕೇಳಿದರು.

ಎರಡನೆಯ ಮಗ ಅರಸೀಕೆರೆಯಲ್ಲಿ ನೆಲೆಸಿದ್ದ. ಭದ್ರಕಾಳಿಯಂತಹ ಅವನ ಪೆಂಡತಿಯನ್ನು—ತನ್ನ ಸೊಸೆಯನ್ನು—ಸ್ಮರಿಸಿಕೊಂಡೇ ಅಜ್ಜಿ ನಡುಗಿದಳು.

"ಅದು ಸಾಧ್ಯವಾಗದು ಸ್ವಾಮಿ" ಎಂದು ತಲೆಯಾಡಿಸಿದಳು.

"ಮಗಳ ಮನೇಲಿ ?"

ಆ ಮಗಳಿಗಾದರೋ ಮದುವೆಗೆ ಪ್ರಾಪ್ತವಯಸ್ಕರಾದ ಹುಡುಗಿಯರಿದ್ದರು. ದೊಡ್ಡ ಹುಡುಗರಿದ್ದರು. ಹತ್ತಿರ ಜತೆಯಲ್ಲಿ ಹನ್ನೊಂದು ಎಂದು, ಏನಾದರೂ ಮಾಡಿ ಆ ಅಳಿಯರಾಯನನ್ನು ಒಪ್ಪಿಸಿ, ಈ ಮೊಮ್ಮಗಳನ್ನೂ ಅಲ್ಲಿ ಬಿಡಬಹುದಾಗಿತ್ತು. ಆದರೆ ಅದು ಸಾಧ್ಯವಿರಲಿಲ್ಲ. ಅಮ್ಮಿ ಬಾಲವಿಧವೆ—ಬರಿಯ ಹುಡುಗಿಯಲ್ಲ. ಅಮ್ಮಿ ಆ ಮನೆ ಸೇರಿದರೆ, ಊರವರ ತಿರಸ್ಕಾರಕ್ಕೆ ಆ ಅಳಿಯ ಗುರಿಯಾಗಬೇಕು. ಅದಾದ ಮೇಲೆ, ಅವನ ಮಕ್ಕಳ ಭವಿತವ್ಯದ ಹಾದಿಗೆ ಆತನೇ ಕಲ್ಲು ಹಾಕಿದ ಹಾಗೆ.

ಆ ಕಷ್ಟವನ್ನು ಸೂಕ್ಷ್ಮವಾಗಿ ಅಜ್ಜಿ ಸ್ವಾಮಿಗಳಿಗೆ ವಿವರಿಸಿದಳು.

"ಅದು ನಿಜ ಸುಬ್ಬಕ್ಕ. ಅಂಥದೇನು ಮಾಡೋಕೂ ಆಗೋದಿಲ್ಲ. ಆದರೂ ನೀನು ಧೈರ್ಯವಾಗಿರಬೇಕು. ನಂಬಿದವರನ್ನು ದೇವರು ಯಾವತ್ತೂ ಕೈಬಿಡೋದಿಲ್ಲ."

—ಆದರೆ ದೇವಾಲಯದ ಅಡುಗೆ ಮನೆಯ ವಯಸ್ಸಾದ ಬ್ರಾಹ್ಮಣನೊಬ್ಬ, ಉಪಾಯವಾಗಿ ಅಮ್ಮಿಯೊಬ್ಬಳೆ ಒಮ್ಮೆ ಒಳಬರುವಂತೆ ಮಾಡಿ, ಆಕೆಯ ಕೈ ಹಿಡಿದ. ಗಾಬರಿಗೊಂಡ ಅಮ್ಮಿ "ಅಜ್ಜೀ !" ಎಂದು ಕೂಗಿದಳು. ಆ ಬ್ರಾಹ್ಮಣ ಕೈ ಬಿಟ್ಟರೂ ಅಜ್ಜಿ ಆ ದೃಶ್ಯವನ್ನು ನೋಡದಿರಲಿಲ್ಲ.

ಆಕೆ ನಾಗಿಣಿಯಂತೆ ಕೆರಳಿ ಹೇಳಿದಳು :

"ಚಂಡಾಲನಾಗಬೇಡವಪ್ಪ. ಇದೇ ಷುರು; ಇದೇ ಕೊನೆ. ಇಲ್ಲದೆ ಹೋದರೆ ಸ್ವಾಮಿಗಳಿಗೆ ಹೇಳಿ ನಿನ್ನ ಭೂತ ಬಿಡಿಸಿಬಿಟ್ಟೇನು !"

ಆ ಸಂಸಾರವಂದಿಗ ಮೈ ಬೆವತು ಕೈ ಜೋಡಿಸಿ "ತಪ್ಪಾಯ್ತು—ಮಹಾಪರಾಧವಾಯ್ತು ನನ್ನದು. ಮಾನ ಉಳಿಸಿ, ಅನ್ನ ಉಳಿಸಿ," ಎಂದು ಗೋಗರೆದ.

ಎಲ್ಲರನ್ನೂ ಭಯಭಕ್ತಿಯಲ್ಲಿ ಅಂಕೆಯೊಳಗಿಟ್ಟಿದ್ದ ಆ ಸ್ವಾಮಿಗಳಿರುವಾಗ ತಾನು ಅಂಜಬೇಕಾದುದಿಲ್ಲವೆಂದು ಅಜ್ಜಿಗೆ ಸಮಾಧಾನವಾಯಿತು.

ಆದರೆ ಆ ಘಟನೆ ಬನಶಂಕರಿಯ ಮೇಲೆ ಮಾಡಿದ ಪರಿಣಾಮವೇ ಬೇರೆ. ಅನ್ನದ ತಪ್ಪಲೆಯ ಮುಂದೆ ನಿಂತಿದ್ದ ಆ ಟೊಣಪನ ಕರಿಕೂದಲು ತುಂಬಿದ್ದ ಬೆವರಿನ ವಾಸನೆ ಏಳುತ್ತಿದ್ದ ದಪ್ಪಗಿನ ಮೈ...ಮುಂದೆ ಚಾಚಿ ತನ್ನ ಬೆರಳು ಮುಟ್ಟಿದ ಆತನ ಕೈ...ವಿಕಾರವಾಗಿ ಉರಿಯುತ್ತಿದ್ದ ಅವನ ಕಣ್ಣುಗಳು...ಆ ಚಿತ್ರ ಅವಳ ಮನಃಪಟಲದಿಂದ ಮಾಸಿಹೋಗುವುದು ಸಾಧ್ಯವೇ ಇರಲಿಲ್ಲ. ಅವಳ ಹೃದಯವನ್ನು ಕೊಳಕು ಉಗುರುಗಳಿಂದ ಪರಚಿದ ಹಾಗಾಗಿತ್ತು. ಗಂಡಸರೆಲ್ಲ ಮೃಗಗಳೇ ಎಂದುಕೊಂಡಳಾಕೆ.

ಅಮ್ಮಿ ಧೈರ್ಯತಾಳಲೆಂದು, ಅಜ್ಜಿ ಆ ಬ್ರಾಹ್ಮಣನನ್ನು ಮೊಮ್ಮಗಳೆದುರು ತುಚ್ಛವಾಗಿ ಬಯ್ದಳು.

"ನೀನೇನೂ ಯೋಚಿಸ್ಬೇಡ ಅಮ್ಮಿ. ಇನ್ನೊಮ್ಮೆ ಹೀಗೇನಾದರೂ ಆಯ್ತೂಂದ್ರೆ

ಸ್ವಾಮಿಗಳಿಗೆ ದೂರು ಕೊಟ್ಟಿಡೋಣ. ಹೆದರ್ಬೇಡ."

ಆದರೆ ಅಡುಗೆ ಮನೆಯ ಬ್ರಾಹ್ಮಣನಿಗಾದ ಮಾತಿನ ಮಂಗಳಾರತಿಯ ಸುದ್ದಿ ಗೋಪ್ಯ ದಲ್ಲೇ ಉಳಿಯಲಿಲ್ಲ; ಕೇವಲ ಕೆಲವರು ಸಣ್ಣ ವೃತ್ತದೊಳಗೆ ಆ ಸುದ್ದಿ ಸುತ್ತಾಡಿತು. ಬನ ಶಂಕರಿಯನ್ನು ಬಯಕೆಯ ದೃಷ್ಟಿಯಿಂದ ನೋಡಬಯಸಿದವರು ಬಹಿರಂಗವಾಗಿ ದುರದುರನೆ ನೋಡಲು ಧೈರ್ಯ ತಾಳಲಿಲ್ಲ.

ಅದು ದೇವಸ್ಥಾನ ಮಠಗಳ ಆವರಣದ ಮಾತು. ಆದರೆ ಹೊರಗೆ ಊರಿನಲ್ಲಿ ಜನರೇನು ಕಡಿಮೆಯಾಗಿದ್ದರೆ? ಅಮ್ಮಿ ಒಬ್ಬಳೆ ಮನೆಬಿಟ್ಟು ಹೊರ ಹೋಗಲಾರದಾದಳು. ಅಜ್ಜಿಯೊಡನೆ ಹೋದಾಗಲೂ ಕೂಡಾ ಒಮ್ಮೊಮ್ಮೆ ಬೀದಿಯ ಬಿಕನಾಶಿಗಳು ಕೆಲವರು ಸಿಳ್ಳುಹಾಕುತ್ತಾ ಅವರನ್ನು ಹಿಂಬಾಲಿಸುವುದಿತ್ತು. ಆದರೆ ಅಜ್ಜಿಯ ನಾಲಗೆಯ ಪರಿಚಯ ವಿದ್ದ ಜನ ಅವರ ಉಸಾಬರಿಗೆ ಬರುತ್ತಿರಲಿಲ್ಲ. ದೇವಾಲಯದಲ್ಲಿ ಅರ್ಚಕರಾದಿಯಾಗಿ ಎಲ್ಲರೂ ಆಕೆಗೆ ಹೆದರುತ್ತಿದ್ದರೆಂಬ ಗಂಭೀರ ವಿಷಯ ರೆಕ್ಕೆ ಪುಕ್ಕ ಬಲಿತು ಬೀದಿ ಬೀದಿಗಳಲ್ಲಿ ಸಂಚಾರಮಾಡಿತು.

...ಅಮ್ಮಿ ಆ ಊರಿಗೆ ಬಂದ ಐದನೆಯ ವರ್ಷ, ಊರನ್ನು ತಗಲಿಕೊಂಡು ಹರಿಯು ತ್ತಿದ್ದ ಭದ್ರಾ ನದಿಗೆ ಸೇತುವೆ ಕಟ್ಟುವ ಕೆಲಸ ಆರಂಭವಾಯಿತು. ಅದು ಬಾಳೆಮಣ್ಣೂರಿನ ಜನರಿಗೊಂದು ಮಹತ್ವದ ಸಂಭವ. ಆ ಊರಿನ ಬೀದಿಗಳು ಹೊಸಬರಿಂದ ತುಂಬಿದುವು. ಹಳ್ಳಿಗಳಿಂದ ಬಡ ರೈತರು ಸಹಸ್ರಾರು ಜನ ಬಂದು ಕೂಲಿಗಳಾಗಿ ದುಡಿದರು. ನದಿಯ ಪ್ರವಾಹವನ್ನು ತಡೆದು, ಅಡಿಪಾಯ ಹಾಕಿ, ಸೇತುವೆ ಮೆಲ್ಲಮೆಲ್ಲನೆ ಮೇಲಕ್ಕೇಳುತ್ತಿತ್ತು. ಊರಿನ ಜನ ಅಲ್ಲಿ ಹೋಗಿ ನಿಂತು, ಮಂತ್ರಮುಗ್ಧರಾಗಿ, ಮಹಾ ಸಾಹಸದ್ದೆಂದು ಅವರಿಗೆ ತೋರಿದ ಆ ಕೆಲಸವನ್ನು ದಿಟ್ಟಿಸುತ್ತಿದ್ದರು.

ಸೇತುವೆಯ ನಿರ್ಮಾಣಕ್ಕೂ ಅಮ್ಮಿಯ ಜೀವನಕ್ಕೂ ಸಂಬಂಧವಿತ್ತೆನ್ನುವುದನ್ನು ವಿವರಿಸುವುದು ಕಷ್ಟ. ಆದರೆ ಪರ ಊರವರಿಂದ ತುಂಬಿ ಹೊಸ ರೂಪು ತಳೆದ ಆ ಊರು ಚಿತ್ರವಿಚಿತ್ರವಾಗಿ ತೋರುತ್ತ ಆಕೆಯ ಹೃದಯ ಸರೋವರದಲ್ಲಿ ತೆರೆಗಳನ್ನೆಬ್ಬಿಸುತ್ತಿತ್ತು. ಆಂಗ್ಲರ ಹಾಗೆ ಪೋಷಾಕು ಧರಿಸಿ ತಲೆಗೆ ಜರೀ ಪೇಟ ಸುತ್ತಿದ್ದ ಮೈಸೂರು ಇಂಜಿನಿಯರುಗಳು ಆ ಊರಿನ ಆರಾಧ್ಯ ದೇವತೆಗಳಾಗಿದ್ದರು. ನಾಲ್ಕು ಚಕ್ರಗಳದೊಂದು ಸಾಮಾನು ತುಂಬುವ ವಾಹನದಲ್ಲಿ ಕುಳಿತು ಆ ಇಂಜಿನಿಯರುಗಳು ಧೂಳೆಬ್ಬಿಸುತ್ತ ಬಾಳೆಮಣ್ಣೂರಿನ ಬೀದಿಗಳಲ್ಲಿ ಹೋಗುತ್ತಿದ್ದರೆ ಊರೆಲ್ಲ ಅವರನ್ನೆ ನೋಡುತ್ತಿತ್ತು.

ಆಗ ಅಮ್ಮಿಯೂ ಬಾಗಿಲು ಸರಿಸಿ ಹೊರನೋಡುತ್ತಿದ್ದಳು. ಆ ವಾಹನದ ಹಿಂದೆ ಬಗುಳುತ್ತ ಓಡುತ್ತಿದ್ದ ನಾಯಿಗಳು, ನಾಯಿಗಳಿಗಿಂತಲೂ ಹೆಚ್ಚು ಗದ್ದಲ ಮಾಡುತ್ತಿದ್ದ ಹುಡುಗರು, ಅವರ ನಗು ಸಿಳ್ಳು ಕಿರಿಚಾಟ, ಹೆಂಗಸರು ಗಂಡಸರೆಲ್ಲ ನವೀನವಾದ ಆ ವಸ್ತು ವಿನ ಬಗೆಗೆ ತೋರುತ್ತಿದ್ದ ಆನಂದೋತ್ಸಾಹ-ಇವನ್ನೆಲ್ಲ ಕಂಡು ಅಮ್ಮಿಗೆ ಉಸಿರುಕಟ್ಟುತ್ತಿತ್ತು.

ಒಮ್ಮೆ ಹೀಗಾಯಿತು. ಗೌರಾಂಗನಾದ ಎತ್ತರದ ನಿಲುವಿನ ಕುಡಿಮೀಸೆಯಿದ್ದ ಸುಂದರ ಯುವಕನೊಬ್ಬ ಅಜ್ಜಿಯ ಮನೆಯ ಮುಂದಿನಿಂದ ಹಾದು ಹೋಗುತ್ತಿದ್ದ. ಆತ ಅವರ ಮನೆ ಬಾಗಿಲನ್ನು ದಾಟಿದ್ದನಷ್ಟೆ. ಅಮ್ಮಿ ಅದೇ ಆಗ ಮಣ್ಣಿನ ಕೊಡದಲ್ಲಿ ನೀರೆತ್ತಿಕೊಂಡು ಆ ಹಾದಿಯಾಗಿ ಮನೆಯ ಕಡೆ ಬರುತ್ತಿದ್ದಳು. ಕ್ಷಣ ಕಾಲ ಅವರ ದೃಷ್ಟಿ

ಗಳು ಸಂಧಿಸಿದುವು. ಆತನ ದೃಷ್ಟಿಯಲ್ಲಿ, ಅಪೂರ್ವವಾದುದನ್ನೇನೊ ಕಂಡವನ ಅಚ್ಚರಿ ಯಿತ್ತು. ಅಮ್ಮಿ ಬೇಗ ಬೇಗನೆ ಹೆಜ್ಜೆಹಾಕಿ ಮನೆಯ ಕಡೆ ತಿರುಗಿದಳು. ಬಾಗಿಲು ತೆರೆದು ಒಳಹೋಗುತ್ತಿದ್ದಾಗ ಆಕೆಯ ದೃಷ್ಟಿ ಆಕೆಗರಿಯದಂತೆಯೇ ತಿರುಗಿ ನೋಡಿತು. ಆ ಯುವಕ ಮುಂದುವರಿಯುತ್ತಿದ್ದನಾದರೂ ತಿರುತಿರುಗಿ ನೋಡುತ್ತಿದ್ದ. ಸದ್ಯಃ ಬೀದಿಯಲ್ಲಿ ಬೇರೆ ಯಾರೂ ಕಾಣಿಸಲಿಲ್ಲ. ಅಮ್ಮಿ ಧಡಾರನೆ ಬಾಗಿಲು ಮುಚ್ಚಿ ಮನೆಯ ಗೋಡೆ ಗೊರಗಿ ನಿಂತಳು. ಭಯವಾಯಿತು ಆಕೆಗೆ. ಹೃದಯ ಡವಡವನೆ ಹೊಡೆದುಕೊಂಡಿತು. ಅವಳು ಯೋಚಿಸಲು ಯತ್ನಿಸಿದಳು : ಯಾಕೆ ಹಾಗಾಯಿತು ? ಯಾಕೆ ?

ಉತ್ತರ ಅವಳಿಗೆ ಹೊಳೆಯಲಿಲ್ಲವೇನೋ ! ಹಾಗಾಗುವುದು ಸ್ವಾಭಾವಿಕವಾಗಿಯೇ ಇತ್ತು. ಸ್ಫುರದ್ರೂಪಿಯಾದ ಆ ಯುವಕ...ಏಳು ವರ್ಷಗಳಾದುವು ತಾನು ವಿಧವೆಯಾಗಿ ...ಹಾಗಾಗದೆ ಇರುತ್ತಿದ್ದರೆ ? ಕೈ ಹಿಡಿದ ಗಂಡನ ರಕ್ಷಣೆಯಲ್ಲಿ ಅವಳು ಸುಖವಾಗಿರ ಬಹುದಿತ್ತು...ಮದುವೆಯಾದ ಮರುವರ್ಷ ಒಂದು ಸಂಜೆ ಗಂಡ ಮತ್ತು ತಾನು ಇಬ್ಬರೇ ಇದ್ದ ಆ ನೆನಪು...ಮೈಗೆ ಮೈ ಆನಿಸಿಕೊಂಡ ಮುಖಕ್ಕೆ ಮುಖವಿಟ್ಟುಕೊಂಡ ಆ ಸುಖ... ಇದ್ದಿದ್ದರೆ, ಈಗ ಕಂಡವರ ಹಾಗೆಯೇ ಅವರು ಇರುತ್ತಿದ್ದರಲ್ಲ ? ಗೌರಾಂಗ...ಎತ್ತರದ ನಿಲುವು...ಕುಡಿಮೀಸೆ...

ಮರುದಿನ ಹೆರಳು ಹಾಕಿಕೊಳ್ಳುತ್ತಿದ್ದಾಗ ಕೈ ತಡವರಿಸಿ ಕೆಲಸ ನಿಧಾನವಾಯಿತು. ತನ್ನ ಅಣ್ಣನದಾಗಿದ್ದ ಒಡೆದ ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ದೃಷ್ಟಿ ಆ ಕನ್ನಡಿಯ ಮೇಲೆಯೆ ಕುಳಿತಿತು. ಆಕೆ ತನ್ನ ಪ್ರತಿಬಿಂಬವನ್ನು ಸೂಕ್ಷ್ಮವಾಗಿ ಪರೀಕ್ಷಕ ದೃಷ್ಟಿಯಿಂದ ನೋಡಿದಳು. ತಾನು ಸುಂದರಿಯಾಗಿದ್ದೆನಲ್ಲವೆ ? ತುಂಬಿದ ಕೆನ್ನೆಗಳು...ಗಲ್ಲ...ಮೌನ ವಾಗಿದ್ದರೂ ಮಾತನಾಡುತ್ತಿದ್ದ ತುಟಿಗಳು...ಕನವರಿಸುತ್ತಿದ್ದ ಕಣ್ಣುಗಳು...ಬಲವಾದ ಬಾಗಿದ ಹುಬ್ಬುಗಳು...ವಿಶಾಲವಾದ ಹಣೆ...ನಿಜವಾಗಿಯೂ ತಾನು ಸುಂದರಿಯಾಗಿದ್ದೆನಲ್ಲವೆ ?

ನೆರೆಮನೆಗೆ ಹೊಸತಾಗಿ ಒಕ್ಕಲು ಬಂದಿದ್ದ ರಾಮಶಾಸ್ತ್ರಿಯವರ ರಸಿಕ ಹೆಂಡತಿ ಸುಂದರಮ್ಮ " ಬನಶಂಕರಮ್ಮ , ಸ್ವಲ್ಪ ಬನ್ನಿ ಇಲ್ಲಿ," ಎಂದು ಕರೆದಳು.

ಬನಶಂಕರಿ ಅತ್ತ ಹೋದಾಗ ಆಕೆಯ ಮುಖ ನೋಡುತ್ತ ಸುಂದರಮ್ಮ ಬಿದ್ದು ಬಿದ್ದು ನಕ್ಕರು. ಅಮ್ಮಿಗೆ ಪೆಚ್ಚು ಪೆಚ್ಚಾಯಿತು.

" ಯಾಕ್ರೀ ? "

" ಅಯ್ಯೋ ! ಇದೇನ್ರೀ ಮುಖ ಹೀಗಿದೆ ? "

ಮನೆಯಲ್ಲಿ ಮುರುಕು ಕನ್ನಡಿಯಲ್ಲೇ ಮುಖವನ್ನು ಹೆಚ್ಚು ಕಾಲ ನೋಡಿದ್ದ ಬನಶಂಕರಿ ಗಾಬರಿಯಾದಳು. ತಾನು ನಿಧಾನವಾಗಿ ಹೆರಳು ಹಾಕಿಕೊಳ್ಳುತ್ತಿದ್ದಾಗ ಸುಂದರಮ್ಮ ನೆಲ್ಲಾದರೂ ಕದ್ದು ನೋಡಿದರೇನೋ ಎಂದು ಅಳುಕಿದಳು.

" ಸುಮ್ನೆ ಬೇಸ್ತು ಬಿದ್ದು ನಿಂತಿದೀರಲ್ರೀ ... ತಗೊಳ್ಳಿ ಕನ್ನಡೀನಾ ... ಮುಖ ನೋಡ್ಕೊಳ್ಳಿ...ಏನು ಮೆತ್ಕೊಂಡು ಬಂದೀದೀರೋ ನೋಡಿ ! "

ಆ ಮನೆಯ ಅಗಲವಾದ ಕನ್ನಡಿಯಲ್ಲಿ ಅಮ್ಮಿ ಮುಖ ನೋಡಿದಳು. ಅಲ್ಲೇನೂ ಕಾಣಿಸಲಿಲ್ಲ—ಮುಖದ ಹೊರತಾಗಿ ಬೇರೇನೂ ಕಾಣಿಸಲಿಲ್ಲ.

" ಏನಿದೆ ಸುಂದರಮ್ನೋರೆ ? " ಎಂದು ಕೇಳಿದಳಾಕೆ.

ಸುಂದರಮ್ಮ ನಗುತ್ತಲೇ ಕೇಳಿದಳು.

"ಯಾಕೆ ಏನೂ ಕಾಣಿಸಲಿಲ್ವೇನು ?"

"ಇಲ್ಲವಲ್ಲಾ !"

ಸ್ವರ ಬದಲಿಸಿ ಸುಂದರಮ್ಮನೆಂದಳು :

"ನೀವು ಬರೇ ಮಗು ಬನಶಂಕರಮ್ಮ. ಕನ್ನಡೀಲಿ ಮುಖನೋಡಿದ್ರಲ್ಲಾ ಹೇಗಿದೆ ಮುಖ ?"

ಅಸ್ಪಷ್ಟವಾದ ತಿಳಿವಳಿಕೆಯಿಂದ ಅಮ್ಮಿಯ ಮುಖ ತುಸು ಕೆಂಪೇರಿತು. ಶಾಸ್ತ್ರಿಗಳ ಹೆಂಡತಿ ಮುಗುಳು ನಗುತ್ತ ಹೇಳಿದಳು :

"ನನ್ನ ಹೆಸರು ಸುಂದರಮ್ಮ. ಆದರೆ ಸುಂದರಿ ನೀವು, ತಿಳೀತೇನ್ರಿ ?"

ಅಮ್ಮಿ ಲಜ್ಜೆಯಿಂದ ಆ ಮನೆ ಬಿಟ್ಟೋಡಿದಳು. ತನ್ನ ಮನೆಯ ಒಳಸೇರಿಕೊಂಡಳು. ಮನಸ್ಸು ಮುರುಕು ಕನ್ನಡಿಯಲ್ಲಿ ಮುಖ ನೋಡಬಯಸಿತು. ನಾಚಿಕೆಯಿಂದ ರಂಗೇರಿತ್ತು ಮುಖ...ಕಣ್ಣುಗಳು ಕಂಬನಿ ತುಂಬಿ ತೊಟ್ಟಿಕ್ಕುತ್ತಿದ್ದುವು...ತನಗೆ ಎಷ್ಟೊಂದು ಹಿಂಸೆ ಕೊಟ್ಟರು ಆ ಸುಂದರಮ್ಮ !

ಆದರೆ ಆ ಹಿಂಸೆ ಅಮ್ಮಿಗೆ ಪ್ರಿಯವಾಗಿ ತೋರಿತು...ತಾನು ಸುಂದರಿ, ರೂಪವತಿ. ಅದರಲ್ಲಿ ಸಂದೇಹವಿರಲಿಲ್ಲ. ಅದಕ್ಕಾಗಿಯೇ ಆ ಯುವಕ ಬೆರಗು ನೋಟದಿಂದ ತನ್ನನ್ನು ನೋಡಿದ್ದ...

ಆಕೆಗೆ ಮತ್ತೆ ಭಯವಾಯಿತು.

"ಓ ದೇವರೆ, ಆತ ಮತ್ತೆ ನನ್ನನ್ನು ನೋಡದಿರಲಿ, ನೋಡದಿರಲಿ" ಎಂದು ಆಕೆ ತೊದಲಿದಳು.

ಸೇತುವೆಯ ಯೋಜನಾ ಕಚೇರಿಯಲ್ಲಿ ದುಡಿಯುತ್ತಿದ್ದ ಗುಮಾಸ್ತೆ ಆ ಯುವಕ—ಬಾಳೆಮಣ್ಣೂರಿಗೆ ಹೊಸಬ. ಆ ಹಾದಿಯಾಗಿ ಬಂದಾಗಲೆಲ್ಲ ಆತ ಅಮ್ಮಿಯ ಮನೆಯತ್ತ ನೋಡುತ್ತಿದ್ದ. ಅಥವಾ ಒಮ್ಮೊಮ್ಮೆ ದೃಷ್ಟಿ ಹಾಯಿಸಲೆಂದೇ ಆತ ಅತ್ತ ಬರುತ್ತಿದ್ದ. ಆದರೆ ಹಾಗಾದುದು ಕೆಲ ದಿನಗಳು ಮಾತ್ರ. ಆ ಯುವಕ ಪೋಲಿಯಾಗಿರಲಿಲ್ಲ. ತನ್ನ ಕಣ್ಣಿಗೆ ಹಬ್ಬವನ್ನುಂಟುಮಾಡಿದ ಸೊಬಗನ್ನು ಮತ್ತೆ ನೋಡಬೇಕೆಂದು ಆತ ಬಯಸುತ್ತಿದ್ದನೇ ಹೊರತು, ಬೇರೆ ಯಾವ ಯೋಚನೆಯೂ ಅವನಿಗಿರಲಿಲ್ಲ. ಹಲವು ಸಾರಿ ಬಂದಾಗಲೂ ಅಮ್ಮಿ ಕಾಣದೇ ಹೋದ ಮೇಲೆ, ಆತ ಆ ಹಾದಿಯಾಗಿ ಬರುವುದನ್ನು ನಿಲ್ಲಿಸಿದ.

ಆ ವರ್ಷದ ಊರ ಜಾತ್ರೆ ವಿಶೇಷ ಸಡಗರದಿಂದ ಸೇರಿತು. ಆ ವರ್ಷವೇ ದಿವಾನರ ಸವಾರಿ ಬಾಳೆಮಣ್ಣೂರಿಗೆ ದಯಮಾಡಿಸಿದ್ದು. ಅವರು, ಅವರ ಜತೆಯಲ್ಲಿ ಬಂದ ಜಿಲ್ಲಾಧಿಕಾರಿಗಳು, ಇತರ ಸಣ್ಣ ಪುಟ್ಟ ಅಧಿಕಾರಿಗಳು, ಸೇತುವೆಯೋಜನೆಯ ದುಡಿತಕ್ಕೆ ಸಂಬಂಧಪಟ್ಟವರು ಜಾತ್ರೆಯ ಸಂದರ್ಭದಲ್ಲಿ ಊರಿನ ಮುಖ್ಯ ಅತಿಥಿಗಳಾದರು. ಎರಡು ಮೈಲುಗಳ ಅಂತರದಲ್ಲಿದ್ದ ಲಿಂಗಾಯತ ಸ್ವಾಮಿಗಳೂ ಆಗ ಬಾಳೆಮಣ್ಣೂರಿಗೆ ಬಿಜಯ ಮಾಡಿದರು.

ಜನ ಮರುಳೋ ಜಾತ್ರೆ ಮರುಳೋ ಎಂಬ ಗಾದೆ ಇಲ್ಲವೆ ? ಸುಲಭವಾಗಿ ಮರುಳಾಗುವ ಜಾತಿಗೆ ಸೇರಿದಾಕೆ ಶಾಸ್ತ್ರಿಗಳ ಹೆಂಡತಿ ಸುಂದರಮ್ಮ. ಒಳ್ಳೆಯ ಸೀರೆಯುಟ್ಟು, ಅಲಂಕಾರ ಮಾಡಿಕೊಂಡು, ಪುಟ್ಟ ಮಗುವನ್ನು ಎತ್ತಿ ತಬ್ಬಿಕೊಳ್ಳುತ್ತಾ, ಗಂಡನ ಜತೆಯಲ್ಲಿ

ನಾಲ್ಕು ಜನರ ಮುಂದೆ ಓಡಾಡುವುದೆಂದರೆ ಬಲು ಇಷ್ಟ ಆಕೆಗೆ. ಗಂಡನೂ ಅನುಕೂಲನಾದ ಪತಿ. ಪೂರಾ ರಸಿಕ. ಬಾಯಿ ತುಂಬ ತಾಂಬೂಲ ಜಗಿಯುತ್ತ ತಲೆಯ ಮೇಲಿನ ಜುಟ್ಟನ್ನು ಎತ್ತರವಾಗಿ ಬಿಗಿದುಕಟ್ಟಿ, ಹಳೆಯ ಶಾಲೊಂದನ್ನು ಹೆಗಲಿಗೇರಿಸಿ, ಹೆಂಡತಿಯನ್ನೂ ಮಗುವನ್ನೂ ಕರೆದುಕೊಂಡು ಆತ ಬೀದಿಯಿಂದ ಹೊರಟನೆಂದರೆ, "ಆಹಾ, ಶಾಸ್ತ್ರಿಯ ವೈಭವವೆ!" ಎಂದು ಜನರು ನಗೆಯಾಡುವುದಿತ್ತು.

ಈ ಸಾರೆ ಸುಂದರಮ್ಮ ಜಾತ್ರೆಗೆ ತನ್ನ ಜತೆಯಲ್ಲೆ ಬರಬೇಕೆಂದು ಅಮ್ಮಿಯನ್ನು ಒತ್ತಾಯಿಸತೊಡಗಿದಳು: ಆ ಒತ್ತಾಯ ಸಾಲದೆಂದೋ ಏನೋ, "ಅಜ್ಜಿ, ಬನಶಂಕರೀನ ನಾನು ಜಾತ್ರೆಗೆ ಕರಕೊಂಡು ಹೋಗ್ತೀನಿ" ಎಂದಳು:

ಅವಳು ಬೇಡವೆನ್ನಲಿಲ್ಲ. ಅಮ್ಮಿಗೂ ಆಕೆಯೆಂದಳು :

"ಶಾಸ್ತ್ರಿಗಳ ಹೆಂಡತಿ ಕರೆಯೋದು ಕೇಳಿಸ್ಲಿಲ್ವೆ ? ಹೋಗಿ ಬಾ."

ರಾಮಶಾಸ್ತ್ರಿಯವರ ಸಂಸಾರ ನೆರೆಮನೆಗೆ ಒಕ್ಕಲು ಬಂದುದಕ್ಕೆ ಮುಂಚೆ ಅಲ್ಲಿದ್ದವರು ಶುದ್ಧ ವೈದಿಕರಾಗಿದ್ದರು. ಅಮ್ಮಿಯ ಬಗೆಗೆ ಅವರಲ್ಲಿ ಅನುಕಂಪವೇನೋ ಇತ್ತು. ಅವರ ಆ ಅನುಕಂಪ ಅಮ್ಮಿಯ ನೋವನ್ನು ಹೆಚ್ಚಿಸುತ್ತಿತ್ತೇ ಹೊರತು ಹೃದಯವನ್ನು ಹಗುರ ಗೊಳಿಸುತ್ತಿರಲಿಲ್ಲ. ಅವರ ಜತೆಯಲ್ಲೆಂದೂ ಅಮ್ಮಿ ಜಾತ್ರೆ ನೋಡಿದವಳಲ್ಲ: ಪುರಾಣ ಪ್ರವಚನಗಳಿಗೂ ಹೋದವಳಲ್ಲ. ಅಜ್ಜಿಯ ಜತೆಯಲ್ಲಿಲ್ಲದೆ ಇನ್ನೊಬ್ಬರ ಒಡಗೂಡಿ ನಕ್ಕು ನಲಿದಾಡುವುದನ್ನೇ ಆಕೆ ತಿಳಿದವಳಲ್ಲ.

"ನೀನೂ ಬಾ ಅಜ್ಜಿ..." ಎಂದಳು ಅಮ್ಮಿ.

"ಅಯ್ಯೋ, ನನ್ನನ್ನು ಕಟ್ಕೊಂಡು ಏನ್ಮಾಡ್ತೀರೇ ? ಓರಗೆಯವರು ಖುಷಿಯಾಗಿದ್ಬಿಟ್ಟು ಬನ್ನಿ. ಈ ಮುದಿಗೊರಡು ಜತೇಲಿದ್ದರೆ ನಿಮಗೇ ಭಾರ."

"ಎಂಥಾ ಮಾತು ಅಜ್ಜಿ !"

ಅಜ್ಜಿ ನಕ್ಕಳು.

"ತಮಾಷೆಗಂದೆ ಚಿನ್ನಾ...ನಾನೂ ನೀನೂ ಇನ್ನೊಂದಿವ್ಸ ಹೋಗೋಣ. ಇವತ್ತು ನೀವಿಬ್ರೇ ಹೋಗ್ಬನ್ನಿ."

ಸುಂದರಮ್ಮ ನೇರವಾಗಿ ಮನೆಯೊಳಗೆ ಬಂದು, "ಇನ್ನೂ ಹಾಗೇ ನಿಂತಿದೀರಲ್ರೀ ?" ಎಂದಳು.

ಬನಶಂಕರಿ ಉಟ್ಟ ಸೀರೆಯಲ್ಲೆ ಹೊರಟಳು.

"ಹಾಗಾದರೆ ಬರಲೇ ಬೇಡಿ...ಏನಿದು ತಮಾಷೆ...ನಿಮ್ಮ ಮಡೀ ಸೀರೇನಾದರೂ ಉಟ್ಕೊಳ್ಳಿ."

ಅಮ್ಮಿಗೆ ಬೇರೆ ಉಪಾಯವಿರಲಿಲ್ಲ. ಆಕೆ ಬಟ್ಟೆಯ ಗಂಟಲನ್ನು ಬಿಚ್ಚಿ ಮಡಿಸೀರೆ ಯನ್ನೆತ್ತಿಕೊಳ್ಳುತ್ತಿದ್ದಾಗ ಸುಂದರಮ್ಮನ ಸೂಕ್ಷ್ಮದೃಷ್ಟಿ ಮಡಿಕೆ ಮಡಿಕೆಯಾಗಿ ಗಂಟಿನೊಳಗೆ ಕುಳಿತಿದ್ದ ಸೀರೆಯೊಂದರ ಸೊಗಸಾದ ಅಂಚಿನ ಮೇಲೆ ಬಿತ್ತು. ಆಕೆ "ತಾಳಿ!" ಎನ್ನುತ್ತ ಸರಕ್ಕನೆ ಅಲ್ಲಿಗೆ ಬಂದಳು. ಅಮ್ಮಿ ಆ ಸೀರೆಯನ್ನು ಬಚ್ಚಿಡಲು ವಿಶ್ವಪ್ರಯತ್ನ ಮಾಡಿದ್ದಾಯಿತು. ಆಗಲೇ ಇಲ್ಲ. ಮಹತ್ವದ್ದೇನನ್ನೋ ಪತ್ತೆ ಹಚ್ಚಿದ ಹಾಗೆ, ಸಂತೋಷದಿಂದ ಸುಂದರಮ್ಮ ಧರ್ಮಾವರದ ಸೀರೆಯನ್ನೆತ್ತಿ ಕುಣಿದಾಡಿದಳು.

"ನೀವು ತುಂಬ ಕೆಟ್ಟೋರು ಕಣ್ರೀ—ಇಂಥಾ ಸೀರೆ ಇಟ್ಕೊಂಡು ಹಾಗೇ ಹೊರಟಿದ್ರಲ್ರೀ..."

ಫಳಕ್ಕನೆ ಕಣ್ಣೀರು ಚಿಮ್ಮಿತು. ಸೆರಗಿನಿಂದ ಮುಖಮರೆಸಿಕೊಂಡು ಅಮ್ಮಿ ಅತ್ತಳು. ಅಜ್ಜಿಗೂ ಕೆಡುಕೆನಿಸಿತು. ಯಾವುದೋ ಅಪರಾಧಕ್ಕೆ ವಿವರಣೆ ಎಂಬಂತೆ ಆಕೆ ಹೇಳಿದಳು:

"ಇದು ಶಾನುಭೋಗರ ಮಗಳು ಕಾವೇರೀ ಸೀರೆ. ಅಮ್ಮಿಗೆ ಗೊತ್ತಿಲ್ದ ಹಾಗೆ ನಮ್ಮ ಗಂಟಿನೊಳಕ್ಕೆ ಆ ಹುಡುಗಿ ಸೇರಿಸ್ಬಿಟ್ಟಿದ್ಲು. ಇಲ್ಲಿಗೆ ಬಂದು ಬಿಚ್ಚಿದ್ಮೇಲೆಯೇ ಗೊತ್ತಾದದ್ದು. ...ಹುಚ್ಚು ಹುಡುಗಿ...ಗೆಳತೀರು...ಎಳೇ ಮಕ್ಕಳು...ಅವಕ್ಕೆಲ್ಲ ಏನು ಗೊತ್ತಿರುತ್ತೆ ಹೇಳಿ? ಅಲ್ಲದೆ—"

ಬಾಳೆಮಣ್ಣೂರು ಸೇರಿ ಗಂಟು ಬಿಚ್ಚಿ ಆ ಸೀರೆಯನ್ನು ಕಂಡಾಗ ಅಮ್ಮಿಗೆ ದುಃಖ ಉಕ್ಕಿಬಂದಿತ್ತು. ಆ ಸೀರೆಯನ್ನು ಎದೆಗವಚಿಕೊಂಡು ಕಾವೇರಿಯನ್ನು ನೆನೆಸುತ್ತ ಅವಳು ಅತ್ತಿದ್ದಳು... ಅದನ್ನು ಉಡುವ ಪ್ರಶ್ನೆ. ಅದು ಅಮ್ಮಿಯ ಪಾಲಿಗೆ ನೆನಪಿಗೋಸ್ಕರವಾದ ಸೀರೆಯಾಗಿತ್ತು—ಉಡುವುದಕ್ಕಲ್ಲ. ಆದರೆ ಈ ದಿನ? ಸುಂದರಮ್ಮ ಅಜ್ಜಿಯ ಮಾತನ್ನು ತಡೆದಳು:

"ಆ ಕಾವೇರಿ ಪುಣ್ಯವಂತೆ. ಅಂಥವರು ಎಷ್ಟು ಜನ ಸಿಗ್ತಾರೆ ಈ ಲೋಕದಲ್ಲಿ?... ಆದರೆ ಆಕೆ ಕೊಟ್ಟಿದ್ದನ್ನ ನೀವು ಮೂಲೇಲಿಟ್ಟಿರೋದು ಮಾತ್ರ ನ್ಯಾಯವಲ್ಲ."

"ಅಲ್ಲದೆ, ಅದೇನು ಉಡೋಕಾಗುತ್ಯೆ?"

"ಸೀರೆ ಮತ್ಯಾಕಿರೋದು ಅಂತ ತಿಳ್ಕೊಂಡಿದೀರಿ?"

"ಏನೋಪ್ಪಾ...ನೀವು ಹೇಳ್ತಿರೋದು ನನಗೆ ಅರ್ಥವಾಗ್ತಿಲ್ಲ."

ಸುಂದರಮ್ಮ ತನ್ನ ಪಟ್ಟ ಬಿಡಲಿಲ್ಲ. ಆ ಧರ್ಮಾವರವ ಸೀರೆಯನ್ನೇ ಅಮ್ಮಿ ಉಟ್ಟು ಕೊಂಡು ಹೊರ ಹೊರಡಬೇಕೆಂದಳು.

"ನೋಡಿದೋರು ಏನಂದಾರು?" ಎಂದಳು ಅಜ್ಜಿ.

"ಬೇಕಾದ್ದು ಅಂತಾರೆ. ಜನರ ಬಾಯಿ ಮುಚ್ಚಿಸೋದ್ಕಾಗುತ್ತಾ? ಮಗೂನ ಎತ್ಕೊಂಡು ಗಂಡನ್ನ ಕರಕೊಂಡು ಹೊರಟ ನನಗೇ ಅವರು ಅನ್ನೋಲ್ವೇನು—ನೋಡ್ರೇ ವೈಯಾರೀನ ಅಂತ? ಹಾಗೆ ಅಂದವರ ನಾಲಗೆ ಸೀದು ಹೋಗುತ್ತೆ."

"ಆದರೂ—"

"ಆದರೂ ಇಲ್ಲ ಗೀದರೂ ಇಲ್ಲ. ನಾನಿದೀನಿ. ಯಾವಳಾದರೂ ಯಾವನಾದರೂ ಏನಾರ ಅನ್ಲಿ. ಅವರ ನಾಲಗೆ ಅಲ್ಲೇ ಸೀಳದೆ ಇದ್ದರೆ ನನ್ನ ಹೆಸರು ಸುಂದರಮ್ಮನಲ್ಲ..."

ಆಕೆಯ ಅಂತಹ ಮಾತಿಗಾಗಿ ಕೃತಜ್ಞತೆಯ ಒರತೆ ಉಕ್ಕಿತು ಅಮ್ಮಿಯ ಹೃದಯ ದಲ್ಲಿ...ನನ್ನ ಹೆಸರು ಸುಂದರಮ್ಮ...ಆದರೆ ಸುಂದರಿ ನೀವು ತಿಳೀತೇನ್ರಿ?...ಸುಮ್ನೆ ಬೇಸ್ತು ಬಿದ್ದು ನಿಂತಿದೀರಲ್ರೀ...ಕನ್ನಡೀಲಿ ಮುಖ ನೋಡಿದ್ರಲ್ಲಾ ಹೇಗಿದೆ ಮುಖ? ನೀವು ಬರೇ ಮಗು ಬನಶಂಕರಮ್ಮ......

ತಾನು ಬರೇ ಮಗು. ಆದರೆ ಆ ಸೀರೆ? ಕಾವೇರಿ ಕೊಟ್ಟ ಸೀರೆ?...ಯಾಕಾದರೂ ಆಕೆ ಅದನ್ನು ಕೊಟ್ಟಳೊ?

ಸುಂದರಮ್ಮ ಸ್ವರವೇರಿಸಿ ಹೇಳುತ್ತಿದ್ದಳು:

" ಏನಿದು ? ಇಬ್ಬರೂ ಬೇಲೂರು ಬೊಂಬೆಗಳಾಗಿದೀರಲ್ಲ...ಯಾರಿಗೆ ನಾನು ಹೇಳ್ತಿರೋದು ? ಉಟ್ಕೊಳ್ರಿ ಇದನ್ನ. ನೀವು ಬರ್ತಿರೋದು ನನ್ಜತೇಲಿ, ತಿಳೀತೆ ? ಹೆದರ್ಕೋಬೇಡಿ..."

ತುಟಿ ಪಿಟಕ್ಕೆನ್ನಲಿಲ್ಲ ಬೊಂಬೆಗಳು.

" ನೀವೂ ಸರಿ. ಯಾಕಜ್ಜಿ ಸುಮ್ನಿದೀರ ? "

ಅಜ್ಜಿ ನಿಟ್ಟುಸಿರು ಬಿಟ್ಟು, ದೃಷ್ಟಿ ಬಾಗಿಸಿ, ನೆಲ ನೋಡಿದಳು.

ಅಳುತಳುತ ಹೇಳಿದಳು ಅಮ್ಮಿ :

" ನಾನು ಬರೋದಿಲ್ಲ ಸುಂದರಮ್ಮ. ನೀವು ಹೋಗ್ಬಿಟ್ಟು ಬನ್ನಿ."

ಸುಂದರಮ್ಮನ ಮುಖ ಸಿಟ್ಟು ಬೆಂಕಿಯಾಯಿತು. ಹಾಗೆಲ್ಲ ಎಂದೂ ಅವಳು ಸೋಲನ್ನೊಪ್ಪಿಕೊಂಡವಳಲ್ಲ.

" ನೀವು ಹೊರಡ್ದೇ ಇದ್ದರೆ ನಾನೂ ಹೊರಡಲ್ಲ. ಅಲ್ರೀ ಅಜ್ಜಿ.. ಒಂದು ಸೀರೆ ಉಡೋದಕ್ಕೆ ಯಾಕ್ರೀ ಅಡ್ಡಿ ? ಯಾರ ತಾತನ ಮನೆ ಗಂಟು ಹೋಗುತ್ತೆ ಅದರಿಂದ ? ಮಾತಿಗೂ ಒಂದು ಮಿತಿ ಮೇರೆ ಬೇಡವೆ ? "

ಕೊನೆಗೆ ಬೇಸತ್ತು ಅಜ್ಜಿ ಎಂದಳು :

" ಆದದ್ದಾಗಲಿ, ಸೀರೆ ಉಟ್ಕೊ ಅಮ್ಮಿ. ದೇವರು ನೋಡ್ಕೋತಾನೆ."

ಸುಂದರಮ್ಮ ಸಂತೋಷದಿಂದ ತಾನೇ ಮುಂದಾಗಿ ಅಮ್ಮಿಗೆ ಸೀರೆಯುಡಿಸಿದಳು. ನೀಳವಾದ ಆ ದೇಹದ ಸುಂದರ ರೂಪವನ್ನು ಸಮೀಪದಿಂದ ನೋಡುತ್ತ ಸುಂದರಮ್ಮ ಅಸೂಯಾಪರಳಾಗಲಿಲ್ಲ. ಅದರ ಬದಲು ಹಿಂದು ಮುಂದಿನ ಯೋಚನೆ ಇಲ್ಲದೆ ಅವಳೆಂದಳು :

" ನಿಮ್ಮ ಹಾಗೆ ನಾನಿರ್ಬೇಕಾಗಿತ್ತು ಬನಶಂಕರಿ..."

ಏನು ಅರ್ಥ ಆ ಮಾತಿಗೆ ? ಹೂ ಮುಡಿಯದೆ, ಹಣೆಗೆ ಕುಂಕುಮವಿಡದೆ ಸಕೇಶಿಯಾಗಿ...

" ಅದೆಂಥಾ ಮಾತಮ್ಮ ? " ಎಂದಳು ಅಜ್ಜಿ.

" ನಿಮಗೆ ಅರ್ಥವಾಗೊಲ್ಲ ಅಜ್ಜಿ."

ಅಮ್ಮಿಗೆ ಅರ್ಥವಾಗಿತ್ತು. ಸದ್ಯಃ ಸುಂದರಮ್ಮ ಹೆಚ್ಚು ಪೀಡಿಸಲಿಲ್ಲ. ಅಮ್ಮಿಯ ಮನೆಯ ಮುರುಕು ಕನ್ನಡಿಯನ್ನು ಕಂಡಿದ್ದ ಆಕೆ " ಕನ್ನಡಿ ನೋಡ್ರೀ " ಎನ್ನಲಿಲ್ಲ. ಆದರೆ ಸುಂದರಮ್ಮನ ಮುಖವೇ ಅಮ್ಮಿಗೆ ಕನ್ನಡಿಯಾಗಿತ್ತು. ಮೆಚ್ಚುಗೆಯ ಅಭಿಮಾನದ ಆ ದೃಷ್ಟಿಯಲ್ಲಿ ತನ್ನ ಬಿಂಬವನ್ನು ಅಮ್ಮಿ ಕಂಡಳು.

ಸುಂದರಮ್ಮನೇ, ಅಮ್ಮಿಗೆ ಸಂಕೋಚವಾಗಬಾರದೆಂದು, ಗಂಡನಿಗೆ ಮನೆಯಲ್ಲೇ ಉಳಿಯುವಂತೆ ಅನುಜ್ಞೆ ಕೊಟ್ಟಳು. ಮಗುವನ್ನೆತ್ತಿಕೊಂಡು ಬನಶಂಕರಿಯೊಡನೆ ಆಕೆ ಜಾತ್ರೆಯ ಜಾಗೆಗೆ ಹೊರಟಳು.

ನೆರೆದಿದ್ದವರೆಲ್ಲ ಅವರನ್ನು ನೋಡಿಯೇ ನೋಡಿದರು. ಅಮ್ಮಿ ಯಾರೆಂದು ತಿಳಿದಿದ್ದವರು ಮೂಗಿನ ಮೇಲೆ ಬೆರಳಿಟ್ಟರು. " ಕಾಲ ಕೆಟ್ಟು ಹೋಯ್ತು," ಎಂದರು ಕೆಲ ಮುತ್ತೈದೆಯರು. ಎಳೆವಯಸ್ಸಿನಲ್ಲೇ ತಲೆ ಬೋಳಿಸಿಕೊಂಡಿದ್ದ ಕೆಲವರು, ಅವಾಚ್ಯ ಮಾತು

ಗಳಲ್ಲಿ ತಮ್ಮ ಮನಸ್ಸಿನೊಳಗೇ ಅಮ್ಮಿಯನ್ನು ನಿಂದಿಸಿದರು. ಗಂಡಸರು ಕೆಲವರು "ಪರ ವಾಗಿಲ್ಲ ಹಾದಿಗೆ ಬರ್ತಿದಾಳೆ" ಎಂದು ಸಮಾಧಾನದ ನಿಟ್ಟುಸಿರುಬಿಟ್ಟರು.

ಸುತ್ತು ಮುತ್ತಲಿನ ಹಳ್ಳಿಗಳ ಜನರೂ ಸೇರಿ ನೂಕುನುಗ್ಗಲು ವಿಪರೀತವಾಗಿತ್ತು. ಆ ಗದ್ದಲದಲ್ಲಿ ಹಾದಿ ಬಿಡಿಸಿಕೊಂಡು ಅತ್ತಿತ್ತ ಚಲಿಸುವುದು ಕಷ್ಟಸಾಧ್ಯವಾಯಿತು. ಜನರ ಚಕ್ರ ವ್ಯೂಹದೊಳಗೆ ಸಿಲುಕಿಕೊಂಡಾಗ ಸುಂದರಮ್ಮ ನಗುತ್ತಿದ್ದಳು. ಮಡಿಯೋ ಮೈಲಿಗೆಯೊ? ಯಾರು ಭುಜ ಒರಸಿಕೊಂಡು ಹೋದರೂ ಸರಿಯೆ, ಆಕೆಗೆ ಅದರ ಪರಿವೆ ಇರಲಿಲ್ಲ. ಆದರೆ ಬನಶಂಕರಿ ಬಹುಮಟ್ಟಿಗೆ ಹೆಂಗಸರ ಗುಂಪಿಗೇ ಅಂಟಿಕೊಂಡಿರಲು ಬಯಸುತ್ತಿದ್ದಳು. ಎಷ್ಟೊಂದು ಜನ ಅವಳನ್ನು ನೋಡುತ್ತಿದ್ದರು! ವಿಧವಿಧದ ದೃಷ್ಟಿಗಳೋ! ಕೆಲವರಿಗೆ ಹಸಿವಿನಿಂದ ಕಬಳಿಸುವ ಬಯಕೆ. ಬೇರೆ ಕೆಲವರಿಗೆ ಮೆಚ್ಚುಗೆಯ ರಸಾಸ್ವಾದನೆ. ಇನ್ನು ಕೆಲವರಿಗೆ, ಆಕೆಯ ವ್ಯಕ್ತಿತ್ವವನ್ನು ಅಳೆಯುವ ತವಕ...

ಅಮ್ಮಿ, ಸುಂದರಮ್ಮನ ಮಗುವನ್ನೆತ್ತಿಕೊಂಡಳು. ಎರಡು ವರ್ಷಗಳ ಮುದ್ದು ಮುದ್ದಾದ ಹೆಣ್ಣುಮಗು. ಆ ಗದ್ದಲದಲ್ಲೂ ಅದು ಅಳದೆ ಬೆರಗು ದೃಷ್ಟಿಯಿಂದ ಸುತ್ತಲೂ ನೋಡುತ್ತಿತ್ತು...ಕನಸು ಕಾಣುತ್ತಿದ್ದ ಅಮ್ಮಿಯ ಕಣ್ಣುಗಳು ತೇವವಾದುವು.

...ಕಾವೇರಿ—ಆಕೆ ಹೆತ್ತಿರಬಹುದು ಈಗ... ಮಾವ—ಅತ್ತೆ ಹೇಗಿರುವರೋ? ಬಾಳೆ ಮಣ್ಣೂರಿನ ಜಾತ್ರೆಗೆ ಯಾರಾದರೂ ಬಂದಿರಬಹುದೆ? ಈ ಊರು ಬಲು ದೂರ—ಯಾಕೆ ಬರುತ್ತಾರೆ?...

ಅಮ್ಮಿಗೆ ಒಮ್ಮಿಂದೊಮ್ಮೆಲೆ ತನ್ನ ಗಂಡನ ನೆನಪಾಯಿತು...ಹದಿನೇಳು ಹದಿನೆಂಟರ ಹುಡುಗ—ಆ ಮಾಟವಾದ ಮೈಕಟ್ಟು—ಮೋಹಕವಾಗಿದ್ದ ಆ ನಗೆ,... ಆ ಬಳಿಕ ಆ ದಿನ ಮನೆಯ ಎದುರು ಸಂಧಿಸಿದ ಆ ಯುವಕ.

ಅಮ್ಮಿ ಮಗುವನ್ನೆತ್ತಿಕೊಂಡಿದ್ದಂತೆಯೇ ಅತ್ತಿತ್ತ ನೋಡಿದಳು. ಮಗುವಿನ ಕಾಲ್ತುಳಿತಕ್ಕೆ ಸಿಲುಕಿ ಜಾರಿದ್ದ ಸೆರಗನ್ನು ಸರಿಪಡಿಸಿದಳು...ಎತ್ತೆತ್ತಲೋ ಸಂಚರಿಸಿತು ಅವಳ ದೃಷ್ಟಿ.

ಮನೆಯಿಂದ ಹೊರಟಾಗ ಆಕೆಯ ಬರಿದಾಗಿದ್ದ ಬೋಳು ಬೋಳಾಗಿದ್ದ ಹೃದಯದಲ್ಲಿದ್ದು ದೊಂದೇ ಭಾವನೆ—ಸುಂದರಮ್ಮನ ಬಗೆಗೆ ಕೃತಜ್ಞತೆ. ಆ ಬಳಿಕ ಜಾತ್ರೆಯ ಜನಸಂದಣಿ ವಿವರಿಸಲಾಗದ ವಿವಿಧ ಭಾವನೆಗಳನ್ನು ಆಕೆಯ ಹೃದಯದಲ್ಲಿ ತುಂಬಿತ್ತು. ಮನಸ್ಸು ಅರಳಿ ತನ್ನೆದೆ ಸ್ಪಂದಿಸುತ್ತಿದ್ದಂತೆ ಅವಳಿಗೆ ತೋರುತ್ತಿತ್ತು.

ಆದರೆ ಗತಸ್ಮರಣೆಗಳು ಮುತ್ತಿಗೆ ಹಾಕಿದಾಗ ಈಗ ಒಮ್ಮೆಲೆ—

ಅದೆಂತಹ ನೋವು! ಅಮ್ಮಿಯ ಮುಖ ನಿಸ್ತೇಜವಾಯಿತು. ಕೈಕಾಲುಗಳು ಅಸ್ಥಿರ ವಾದುವು...

ಮಗು ಅಳತೊಡಗಿತು.

ಸುಂದರಮ್ಮ ಸೂಕ್ಷ್ಮವಾಗಿ ಅಮ್ಮಿಯ ಮಾನಸಿಕ ತಾಕಲಾಟವನ್ನು ಗ್ರಹಿಸಿದಳು.

"ನಡಿ ಬನಶಂಕರಿ. ಮನೆಗೆ ಹೋಗೋಣ. ಈ ಗಲಾಟೆ ನೋಡಿದರೆ ಬೇಸರ ವಾಗುತ್ತೆ."

ಅದು ನಿಜವಾಗಿದ್ದರೂ ಅಮ್ಮಿಯನ್ನು ತೃಪ್ತಿಪಡಿಸಲೆಂದು ಆಕೆ ಹಾಗೆ ಹೇಳಿದಳು.

ಆದರೆ ಅಮ್ಮಿಗೆ ಹೊಳೆದುದು ಆ ಮಾತಿನಲ್ಲಿದ್ದ ಆತ್ಮೀಯ ಧ್ವನಿ—ಏಕವಚನದ

ಸಲಿಗೆಯ ಸಂಬೋಧನೆ. ಅದು ಬಲು ಪ್ರಿಯವಾಗಿ ಅಮ್ಮಿಗೆ ತೋರಿತು.

ಸುಂದರಮ್ಮ ಹಿಂತಿರುಗುತ್ತ, ಪಾಣಿ ಸರಕುಗಳ ಅಂಗಡಿಗೆ ಹೋದಳು. ಅಲ್ಲಿ ಹೆಚ್ಚು ಚರ್ಚೆಮಾಡದೆಯೇ, ನಾಲ್ಕು ಕಾಸು ಹೆಚ್ಚು ಕೊಟ್ಟೇ, ಒಳ್ಳೆಯ ಒಂದು ಕನ್ನಡಿಯನ್ನೂ ದಂತದೊಂದು ಬಾಚಣಿಗೆಯನ್ನೂ ಕೊಂಡಳು.

"ಯಾಕೆ ಸುಂದರಮ್ಮ, ಮನೆಯಲ್ಲಿ ಕನ್ನಡಿಯಿಲ್ಲವೆ ?" ಎಂದು ಅಮ್ಮಿ ಕೇಳಿದರೂ ಸುಂದರಮ್ಮ ಸರಿಯಾದ ಉತ್ತರ ಕೊಡಲಿಲ್ಲ. "ಇನ್ನೊಂದು ಇದ್ದರೆ ತಪ್ಪೇನು ?" ಎಂದು ಮಾತು ಹಾರಿಸಿದಳು.

ಮನೆ ಸಮೀಪಿಸಿದಂತೆ ಸುಂದರಮ್ಮನೆಂದಳು :

"ಬನಶಂಕರಿ...ಇನ್ನು ನಿನ್ನನ್ನ ಹೋಗೇ ಬಾರೆ ಅಂತ ಕರೀತೀನಿ."

ಆ ಮಾತಿನ ಹಿಂದಿನ ನಿರ್ಮಲ ಅಂತಃಕರಣ ಅಮ್ಮಿಯ ಮನಸ್ಸನ್ನು ಕಲಕಿತು.

"ಆಗಲಿ ಅಕ್ಕಾ."

"ಅಕ್ಕನೋ ತಂಗಿಯೋ, ನೀನು ನನಗಿನ್ನು ಅಮ್ಮಿ. ನಾನು ನಿನಗೆ ಸುಂದರಿ. ತಿಳೀತೆ ?"

"ಆಗಲಿ."

ಅಜ್ಜಿ ಮನೆಯಲ್ಲೆ ಇದ್ದಳು. ಆಕೆಯ ಕಣ್ಣುಗಳು ಕೆಂಪಗಾಗಿದ್ದುವು.—ಊದಿ ಕೊಂಡಿದ್ದುವು. ಆಕೆ ಅಳುತ್ತಿದ್ದಹಾಗಿತ್ತು.

"ಬೇಗನೆ ಬಂದಿರಲ್ಲೆ..." ಎಂದಳು ಅಜ್ಜಿ.

ಸುಂದರಮ್ಮ ಉತ್ತರವಿತ್ತಳು :

"ಹೂನಜ್ಜಿ...ಅದೇನು ಸುಡುಗಾಡು ಜಾತ್ರೆಯೋ ! ಯಾರಿಗೆ ಬೇಕು ಹೇಳಿ ?"

ಆಕೆ ಕನ್ನಡಿಯನ್ನೂ ಬಾಚಣಿಗೆಯನ್ನೂ ನೆಲದಮೇಲಿಟ್ಟಳು. ಬನಶಂಕರಿಯ ಕೈ ಯಿಂದ ಮಗುವನ್ನೆತ್ತಿಕೊಂಡಳು.

"ಸುಮ್ನೆ ಮಾತಾಡ್ದೆ ಅದನ್ನು ತಗೊಳ್ಳಿ. ಅಮ್ಮಿಗೆ ನಾನು ಕೊಟ್ಟಿರೋದು," ಎನ್ನುತ್ತಾ, ಮರುಮಾತಾಡಲು ಅಜ್ಜಿಗಾಗಲಿ ಅವಕಾಶ ಕೊಡದೆ, ಸುಂದರಮ್ಮ ತನ್ನ ಮನೆಗೆ ಹೋದಳು.

## ೭

ಅಮ್ಮಿ ಅಂಗೈಗಳಿಂದ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಸುಂದರಮ್ಮ ಆಕೆಯ ಮೈದಡವಿದಳು.

"ಏನಾಗಿದೇಂತ ಅಳೋದು ? ಯಾರಿಗೆ ಏನಾಗಿದೆ ಈಗ ?"

ಅಂತಹ ವಿಶೇಷವೇನೂ ಆಗಿರಲಿಲ್ಲ ! ಕೆಮ್ಮು ನೆಗಡಿ ಮೈ ಕೈ ನೋವು ಎಂದು ಅಜ್ಜಿ ನಾಲ್ಕು ದಿನಗಳಿಂದ ನರಳುತ್ತಿದ್ದಳು, ಅಷ್ಟೆ.

"ನೆಗಡಿ ಕೆಮ್ಮು ಯಾರಿಗೆ ಆಗೊಲ್ಲ ? ಇಷ್ಟಕ್ಕೆಲ್ಲಾ ಹೀಗೆ ಗೋಳಾಡಿದರೆ—ನೀನೂ

ಸರೀನೇ."

ಮಗುವನ್ನು ಸಂತೈಸುವ ಹಿರಿತನವಿತ್ತು ಸುಂದರಮ್ಮನ ಧ್ವನಿಯಲ್ಲಿ. ಅಂತರ್ಯದಲ್ಲಿ ಆಕೆಯೂ ಕಾತರಳೇ ಆಗಿದ್ದಳು. ಯುವತಿ ಬನಶಂಕರಿಯ ಒಬ್ಬಳೇ ಒಬ್ಬಳು ಆಸರೆ ಆ ಅಜ್ಜಿ. ಆಕೆಗೆ ಏನಾದರೂ ಆಯಿತೆಂದರೆ ಮುಂದೆ ಅಮ್ಮಿಯ ಗತಿ ಏನು? ಆ ವಿಷಯ ಯೋಚಿಸುವುದಕ್ಕೂ ಸುಂದರಮ್ಮ ಅಪೇಕ್ಷಿಸಲಿಲ್ಲ. ತನ್ನ ಮನಸ್ಸಿನ ಗಲಿಬಿಲಿಯನ್ನು ತೋರ್ಪಡಿಸದೆಯೇ ಆಕೆ ಅಮ್ಮಿಯನ್ನು ಸಂತವಿಡಲು ಯತ್ನಿಸಿದಳು.

ಅಳು ನಿಲ್ಲಿಸಿ ಅಮ್ಮಿ ಎಂದಳು :

"ದೇವಸ್ಥಾನಕ್ಕೆ ಹೋಗಿ ಪ್ರಸಾದ ತಾ ಅಂತಾಳೆ ಅಜ್ಜಿ. ನನಗೆ ಇಷ್ಟವಿಲ್ಲ ಅಕ್ಕ."

"ಬೇಡ. ಅರ್ಚಕರಿಗೇ ಇರಲಿ ಆ ಪ್ರಸಾದ. ಮನೇಲೆ ಅಡುಗೆ ಮಾಡು. ಸಾಂಬಾರ ಪುಡಿ ತರಕಾರಿ ಏನಾದರೂ ಬೇಕಾದರೆ ಹೇಳು. ನಾನು ಕೊಡ್ತೀನಿ."

"ಆದರೆ ಎಷ್ಟು ದಿನ ಹೀಗೆ ಮಾಡೋದು ಸಾಧ್ಯ ಅಕ್ಕ?"

ಅದೊಂದು ಉತ್ತರ ದೊರೆಯದ ಕೂಟ ಪ್ರಶ್ನೆ. ಎಷ್ಟು ದಿನ ಹೀಗೆ ಮಾಡುವುದು ಸಾಧ್ಯ? ಎಷ್ಟು ದಿನ?

"ಇಲ್ಲ ಅಕ್ಕ, ದೇವಸ್ಥಾನಕ್ಕೇ ಹೋಗ್ತೀನಿ ಅಕ್ಕ. ಪ್ರಸಾದ ತರ್ತೀನಿ. ನಾಳೆಯಿಂದ ಅಲ್ಲಿ ಕಸ ಗುಡಿಸಿ ಸೇವೇನೂ ಮಾಡ್ತೀನಿ. ವಯಸ್ಸಾಯ್ತು ಅಜ್ಜಿಗೆ. ಆಕೆ ಇನ್ನೂ ದುಡಿಯೋದು ಸರೀನಾ?"

ಉತ್ತರ ರೂಪವಾಗಿ ಸುಂದರಮ್ಮ ನಿಟ್ಟುಸಿರು ಬಿಟ್ಟಳು...ಯುವತಿ ಬನಶಂಕರಿ ದೇವಸ್ಥಾನವಲ್ಲಿ ಸೇವೆ ಮಾಡಬೇಕಾದ ಪ್ರಮೇಯ. ರಾಮಶಾಸ್ತ್ರಿಯ ಹೆಂಡತಿಯಾದ ಸುಂದರಮ್ಮನಿಗೆ ಆ ಸೇವೆಯ ಗಂಭೀರ ಸ್ವರೂಪದ ಅರಿವಿತ್ತು. ಐದು ವರ್ಷಗಳ ಹಿಂದೆ ಆಕೆಯ ಊರಲ್ಲಿ ನಡೆದ ಘಟನೆ...ವಯಸ್ಸಿನಲ್ಲಿ ಹಿರಿಯಳಾಗಿದ್ದರೂ ಸುಂದರಮ್ಮನ ಗೆಳತಿಯಾಗಿದ್ದ ರಾಧಾ ವೈಧವ್ಯ ಪ್ರಾಪ್ತವಾಗಿ ಊರಿಗೆ ವಾಪಸು ಬಂದಳು. ನೀಳವಾಗಿದ್ದ ಸುಂದರವಾಗಿದ್ದ ಆಕೆಯ ಕೇಶರಾಶಿಯನ್ನು ಕತ್ತರಿಸಿ ತಲೆ ಬೋಳಿಸಿದರು. ಕೂದಲು ಮತ್ತೆ ಬೆಳೆಯಿತು. ಬೆಳೆದ ಹಾಗೆಲ್ಲ ಅದನ್ನು ಕತ್ತರಿಸಿದರು. ಆದರೆ ಬಡತನದ ಹಿಡಿ ಅನ್ನವಷ್ಟೇ ದೊರೆತರೂ ರಾಧಾ ಬೆಳೆದಳು. ಆ ಬೆಳವಣಿಗೆಯನ್ನು ಅದುಮಿ ಇಡುವುದು ಸಾಧ್ಯವಾಗಲಿಲ್ಲ. ಕೊನೆಗೆ ಹದಿನೆಂಟು ವರ್ಷ ವಯಸ್ಸಿನ ರಾಧಾ ದೇವರ ಸೇವೆಗೆಂದು ಊರಿನ ದೇವಸ್ಥಾನಕ್ಕೆ ಹೋದಳು. ದೇವರಿಗೆ ನೈವೇದ್ಯ ಅರ್ಪಿತವಾದ ಮೇಲೆ ಆಕೆಯ ಸೇವೆಗೆ ಪ್ರತಿಫಲವಾಗಿ ಪ್ರಸಾದ ದೊರೆಯುತಿತ್ತು. ಆದರೆ ಅಷ್ಟೇ ಆಗಿದ್ದರೆ—! ಸುಂದರಮ್ಮ ಚೊಚ್ಚಲ ಹೆರಿಗೆಗೆಂದು ತಾಯ್ಮನೆಗೆ ಬಂದಿದ್ದ ಸಮಯ. ಒಂದು ಬೆಳಗು ಮುಂಜಾನೆ ದೇವಸ್ಥಾನದ ಕೆರೆಯಲ್ಲಿ ರಾಧೆಯ ಶವ ತೇಲುತ್ತಿದ್ದುದನ್ನು ಯಾರೋ ಕಂಡರು. ಆತ್ಮಹತ್ಯೆ—ಭ್ರೂಣಹತ್ಯೆ ಎಂದೆಲ್ಲ ಮಾತನಾಡಿಕೊಂಡರು...ಕೊನೆಗೂ ಏನಾಯಿತು? ಮಂತ್ರೋಚ್ಚಾರಣೆ ದೇವಸ್ಥಾನವನ್ನು ಪವಿತ್ರಗೊಳಿಸಿತು, ಅಷ್ಟೆ. ರಾಧಾ ಸತ್ತವಳು ಸತ್ತೇಹೋದಳು.

ಆಗ ಕರುಳು ಕಿವುಚಿಬಂದಿತ್ತು ಸುಂದರಮ್ಮನಿಗೆ...ಒಡನಾಟದ ಆ ಸ್ನೇಹಿತೆಗೆ ಒದಗಿದ ದುರ್ಗತಿ...ಅದರ ನೆನಪಾದಾಗಲೆಲ್ಲ ಮೈ ನಡುಗುತ್ತಿತ್ತು...ಈಗ ಈ ಬನಶಂಕರಿ...ಕೂದಲು ಇಲ್ಲದೆ ವಿರೂಪವಾಗಿದ್ದ ರಾಧೆಯನ್ನೇ ಧರ್ಮರಕ್ಷಕರು ಬಿಟ್ಟಿರಲಿಲ್ಲ. ಸಕೇಶಿಯಾದ

ಸುಂದರಿಯಾದ ಯುವತಿ ಬನಶಂಕರಿಯನ್ನು ಸುರಕ್ಷಿತವಾಗಿ ಅವರು ಇರಗೊಡುವುದುಂಟೆ ?

ಸುಂದರಮ್ಮನ ಮೌನವನ್ನು ಕಂಡು ಅಮ್ಮಿ ತಗ್ಗಿದ ಧ್ವನಿಯಲ್ಲಿ ಹೇಳಿದಳು :

" ಬೇಸರವಾಯ್ತೆ ಅಕ್ಕ ? "

ಆ ಪ್ರಶ್ನೆ ಕೇಳಿ ಸುಂದರಮ್ಮನ ಮನಸ್ಸಿಗೆ ನೋವಾಯಿತು. ಸಹಾನುಭೂತಿಯ ಉದ್ವೇಗದಿಂದ ಕಣ್ಣುಗಳು ಹನಿಗೂಡಿದುವು. ಭಾವನೆಗಳನ್ನು ತನ್ನೊಳಗೇ ಹತ್ತಿಕ್ಕಲು ಆಕೆ ಯತ್ನಿಸಿದಳು.

" ಇಲ್ಲ ಬನೂ. ಯಾಕೆ ಬೇಸರ ಹೇಳು ? "

ಅಮ್ಮಿ ಸಾವರಿಸಿಕೊಂಡು ಎದ್ದು ನಿಂತಳು.

" ಮನೆಗೆ ಹೋಗ್ತೀನಕ್ಕಾ. ಒಂದಿಷ್ಟು ಕಷಾಯ ಮಾಡ್ಕೊಡ್ತೀನಿ ಅಜ್ಜಿಗೆ. ಪಂಡಿತ ರಿಂದ ಏನಾದರೂ ಔಷಧೀನೂ ತರ್ಬೇಕು.

" ನಾನೂ ಬರ್ತೀನಿ ನಡಿ—"

ಸ್ನಾನಮಾಡಿ ಮಡಿಯುಟ್ಟು ತಪ್ಪಲೆಯನ್ನೆತ್ತಿಕೊಂಡು ಅಮ್ಮಿ ದೇವಸ್ಥಾನಕ್ಕೆ ಹೊರಟು ನಿಂತಾಗ ಸುಂದರಮ್ಮನೆಂದಳು :

" ಹೆದರ್ಬೇಡ ಕಣೇ, ಯಾರ್ರೂಗೂ ಹೆದರ್ಬೇಡ. ಯಾವಾನಾದರೂ ಒಂದು ಮಾತು ಜಾಸ್ತಿ ಆಡಿದ ಅಂದರೆ ನನಗೆ ಹೇಳು. ನಿನ್ನತೇಲೇ ಬಂದು ಅವನ ನಾಲಗೆ ಸಿಗ್ದ್ಹಾಕ್ತೀನಿ ! "

ಎಷ್ಟೊಂದು ಹಿತಕರವಾಗಿತ್ತು ಧೈರ್ಯದ ಆ ಮಾತು ! ಸುಂದರಮ್ಮ ದೇವತೆಯಾಗಿ ಕಂಡಳು ಅಮ್ಮಿಗೆ. ಆಕೆ ಆವರೆಗೆ ಆಡಿದ್ದ ಪ್ರತಿಯೊಂದೊಂದು ಮಾತನ್ನೂ ಸ್ಮರಿಸುತ್ತ ಬನಶಂಕರಿ ದೇವಾಲಯಕ್ಕೆ ಹೋದಳು.

ಹಾದಿಯುದ್ದಕ್ಕೂ ಆಕೆ ನೆಲ ನೋಡುತ್ತ ತಲೆಬಾಗಿಯೇ ನಡೆದಳು. ಅಮ್ಮಿ ಉಟ್ಟಿದ್ದುದು, ಬಣ್ಣ ಬಿಳುಪಿಗೆ ತಿರುಗಿದ್ದರೂ ಸ್ವಚ್ಛವಾಗಿದ್ದೊಂದು ನೀಲಿ ಸೀರೆ. ಮೇಲು ಮೈಯನ್ನು ಮುಚ್ಚಿದ್ದುದೊಂದು ಬಿಳಿಯ ರವಕೆ. ದುಗುಡದ ದ್ಯೋತಕವೆಂಬಂತೆ ಕೆನ್ನೆಗಳು ಕೆಂಪಾಗಿದ್ದುವು. ನೀರಿನಲ್ಲಿ ತೋಯ್ದು ಒಣಗಿದ್ದ ಗುಂಗುರುಕೂದಲು ಗಾಳಿಗೆ ಅತ್ತಿಂದಿತ್ತ ನರ್ತಿಸುತಿತ್ತು. ಸುಂದರವಾದ ಕಣ್ಣ ಬೊಂಬೆಗಳೆರಡು ವಿಶಾಲವಾದ ಎವೆಗಳೊಳಗೆ ಅವಿತಿದ್ದುವು. ರಸಿಕ ಶಿಲ್ಪಿಯ ದಿವ್ಯಸೃಷ್ಟಿಯೊಂದು ಜೀವ ತಳೆದು ಚಲಿಸಿದ ಹಾಗೆ ಅಮ್ಮಿ ದೇವಸ್ಥಾನಕ್ಕೆ ಬಂದಳು. ಮಂಗಳಾರತಿಯಾಗುವ ತನಕವೂ ಆಕೆ ಹೊರ ಅಂಗಣದಲ್ಲೆ ನಿಂತಳು. ದೇವಸ್ಥಾನದ ಹೆಬ್ಬಾಗಿಲಲ್ಲೆ ನಿಂತಿದ್ದ ಮುತ್ತೈದೆಯರು ಕೆಲವರು, ವಿಧವೆಯರು ಕೆಲವರು, ಅಮ್ಮಿಯನ್ನು ಕಂಡರು. ಕೆಲವರು ತಮ್ಮೊಳಗೇ ಗುಸಗುಸ ಮಾತನಾಡಿದರು. ನಿರ್ವಿಕಾರಳಾಗಿ ಅಮ್ಮಿ ಅದೆಲ್ಲವನ್ನೂ ಸಹಿಸಿಕೊಂಡಳು.

ಪ್ರಸಾದ ಪಡೆಯುತ್ತಿದ್ದಾಗ ತಪ್ಪಲೆಯನ್ನು ಮುಂದೆ ನೂಕಿ ಅಮ್ಮಿ ಎಂದಳು :

" ಅಜ್ಜಿಗೆ ಮೈ ಸರಿ ಇಲ್ಲ."

ವಯಸ್ಸಾಗಿದ್ದ ಅರ್ಚಕರು ಕನಿಕರದ ಸ್ವರದಿಂದ ಕೇಳಿದರು :

" ಯಾರು? ಸುಬ್ಬಕ್ಕನ ಮೊಮ್ಮಗಳೋ? ಅಯ್ಯೋ ಪಾಪ ! ಏನು ಜ್ವರವೆ? ನೆಗಡೀನೆ ? ವಯಸ್ಸಾಯ್ತು…ಪಾಪ ! "

ತಲೆಬಾಗಿಯೆ ಇದ್ದ ಬನಶಂಕರಿ ತಪ್ಪಲೆಯನ್ನೆತ್ತಿಕೊಂಡಳು.

"ಪಂಡಿತರಿಂದ ಏನಾದರೂ ಔಷಧಿ ಕೇಳಿ ಇಸಗೊಂಡು ಹೋಗು ತಾಯಿ...ಅಲಕ್ಷ್ಯ ಮಾಡ್ಬೇಡ," ಎಂದರು ಅರ್ಚಕರು.

"ಹೂಂ..."

"ಸುಬ್ಬಕ್ಕ ಬರೋದು ಇನ್ನೆಷ್ಟು ದಿನವೊ? ಇಲ್ಲಿ ಸೇವೆ ಮಾಡೋಕೆ—"

ಆ ಪ್ರಶ್ನೆಯನ್ನು ನಿರೀಕ್ಷಿಸಿಯೇ ಇದ್ದ ಅಮ್ಮಿ ಉತ್ತರವಿತ್ತಳು :

"ನಾಳೆಯಿಂದ ನಾನು ಬರ್‍ತೀನಿ. ಅಜ್ಜೀನೆ ಹೇಳಿದ್ದಾಳೆ."

"ಹೌದಮ್ಮ, ಹಾಗೇ ಮಾಡು. ಇಲ್ಲದೇ ಹೋದರೆ ಪಾರುಪತ್ಯಗಾರರ ಟೀಕೆ ಸಹಿಸೋರು ಯಾರು? ಅಂತೂ ಕಷ್ಟ—ಪಾಪ!"

ವಯಸ್ಸಾದ ಅರ್ಚಕರು ಧರ್ಮಭೀರುವೇ ಆಗಿದ್ದರು. ಅಂಥವರ ಬಳಿಯಲ್ಲಿ ನಿಂತಾಗ ಅಮ್ಮಿ ಅಧೀರಳಾಗುತ್ತಿರಲಿಲ್ಲ. ಆದರೆ ದೇವಸ್ಥಾನದ ಮಠದ ಇತರ ಹಲವರ ನೋಟ ಗಳನ್ನು ದಾಟಿ ಬರುವುದು ಬಲು ಕಷ್ಟವಾಗುತ್ತಿತ್ತು.

ನಾಲ್ಕು ದಿನ ಅಮ್ಮಿ ದೇವಸ್ಥಾನದಲ್ಲಿ ಕಸ ಗುಡಿಸುವ ಸೇವೆ ಮಾಡಿದಳು. ಅಷ್ಟರಲ್ಲೆ ಅಜ್ಜಿಗೆ ಗುಣವಾಯಿತು. "ಸದ್ಯಃ ಈ ಸಾರೆ ಆ ಮಹಾರಾಯನ ಕೈಯಿಂದ ತಪ್ಪಿಸ್ಕೊಂಡೆ," ಎಂದಳು ಸುಬ್ಬಕ್ಕ, ಯಮರಾಯನನ್ನು ನೆನೆದು.

"ಹಾಗನ್ಬೇಡ, ನಿನಗೆ ನೂರು ವರ್ಷ ಆಯುಸ್ಸು ಅಜ್ಜಿ" ಎಂದಳು ಅಮ್ಮಿ.

"ನೂರು ವರ್ಷ ಬದುಕಿ ನನ್ಗೇನಪ್ಪಾ ಇನ್ನು ಆಗ್ಬೇಕಾದ್ದು?"

ಆ ಅಜ್ಜಿಗೆ ಆಗಬೇಕಾದುದು ಏನು ಉಳಿದಿತ್ತು? ಏನೂ ಇಲ್ಲ. ಹತ್ತು ಜನರಿಗೆ ಸಾಕಾಗುವಷ್ಟು ಸಂಕಟಗಳನ್ನು ಒಬ್ಬಳೇ ಅನುಭವಿಸಿದ್ದ ಸಾಹಸಿ ಆಕೆ. ನೋವು ನರಳಾಟ ಗಳಿಲ್ಲದೆ ತಾನು ಕಣ್ಣು ಮುಚ್ಚಿದಳೆಂದರೆ ಅದೇ ಅವಳ ಪಾಲಿಗೆ ಪರಮ ಸುಖ. ಆದರೆ ಆಗ— ಆಗ ಅಮ್ಮಿಯ ಗತಿ ಏನು? ಅಮ್ಮಿಗಾಗಿ ಅವಳಿನ್ನೂ ಉಸಿರುಹಿಡಿದಿರಬೇಕು. ಆದರೆ ಹಾಗೆ ಬದುಕಿರಬೇಕಾದುದು ಎಷ್ಟು ಕಾಲ? ಬಾರಿಬಾರಿಗೂ ಉತ್ತರ ದೊರೆಯದೆ ಆ ಪ್ರಶ್ನೆ ಆಕೆಯ ಕಣ್ಣೆದುರು ನಿಲ್ಲುತ್ತಿತ್ತು.

ಬನಶಂಕರಿ ಸುಂದರಮ್ಮನ ಸಾಮೀಪ್ಯದಲ್ಲಿ ಗೆಳೆತನದಲ್ಲಿ ಆಕೆಯ ಮಗುವನ್ನಾಡಿಸುತ್ತ ದಿನ ಕಳೆದಳು.

ಸುಂದರಮ್ಮನಿಗೆ ಸೊಗಸಾದ ಕಂಠವಿತ್ತು. ಆಕೆ ದೇವರನಾಮ ಹಾಡುತ್ತಲಿದ್ದರೆ, ಆ ನಾದಮಾಧುರ್ಯದಲ್ಲಿ ಮೈ ಮರೆತು ಬನಶಂಕರಿ ಕಾಲ ಕಳೆದುದರ ಕಲ್ಪನೆಯೇ ಇಲ್ಲದೆ ಕುಳಿತುಬಿಡುತ್ತಿದ್ದಳು.

ಅಮ್ಮಿಯೂ ಹಾಡಬೇಕೆಂದು ಸುಂದರಮ್ಮ ಒಂದೆರಡು ಸಾರೆ ಒತ್ತಾಯಿಸಿದ್ದಳು. ಅಮ್ಮಿ ಒಪ್ಪಿರಲಿಲ್ಲ. ಮಧುರ ಕಂಠವಿರಲಿಲ್ಲ ಆಕೆಗೆ.

ಆಗ, "ಹೋಗಲಿ ಬಿಡು" ಎಂದಿದ್ದಳು ಸುಂದರಮ್ಮ; "ಆ ದೇವರಿಗೆ ನಿನ್ನ ಕಂಠದಿಂದ ಕೀರ್ತನೆ ಕೇಳುವ ಭಾಗ್ಯ ಇಲ್ಲ."

ಆದರೆ ಮನಸ್ಸಿನೊಳಗೆ ಸುಂದರಮ್ಮ ಅಂದುಕೊಂಡುದೇ ಬೇರೆ. ಅಮ್ಮಿಗೆ ಹಾಡಲು ಬರುವುದಿಲ್ಲವೆಂದು ಅವಳಿಗೆ ಒಂದು ರೀತಿಯ ಸಮಾಧಾನವೇ ಆಗಿತ್ತು. ಅಸೂಯೆಯಿಂದ ಹುಟ್ಟಿದ್ದಲ್ಲ ಆ ಸಮಾಧಾನ. ಬನಶಂಕರಿಗೆ ಇಂಪಾದ ಕಂಠವಿತ್ತೆಂದರೆ ಯಾರಿಗೆ ಏನು ಲಾಭ

ವಾಗುತ್ತಿತ್ತು ? ಹಾಡುವ ಸ್ವಾತಂತ್ರ್ಯವಾದರೂ ಎಲ್ಲಿರುತ್ತಿತ್ತು ಅವಳಿಗೆ ? ಅನ್ಯಾಯವಾಗಿ ಆ ಪ್ರತಿಭೆಯ ಕೇಶಮುಂಡನ ಮಾಡಿ ಅದನ್ನು ಬಚ್ಚಿಡಬೇಕಾಗುತ್ತಿತ್ತು, ಅಷ್ಟೆ...ಅಷ್ಟರ ಮಟ್ಟಿಗಾದರೂ ಅಮ್ಮಿಯ ಮನಸ್ಸಿನ ನೋವು ಈಗ ಕಡಿಮೆಯಾಗುತ್ತದೆಂದು ಸುಂದರಮ್ಮನ ಯೋಚನೆ.

ರಸಿಕ ರಾಮಶಾಸ್ತ್ರಿ ಸಂಸ್ಕೃತ ವಿದ್ವಾಂಸನಾಗಿದ್ದ. ತನಗಾದ ರಸಾನುಭವದ ಪರಿಚಯವನ್ನು ತನ್ನಾಕೆಗೂ ಸ್ವಲ್ಪಮಟ್ಟಿಗೆ ಮಾಡಿಕೊಡುವುದು ಆತನ ಅಭ್ಯಾಸವಾಗಿತ್ತು. ಅಗಾಧ ಜ್ಞಾಪಕ ಶಕ್ತಿಯಿದ್ದ ಸುಂದರಮ್ಮ ಎಷ್ಟೋ ಕಥೆಗಳನ್ನು ಹೇಳಬಯಸುತ್ತಿದ್ದಳು. ಆ ಕಥೆಗಳು ಕೇಳಲು ರಮ್ಯವಾಗಿರುತ್ತಿದ್ದುವು. ಹಾಗೆ ಕಥೆ ಹೇಳುತ್ತಿದ್ದಾಗ, ಶೃಂಗಾರ-ಪ್ರೇಮದ ಸಂದರ್ಭಗಳನ್ನೆಲ್ಲಾ ಅಮ್ಮಿಯ ಎದುರು ಮೊಟಕುಮಾಡಿ ಮುಂದುವರಿಸುತ್ತಿದ್ದಳು. ಅಮ್ಮಿಗೆ ಒಮ್ಮೊಮ್ಮೆ ಅದು ಅರ್ಥವಾಗುತ್ತಿತ್ತು. ಆಗ ಆಕೆಯ ಕಿವಿಗಳು, ಬಲು ಹಿತವಾಗಿ ಯಾರೋ ಹಿಂಡಿದ ಹಾಗೆ, ಕೆಂಪಗೆ ಆಗುತ್ತಿದ್ದುವು.

ಒಂದು ದಿನ ಸಂಜೆ ಪುರಾಣ ಕೇಳಲು ಹೋಗಿದ್ದ ಅಜ್ಜಿ ಸ್ವಲ್ಪ ತಡವಾಗಿಯೆ ವಾಪಸು ಬಂದಳು. ಮನೆಯಲ್ಲಿ ಅಮ್ಮಿ ಮತ್ತು ಸುಂದರಮ್ಮ ಹರಟೆ ಹೊಡೆಯುತ್ತ ಕುಳಿತಿದ್ದರು. ಗೊಣಗುತ್ತಲೆ ಮನೆಯೊಳಕ್ಕೆ ಬಂದ ಅಜ್ಜಿಯನ್ನು ಕಂಡು ಸುಂದರಮ್ಮನೆಂದಳು :

"ಯಾರಜ್ಜಿ ನಿಮ್ಮನ್ನ ರೇಗಿಸ್ದೋನು ?"

ಅಜ್ಜಿ ಉತ್ತರವೀಯಲಿಲ್ಲ.

"ಪಾಪಿಗ್ಳು...ಪಾಪಿಗ್ಳು...ಥೂ" ಎಂದಳು ತನ್ನಷ್ಟಕ್ಕೆ.

ಅಜ್ಜಿಯ ಸ್ವಭಾವವನ್ನರಿತಿದ್ದ ಸುಂದರಮ್ಮ, ಆಕೆಯೊಡನೆ ಬೇರೆ ಮಾತನ್ನಾಡುವ ಗೋಜಿಗೆ ಹೋಗದೆ, ಅಮ್ಮಿಯನ್ನುದ್ದೇಶಿಸಿ "ಬರ್ತೀನಿ ಕಣೇ" ಎನ್ನುತ್ತಾ ಮನೆಗೆ ನಡೆದಳು.

ಅಜ್ಜಿ ಮೊಮ್ಮಗಳೊಡನೆಯೂ ಹೃದಯ ತೆರೆದು ಮಾತನಾಡಲಿಲ್ಲ. ಆದರೆ ಅಜ್ಜಿಯ ಮನೋಸ್ಥಿತಿಗೆ ತಾನೇ ಕಾರಣವಿರಬೇಕೆಂಬ ಬಗ್ಗೆ ಮಾತ್ರ ಅಮ್ಮಿಗೆ ಸಂದೇಹವಿರಲಿಲ್ಲ. ಅವಳಿಗೆ ಹೃದಯದಲ್ಲಿ ಹಿಡಿಸಲಾರದಷ್ಟು ವ್ಯಥೆಯ ಅನುಭವವಾಯಿತು.

ಇಬ್ಬರೂ ಚಾಪೆಗಳ ಮೇಲೆ ಮಲಗಿಕೊಂಡಾಗ ಅಮ್ಮಿ ಒಮ್ಮೆಲೆ ಬಿಕ್ಕಿ ಬಿಕ್ಕಿ ಅತ್ತಳು.

ಅಜ್ಜಿ ಸ್ವರವೇರಿಸಿ ಗದರಿಸಿದಳು :

"ಯಾಕೇ ? ಯಾಕೆ ಅಳೋದು ? ನಾನಿನ್ನೂ ಬದುಕಿದೀನಿ. ಅಳೋದನ್ನೆಲ್ಲಾ ನಾನು ಸತ್ಮೇಲೆ ಮಾಡು—ಇನ್ನು ದೇವರೇ ಗತೀಂತ."

ಅಮ್ಮಿಯ ಅಳು ನಿಲ್ಲಲಿಲ್ಲ. ಅಜ್ಜಿಯ ಗೊಣಗಾಟ ನಿಂತಿತು. ಆಕೆಯ ತುಟಿಗಳೆಡೆಯಿಂದ ಪ್ರಯಾಸಪಡುತ್ತ ಮಾತುಗಳು ಹೊರಬಂದುವು :

"ಆ ಶೆಟ್ಟಿ...ಹುಂ. ಇವತ್ತೇನಂದ ಗೊತ್ತೆ ? ಈ ಇಳಿವಯಸ್ನಲ್ಲಿ ಚಾಕರಿ ಮಾಡೋ ಬದಲು ನಾನು ಹಾಯಾಗಿರ್ಬೇಕಂತೆ. ನಿನ್ನ ವಿಷಯದಲ್ಲೂ ಎಷ್ಟು ಕನಿಕರ ಅವ್ನಿಗೆ ! ಬಡ್ಡೀ ಮಗ ! ಬೇರೆ ಮನೆ ಕಟ್ಟಿಸಿ ನಿನಗೆ ಇರೋಕೆ ಏರ್ಪಾಟು ಮಾಡ್ತಾನಂತೆ...ಸೀರೆ, ಹಣ, ಆಭರಣ...ಅವನ ಸಂತಾನ ಮಣ್ಣು ತಿಂದು ಹೋಗ ! ಥೂ !..."

ಉಸಿರು ಹಿಡಿದುಕೊಂಡು ಅಮ್ಮಿ ಅದನ್ನು ಕೇಳಿದಳು. ಬಿಕ್ಕಿ ಅಳುವುದು ನಿಂತಿತು. ಧ್ವನಿ ತೆಗೆದು ರೋದಿಸಲು ಅವಳು ಸಿದ್ಧಳಿರಲಿಲ್ಲ. ಗರಗಸದಿಂದ ಹೋಳುಹೋಳಾಗಿ

ಹೃದಯವನ್ನು ಯಾರೋ ಕುಯ್ಯುತ್ತಿದ್ದಂತೆ ಆಕೆಗೆ ತೋರುತ್ತಿತ್ತು.

ಈಗ ಶೆಟ್ಟರು...ಆಗ ಭಟ್ಟರು...ಇಬ್ಬರೂ ಒಂದೇ...

ತಾನಿನ್ನು, ಬಯಸಿದವರೆಲ್ಲ ಕೈಯೊಡ್ಡುವ ಕಳಿತ ಫಲವೆ ಹಾಗಾದರೆ ?

ಅಷ್ಟನ್ನು ಹೇಳಿಯಾದ ಮೇಲೆ ಅಜ್ಜಿ ನಾಲ್ಕು ನಿಮಿಷ ಮೌನವಾದಳು. ಬಳಿಕ ಆ ಮೌನವನ್ನು ಮುರಿದು ಅಸಹಾಯತೆಯ ನಿಟ್ಟುಸಿರು ಬಿಟ್ಟು ಅವಳೆಂದಳು :

"ಕಾಲ ಕೆಟ್ಹೋಯ್ತುಮ್ಮಾ ಕೆಟ್ಹೋಯ್ತು...ಸಜ್ಜನರು ಬದುಕೋದೇ ಕಷ್ಟ ಇನ್ನು !"

ಆ ರಾತ್ರೆ ಅಮ್ಮಿಗೆ ನಿದ್ದೆ ಬರಲಿಲ್ಲ.

..."ಕಾಲ ಕೆಟ್ಹೋಯ್ತುಮ್ಮಾ ಕೆಟ್ಹೋಯ್ತು" ಎಂದರು ಹೊರಗೂ ಕೆಲವು ಜನ, ಅಮ್ಮಿಯನ್ನು ಕಂಡಾಗ. ಕೂದಲು ಬಾಚದೆ ಕನ್ನಡಿ ನೋಡದೆ ಹಾಗೆಯೇ ಹೊರ ಬಂದರೂ ಆಕೆ, ಅಸೂಯಾಪರರಾದ ಕೆಲವರು ಸ್ತ್ರೀಯರ ದೃಷ್ಟಿಗೆ ಅಪ್ಸರೆಯಾಗಿಯೇ ತೋರುತ್ತಿದ್ದಳು. ಆಗ ಅವರಿಂದ ಅಸಹನೆಯ ಕಿಡಿನುಡಿಗಳೇಳುತ್ತಿದ್ದುವು : "ನೋಡೆ, ಮಯ್ಯಾರಿ-ಹೇಗಿದಾಳೆ ನೋಡೆ."

ಇನ್ನೂ ಹೆಚ್ಚನ್ನು ಮಾತನಾಡುವ ಆಸೆಯಾಗುತ್ತಿತ್ತು ಆ ನಾಲಗೆಗಳಿಗೆ. ಬನಶಂಕರಿ ಕಾಲು ಜಾರಿದಳೆಂದು ಜಾಹೀರು ಮಾಡುವ ದಿನ ಎಂದು ಬಂದೀತೋ ಎಂದು ಅವು ತವಕಿಸು ತ್ತಿದ್ದುವು. ಅದರ ನಿರೀಕ್ಷಣೆಯಲ್ಲೇ ಇದ್ದ ಒಬ್ಬಿಬ್ಬರು ಎನ್ನುತ್ತಿದ್ದರು : ಅಂತೂ ಇನ್ನು ಜಾಸ್ತಿ ದಿನ ಇಲ್ಲ ಕಣ್ರೇ. ಬಲೆ ಬಿಸ್ತಾ ಇದಾಳೆ. ಆಕೆ ಕಣ್ಣು ಮಿಟಿಕ್ಸೋ ರೀತಿ ನೋಡಿದ್ರಾ? ಅಬ್ಬಾ !"

ಆ ಹೆಂಗಸರಿಂದ ಅಮ್ಮಿ ಆದಷ್ಟು ದೂರವಿರುತ್ತಿದ್ದಳು.

ಮಮತೆಯಿಂದ ಆಕೆಯನ್ನು ಕಾಣುತ್ತಿದ್ದ ಹೆಂಗಸರೂ ಇಲ್ಲದಿರಲಿಲ್ಲ. ಅವರು ಅಮ್ಮಿ ಯನ್ನು ಕಂಡಾಗ ಎರಡು ನಿಮಿಷ ತಡೆದು ನಿಂತು ಸುಖದುಃಖ ವಿಚಾರಿಸುತ್ತಿದ್ದರು.

"ರತಿಯಂಥಾ ಹುಡುಗಿ ! ಹೇಗಾಯ್ತು ಬದುಕು !" ಎನ್ನುತ್ತಿದ್ದರು ಒಬ್ಬರು.

"ದೇವರೇ ಕಾಪಾಡ್ಬೇಕು !" ಎಂದು ಬೇರೆ ಯಾರಾದರೊಬ್ಬರು ಉದ್ಗಾರವೆತ್ತು ತ್ತಿದ್ದರು.

ಅಂಥವರ ಜತೆಯಲ್ಲೂ ಬೆರೆಯಲು ಅಮ್ಮಿ ಅಪೇಕ್ಷಿಸಲಿಲ್ಲ. ಅವರ ಸಹಾನುಭೂತಿಯ ಮಾತುಗಳನ್ನು ಕೇಳಿದಾಗ ಆಕೆಯ ದುಃಖ ಇಮ್ಮಡಿಸುತ್ತಿತ್ತು.

ಆದರೆ ಅಮ್ಮಿ ಮಾತುಕತೆಯ ಕೇಂದ್ರವಾಗಿದ್ದುದು ಹೆಂಗಸರ ಕ್ಷೇತ್ರದಲ್ಲಿ ಮಾತ್ರವೇ ಅಲ್ಲವಲ್ಲ! ಅಷ್ಟು ಬಿಗಿಯಾಗಿದ್ದ ಹಾರುವರ ಹುಡುಗಿಯ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸು ತ್ತಿದ್ದವರೂ ಇದ್ದರು. ವಿಷಯಲಂಪಟತನಕ್ಕೆಲ್ಲಿಯದು ಜಾತಿಯ ಗೀಳು ? ದೇವಸ್ಥಾನ ಮಠ ದವರೂ ಅಷ್ಟೆ, ಮಂಡಿಮಳಿಗೆಯವರೂ ಅಷ್ಟೆ. ಭದ್ರಾನದಿಗೆ ಅಡ್ಡವಾಗಿ ಸೇತುವೆಯಾದ ಮೇಲೆ ವ್ಯಾಪಾರಕೇಂದ್ರವಾದ ಬಾಳೆಮಣ್ಣೂರಿಗೆ ಬರಹೋಗುವವರ ಸಂಖ್ಯೆ ಹೆಚ್ಚಿತ್ತು. ಎಲ್ಲ ರೀತಿಯ ಸರಕುಗಳೂ ಬೇಕಾಗುತ್ತಿದ್ದುವು ಬಂದವರಿಗೆ. ಅವರಲ್ಲಿ ಹಳೆಯ ಹೊಸ ರಸಿಕರು ಕೆಲವರು ಬಾಯಿತುಂಬ ತಾಂಬೂಲ ಜಗಿದೋ ಬಿಳಿಯ ಬತ್ತಿ ಸೇದುತ್ತಲೋ ಎಡ ಬಲಗಳನ್ನು ನೋಡುತ್ತ ಬೀದಿ ಬೀದಿ ಅಲೆಯುತ್ತಿದ್ದರು,

ಗಂಡಸ್ಸರಲ್ಲಿ ಒಳ್ಳೆಯವರು ಇರಲೇ ಇಲ್ಲವೆಂದಲ್ಲ. ಆದರೆ ಅವರು ಅಮ್ಮಿಗೆ ಕಾಣಸು

ತ್ತಿರಲಿಲ್ಲ. ದಿನವೆಲ್ಲಾ ಆಕೆಯ ಮನಸ್ಸನ್ನು ಹಿಂಸಿಸುತ್ತಿದ್ದುದು, ದೊರೆತರೆ ಕಬಳಿಸಲು ಸಿದ್ಧ ವಾಗಿದ್ದ ಪುರುಷ ಪ್ರಪಂಚ ಮಾತ್ರ.

ಒಂದು ದಿನ ಸುಂದರಮ್ಮ ಬಲು ಉತ್ಸಾಹದಿಂದ ಅಮ್ಮಿಯ ಮನೆಗೆ ಓಡುತ್ತ ಓಡುತ್ತ ಬಂದಳು. ಸೆರಗಿನ ಒಳಗೆ ಏನನ್ನೋ ಬಚ್ಚಿಟ್ಟುಕೊಂಡಿದ್ದಳಾಕೆ.

"ಬನೂ! ಏನು ತಂದಿದ್ದೀನಿ ಹೇಳು ?"

"ನನಗೇನು ಗೊತ್ತು ?"

"ಇಲ್ಲ. ಊಹಿಸೋಕೆ ಖಂಡಿತ ನಿನ್ಕೈಲಾಗೊಲ್ಲ."

ಏನೊಂದೂ ಅರ್ಥವಾಗದೆ ಅಮ್ಮಿ ವಿಸ್ಮಯದ ದೃಷ್ಟಿಯಿಂದ ಸುಂದರಮ್ಮನನ್ನೆ ನೋಡಿದಳು. ಸಂತೋಷದಿಂದ ನಗುತ್ತ ಸುಂದರಮ್ಮ ಎರಡು ಪುಸ್ತಕಗಳನ್ನು ಸೆರಗಿನ ಮರೆಯಿಂದ ಹೊರತೆಗೆದಳು. ಪುಸ್ತಕಗಳನ್ನು ನೋಡಿದಾಗ, "ಇಷ್ಟೇನೆ" ಅನ್ನಿಸಿತು ಅಮ್ಮಿಗೆ.

"ಪುಸ್ತಕ. ನಾನು ಏನೋಂತಿದ್ದೆ."

"ಪುಸ್ತಕವಾದರೇನು ? ವಿಶೇಷದ್ದಲ್ಲವೇನೊ ?"

ಅಮ್ಮಿ, ಅಲ್ಲವೆನ್ನಲಿಲ್ಲ. ಎರಡು ಪುಸ್ತಕಗಳನ್ನೂ ಕೈಲೆತ್ತಿಕೊಂಡು ಆಕೆ, ಹೆಚ್ಚಿನ ತೊಡಕಿಲ್ಲದೆ ಹೆಸರನ್ನು ಓದಿದಳು : ಒಂದು 'ದುರ್ಗೇಶ ನಂದಿನಿ', ಇನ್ನೊಂದು 'ಮಾಯಾವಿನಿ.'

ಅಭಿಮಾನದಿಂದ ಸುಂದರಮ್ಮ ಹೇಳಿದಳು :

"ನಮ್ಮವರು ಹಾಸನದ ಜಾತ್ರೆಗೆ ಹೋಗಿದ್ರು, ನೋಡು! ನಿನ್ನೆ ರಾತ್ರೆ ವಾಪಸು ಬಂದ್ರು. ಹಾಸನದಲ್ಲಿ ಅವರಿಗೆ ಬೆಂಗಳೂರಿನ ಯಾರದೋ ಪರಿಚಯವಾಯ್ತಂತೆ. ಅವರಲ್ಲಿದ್ದುವಂತೆ ಈ ಪುಸ್ತಕಗ್ಳು. ಬೇಕೇ ಬೇಕೂಂತ ಹಟ ಹಿಡಿದು ನಮ್ಮವರು ಕೇಳಿ ಇಸ್ಕೊಂಡು ಬಂದ್ರು. ಕಾದಂಬರೀನಮ್ಮಾ ಇದು. ಇವೆರಡೂ ಕಾದಂಬರಿಗ್ಳೇ!"

ಕಥೆ—ಕಾದಂಬರಿ....ಆ ಪುಸ್ತಕಗಳನ್ನು ತೋರಿಸಿಯಾದ ಮೇಲೆ, ಗಂಡನಿಗಿಂತಲೂ ಮುಂಚಿತವಾಗಿ ತಾನೇ ಓದಬೇಕೆಂದು ಸುಂದರಮ್ಮ ಅವುಗಳನ್ನು ವಾಪಸು ಒಯ್ದಳು. ದಂಪತಿಯ ಓದು ಮುಗಿದ ಬಳಿಕ ಪುಸ್ತಕಗಳು ಅಮ್ಮಿಯ ಕೈಗೆ ಬಂದುವು.

"ನಂಗೆ ಸಲೀಸಾಗಿ ಓದೋಕೆ ಬರಲ್ಲ. ಹ್ಯಾಗೂ ಓದಿದೀಯ. ಕತೆ ಹೇಳಿಬಿಡಕ್ಕ. ಅಷ್ಟು ಸಾಕು."

"ಅದೆಲ್ಲಾ ಆಗೊಲ್ಲ. ನೀನು ಓದಿಯೇ ತೀರ್ಬೇಕು. ದಿವಸಕ್ಕೆ ಹತ್ತುತ್ತು ಪುಟವೇ ಓದು. ಅದಕ್ಕೇನಂತೆ ?"

—ಹಾಗೆ ಆರಂಭವಾದ ಅನುಭವ. ದಿವಸಕ್ಕೆ ಹತ್ತು ಪುಟಗಳ ಓದು; ಇಪ್ಪತ್ತು ಮೂವತ್ತು ಪುಟಗಳ ಓದು. ಯಾವುದೋ ಕಲ್ಪನೆಯ ರಮ್ಯ ಲೋಕದಲ್ಲಿ ಸಂಚಾರ.

ಮೊಮ್ಮಗಳು ಓದುತ್ತಿದ್ದುದನ್ನು ಕಂಡಾಗ ಅಜ್ಜಿಗೆ ಹೆಮ್ಮೆ ಎನಿಸಿತು. ಆದರೆ ಆ ಪುಸ್ತಕಗಳು ತನ್ನ ಮತ್ತು ಅಮ್ಮಿಯ ಮಾತುಕತೆಗಳ ನಡುವೆ ಅಡ್ಡಗೋಡೆಯಾದುವೆಂದು ಆಕೆಗೆ ಬೇಸರವೂ ಆಗುತ್ತಿತ್ತು. ಆಗ ಆಕೆ ಉದ್ಗಾರವೆತ್ತುತ್ತಿದ್ದಳು :

"ಎಂಥಾ ಕಥೆಯೋ ಏನೋ ನಮ್ಮಪ್ಪ."

"ಯಾಕಜ್ಜಿ ? ಚೆನ್ನಾಗಿದೆ ಅಜ್ಜಿ."

" ಅದೇನು ಚೆನ್ನವೊ ! ರಾಮಾಯಣವೊ ಮಹಾಭಾರತವೊ ಆಗಿದ್ದರೆ—"

ಒಂದು ದಿನ ಪುರಾಣ ಮುಗಿಸಿಕೊಂಡು ಅಜ್ಜಿ ಮನೆಗೆ ಬಂದಾಗ, ಅಡ್ಡಾದಿಡ್ಡಿಯಾಗಿ ಹೊಗೆಯುಗುಳುತ್ತಿದ್ದ ಚಿಮಿಣಿ ದೀಪದ ಬೆಳಕಿನಲ್ಲಿ ಬನಶಂಕರಿ ಓದುತ್ತ ಕುಳಿತಿದ್ದಳು. ಮುಖ ಪುಸ್ತಕದ ಮೇಲೆ ಬಾಗಿತ್ತು. ಅಜ್ಜಿ ಬಾಗಿಲು ಸರಿಸಿದ್ದೂ ಆಕೆಯ ಗಮನಕ್ಕೆ ಬರಲಿಲ್ಲ; ಅಜ್ಜಿಗೆ ರೇಗಿತ್ತು.

" ಇದೇನೆ ಇದು ! " ಎಂದು ಅಜ್ಜಿ ಗದರಿಸಿದಳು.

ದಿಗ್ಭ್ರಮೆಗೊಂಡವಳಂತೆ ಗಾಬರಿಯಾಗಿ ಅಮ್ಮಿ ಪುಸ್ತಕ ಮುಚ್ಚಿ ಮುಖವೆತ್ತಿದಳು. ಆಕೆಯ ಕಣ್ಣುಗಳು ಕೆಂಪಗಾಗಿದ್ದುವು. ಕೆನ್ನೆಗಳ ಮೇಲಿಂದ ಗಂಗೆಯಮುನೆಯರು ಹರಿಯುತ್ತಿದ್ದರು.

" ಅಯ್ಯೋ ! " ಎಂದಳು ಅಜ್ಜಿ ; " ಏನಾಯ್ತೇ ? ಏನಾಯ್ತಮ್ಮೀ ? ಏನಾಯ್ತಪ್ಪಾ ನನ್ಮಗೂಗೆ ? "

ಅಳುತ್ತಿದ್ದ ಅಮ್ಮಿ ನಕ್ಕಳು.

" ಏನೂ ಇಲ್ಲಜ್ಜಿ, ಏನೂ ಇಲ್ಲ."

" ಅಯ್ಯೊ ರಾಮ ! ಅಳ್ತಾ ಇದ್ದೀಯಲ್ಲೇ......"

ಅಮ್ಮಿ ಮತ್ತೆ ನಕ್ಕಳು. ಅಜ್ಜಿಯಲ್ಲಿ ಭಯದ ಬದಲು ಕೋಪ ಮನೆ ಮಾಡಿತು.

" ಏನೆ ಇದು ಅವಾಂತರ ? "

" ಏನಿಲ್ಲ ಅಜ್ಜಿ ...ಸುಮ್ಮನೆ...ಈ ಕಾದಂಬರಿ ಓದ್ತಾ ಇದ್ದೆ...ಅಳು ಬಂದ್ಬಿಡ್ತು..."

ತನ್ನ ಮೊಮ್ಮಗಳಿಗೆ ಎಂತಹ ಕಷ್ಟವನ್ನೂ ಸಹಿಸುವ ಕಲ್ಲೆದೆ ಇದೆಯೆಂದು ಅಜ್ಜಿ ಭಾವಿಸಿದ್ದರೆ, ಒಂದು ಪುಸ್ತಕವನ್ನೋದಿ ಅಳುತ್ತ ಕುಳಿತಿದ್ದಳು ಆ ಹುಡುಗಿ !

" ಸರಿಹೋಯ್ತು...ಒಳ್ಳೆ ಪುಸ್ತಕ ಬಂತಮ್ಮ ಈ ಮನೆಗೆ ! ಒಳ್ಳೆ ಸುಂದರಮ್ಮ—ನಿಂಗೆ ಪುಸ್ತಕ ಕೊಟ್ಟೋರು !...ಪರಮಾತ್ಮ ! "

ಕಥಾ ನಾಯಿಕೆಯ ಕಷ್ಟಕ್ಕಾಗಿ ಮರುಗಿ ಕಣ್ಣೀರು ಸುರಿಸಿ ಅಮ್ಮಿ ತನ್ನ ಹೃದಯವನ್ನು ಹಗುರಗೊಳಿಸಿಕೊಂಡಿದ್ದಳು.

ಮರುಕ ಒಂದೇ ಅಲ್ಲ ; ಪುಸ್ತಕಗಳನ್ನೋದುತ್ತಿದ್ದರೆ ಬೇರೆ ಭಾವನೆಗಳಾಗುತ್ತಿದ್ದುವು. ನಾಯಕ—ನಾಯಿಕೆಯರ ಸರಸಸಲ್ಲಾಪಗಳು ಆಕೆಯ ಹೃದಯದ ನೆಮ್ಮದಿಯನ್ನು ಕದಡುತ್ತಿದ್ದುವು. ಬದುಕಿನಲ್ಲಿ ತಾನು ಕಾಣದೇ ಇದ್ದುದನ್ನು ಕಾದಂಬರಿಯಲ್ಲಿ ಕಂಡಾಗ ಒಂದು ರೀತಿಯ ಸಮಾಧಾನವಾಗುತ್ತಿತ್ತು ಅಮ್ಮಿಗೆ. ಆದರೆ ಅದು ತಾತ್ಕಾಲಿಕ. ಆ ಅನುಭವದ ಬಳಿಕ ಅರ್ಥವಾಗದೊಂದು ಅತೃಪ್ತಿಯ ಕಿಡಿ ಪ್ರಜ್ವಲಿಸಿ ಹೊಗೆಯಾಡುತ್ತಿತ್ತು.

ಅಷ್ಟೇ ಆಗಿದ್ದರೆ ಅಮ್ಮಿ ಅದನ್ನು ಸಹಿಸಿಕೊಳ್ಳುತ್ತಿದ್ದಳೋ ಏನೋ. ಆದರೆ ಹೊರ ಜಗತ್ತಿನೊಡನೆ ಸಂಬಂಧವೇ ಇಲ್ಲದ ಹಾಗೆ ಅವಳು ಬದುಕುವುದು ಸಾಧ್ಯವಿತ್ತೆ ?

ರಾತ್ರೆ ಹತ್ತು ಹನ್ನೊಂದು ಗಂಟೆ ದಾಟಿದಾಗ ಅವರ ಮನೆಯ ಮೇಲೆ ಸಣ್ಣ ಪುಟ್ಟ ಕಲ್ಲುಗಳು ಬೀಳುತ್ತಿದ್ದುವು, ಆಗಾಗ್ಗೆ. ಅಂತಹ ಸಂದರ್ಭಗಳಲ್ಲಿ ಎಷ್ಟೋ ಸಾರೆ, ರಾಮಶಾಸ್ತ್ರಿ ತನ್ನ ಮನೆಯಿಂದ ಹೊರಬಂದು, ಕತ್ತಲೆಯಲ್ಲಿ ಕಾಣಿಸದೆ ಇದ್ದ ಆ ವ್ಯಕ್ತಿಗಳನ್ನುದ್ದೇಶಿಸಿ ಬೈದು ಬೆದರಿಸುತ್ತಿದ್ದ:

ಕಲ್ಲು ಎಸೆದು ಓಡಿದವರಿಗೆ ಅಜ್ಜಿಯೂ ಹೀನಾಯವಾಗಿ ಗಟ್ಟಿ ಧ್ವನಿಯಲ್ಲಿ ಛೀಮಾರಿ ಹಾಕುತ್ತಿದ್ದಳು.

ತನ್ನಿಂದಾಗಿಯೇ ಇಷ್ಟೆಲ್ಲಾ ಆಗುತ್ತಿತ್ತೆಂಬುದು ಅಮ್ಮಿಗೆ ಚೆನ್ನಾಗಿ ಗೊತ್ತಿತ್ತು. ಆ ತಿಳಿವಳಿಕೆಯಿಂದ ಆಕೆ ಅಧೀರಳಾಗುತ್ತಿದ್ದಳು. ಭೂತ ಪಿಶಾಚಿಗಳು ರಾತ್ರೆ ಹೊತ್ತು ಕಲ್ಲೆಸೆಯುತ್ತಿರಲಿಲ್ಲ; ಮನುಷ್ಯರು ಎಸೆಯುತ್ತಿದ್ದರು. ಅಂತಹ ವರ್ತನೆಯು ಹಿಂದಿನ ಆಸೆ ಅಪೇಕ್ಷೆಗಳನ್ನು ನೆನೆಸಿಕೊಂಡಾಗ ಅಮ್ಮಿಯ ಮೈ ಮುಳ್ಳಾಗುತ್ತಿತ್ತು...ಆ ಘಟ್ಟಿ ಒಮ್ಮೆ ತನ್ನನ್ನು ಬಿಗಿಯಾಗಿ ಹಿಡಿದುದು...ಸೀರೆ ಹಣ ಆಭರಣಗಳ ಮಾತನ್ನಾಡಿದ ಆ ಶೆಟ್ಟಿ...ಆ ನೆನಪುಗಳು ಬಂದಾಗ ಅಮ್ಮಿಗೆ ನಿದ್ದೆ ಬರುತ್ತಿರಲಿಲ್ಲ. ಆಗ ಕತ್ತಲೆ ಕಠೋರವಾಗಿ, ಬೇಕು-ಬೇಡ ವೆನ್ನುವಂತೆ ಬೆಳಕಿನತ್ತ ಚಲಿಸುತ್ತಿತ್ತು. ದುಃಖದ ಭಾರವಾದ ಹೊದಿಕೆಯೊಳಗೆ ಅವಳ ಮೃದು ಹೃದಯ ಸರಿಯಾಗಿ ಉಸಿರಾಡಲಾರದೆ ಸಂಕಟಪಡುತ್ತಿತ್ತು.

ಇನ್ನೊಂದು ರೀತಿಯಲ್ಲಿ ಉಸಿರು ಕಟ್ಟುವುದಿತ್ತು ಅಮ್ಮಿಗೆ. ಹಾಗಾಗುತ್ತಿದ್ದುದು ಸುಂದರಮ್ಮ—ರಾಮಶಾಸ್ತ್ರಿಯರನ್ನು ಜತೆಯಲ್ಲಿ ಕಂಡಾಗ. ಆ ಗಂಡ ಹೆಂಡತಿಯನ್ನು, ಹೆಂಡತಿ ಗಂಡನನ್ನು, ಎಷ್ಟೊಂದು ಪ್ರೀತಿಸುತ್ತಿದ್ದರು! ಅವರಿಬ್ಬರೂ ಕಣ್ಣಬೊಂಬೆಯಂತೆ ಕಾಪಾಡುತ್ತಿದ್ದ ಆ ಮಗು...ಮದುವೆಯ ಸುಖ ಅಂದರೆ ಅದೇ ಅಲ್ಲವೆ?...ಆದರೆ ಬಡ ಅಮ್ಮಿಯ ಪಾಲಿಗೆ? ಆ ಪ್ರಶ್ನೆಗೆ ಉತ್ತರವಾಗಿ ಹಳೆಯ ನೆನಪುಗಳ ಕರಿ ಇರುವೆ ಸಾಲು ಬರುತ್ತಿತ್ತು. ಪ್ರತಿಯೊಂದು ಇರುವೆಯೂ ಆಕೆಯನ್ನು ಕುಟುಕಿ ನೋಯಿಸಿ ಮುಂದೆ ಸಾಗುತ್ತಿತ್ತು. ಅಮ್ಮಿ ಅಂದುಕೊಳ್ಳುತ್ತಿದ್ದಳು: "ಹತಭಾಗ್ಯಳು ನಾನು ... ನಾನು ದುರ್ದೈವಿ."

ಈ ಬದುಕಿಗಿಂತ ಸಾವು ಮೇಲಲ್ಲವೆ? ಎಂಬ ಪ್ರಶ್ನೆ ಆಕೆಯ ಮನಸ್ಸಿನಲ್ಲಿ ರೂಪು ಗೊಳ್ಳುತ್ತಿತ್ತು. ಸ್ಮರಣೆ ಸದಾ ಹಸುರಾಗಿ ಉಳಿಯುವ ಹಾಗೆ ಆಕೆ ಕಂಡು ಕಣ್ಣೀರೊರೆಸಿ ಕೊಂಡಿದ್ದ ಎರಡು ಸಾವುಗಳು—ಕೈಹಿಡಿದವನು ಮತ್ತು ಅಣ್ಣ ರಾಮಕೃಷ್ಣ. ಕೆಲವು ವರ್ಷಗಳಾಗಿವೆ ಆ ಮಾತಿಗೆ, ನಿಜ. ಆದರೆ ಅವರ ನೆನಪಾದಾಗಲೆಲ್ಲ ಆಕೆಯ ಕಣ್ಣೆದುರು ಕಟ್ಟುತ್ತಿದ್ದ ಆ ಇಬ್ಬರ ಚಿತ್ರಗಳು ಹಳೆಯವು, ಹಿಂದಿನವು. ಕೈ ಹಿಡಿದವನು....ಆ ಸಂಜೆ...,ಕಂದೀಲಿನ ಗಾಜು ಒಡೆದುದು....ಬಳಿಕ ಕತ್ತಲೆಯಲ್ಲಿ ಮೈಗೆ ಮೈ ಆನಿಸಿ ತಾವಿ ಬ್ಬರೂ ನಿಂತುದು. ತಡವರಿಸುತ್ತ ಆತನ ತುಟಿಗಳು ತನ್ನವನ್ನು ಹುಡುಕುತ್ತ ಬಂದು ಮುತ್ತಿಟ್ಟುದು....ಅದೇ ಚಿತ್ರ. ಆತ ಬದುಕಿದ್ದರೆ ಈಗೆಷ್ಟೋ ದೊಡ್ಡವನಾಗುತ್ತಿದ್ದ ನಲ್ಲವೆ? ರಾಮಶಾಸ್ತ್ರಿಯ ಹಾಗೆ, ಅಥವಾ ತಾನು ಆ ದಿನ ಕಂಡ ಯುವಕನ ಹಾಗೆ. ಇಲ್ಲ, ಅದು ಮಸಕುಮಸಕಾದ ಚಿತ್ರ....ಆಕೆಗೆ ಪರಿಚಯವಿದ್ದ ಮುಖ, ಎಳೆಯ ಪತಿರಾಯ ನದು, ಹಿಂದಿನದು....ಅಣ್ಣ ರಾಮಕೃಷ್ಣನೂ ಅಷ್ಟೇ. ದುರಂತ ಹೆಡೆಯಾಡಿಸಿದ ದಿನ ಆತನನ್ನು ಅಮ್ಮಿ ಕಂಡಿದ್ದಳು. ಆ ದಿನ ಆತ ಹೇಗಿದ್ದನೋ ಅದು ಆಕೆಗೆ ನೆನಪಿಲ್ಲ, ಅವಳ ಪರಿಚಯದ ಅಣ್ಣನ ಮುಖವೊಂದೇ—ಹನ್ನೊಂದು ವರ್ಷಗಳ ಕೆಳಗೆ ತಾನು ವಧುವಾಗಿ ಪತಿಗೃಹಕ್ಕೆ ಹೊರಟಾಗ, ಆ ಗಾಡಿಯನ್ನು ಹಿಂಬಾಲಿಸಿ ಬಲುದೂರದ ವರೆಗೂ ನಡೆದು ಬಂದ ಆ ಅಣ್ಣ. ಬೆಟ್ಟದ ತಪ್ಪಲಿನಲ್ಲಿ ಹಾದಿ ಇಳಿಮುಖವಾದಾಗ ಕಣ್ಣೊರೆಸಿಕೊಳ್ಳುತ್ತ ಅಣ್ಣ ನಿಂತಿದ್ದ. ಆ ಚಿತ್ರ ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಮಸಕಾಗಿ ಮರೆಯಾಗುವ

ವರೆಗೂ ನೆಟ್ಟದೃಷ್ಟಿಯಿಂದ ಅಮ್ಮಿ ಆತನನ್ನು ನೋಡಿದ್ದಳು...ಅಣ್ಣನ ನೆನಪಾದಾಗಲೆಲ್ಲ ಆ ದಿನದ ಆತನ ಚಿತ್ರವೇ ಆಕೆಯ ಕಣ್ಣೆದುರು ನಿಲ್ಲುತ್ತಿತ್ತು.

ಕಲ್ಪನೆಯ ಚಿತ್ರಗಳು...ಬರಿಯ ನೆನಪುಗಳು........

ಹೀಗೆ ಯೋಚನೆಯ ಕತ್ತಲೆ ನಾಲ್ಕು ದಿಕ್ಕುಗಳಿಂದ ಕವಿದು ಬಂದಾಗ ಅಮ್ಮಿಯ ಜೀವ ಮುದುಡಿಕೊಳ್ಳುತ್ತಿದ್ದರೂ ದಿನ ಕಳೆದು ಮನೆಗೆಲಸ ಎದುರು ನಿಂತಾಗ, ಅಜ್ಜಿಯ ಮಮತೆಯ ಮಾತು ಕೇಳಿದಾಗ, ಆಕೆ ಚೇತರಿಸಿಕೊಳ್ಳುತ್ತಿದ್ದಳು.

ಚೇತರಿಸಿಕೊಂಡಾಗಲೆಲ್ಲ ಬದುಕಿನ ಆಹ್ವಾನವನ್ನು ಸ್ವೀಕರಿಸುತ್ತಿದ್ದ ಅಮ್ಮಿ ಇನ್ನೊಂದು ಜೀವನದ ಸ್ನೇಹಕ್ಕಾಗಿ ಹಂಬಲಿಸುತ್ತಿದ್ದಳು. ಜೀವನಹಳ್ಳಿಯ ಕಾವೇರಿ ಈ ಬಾಳೆಮಣ್ಣೂರಿನಲ್ಲಿ ಇರಲಿಲ್ಲ. ಆದರೆ ಅದೇ ವಾತ್ಸಲ್ಯದ ಉಣಿಸನ್ನು ಸುಂದರಮ್ಮ ಬಡಿಸುತ್ತಿದ್ದಳು. ಆಕೆಯ ಸಾಮೀಪ್ಯದಲ್ಲಿ ಬಾರಿಬಾರಿಗೂ ಜೀವನದ ಜಂಜಡವನ್ನು ಮರೆಯುವ ಯತ್ನದಲ್ಲಿ ಅಮ್ಮಿ ಜಯಶೀಲಳಾಗುತ್ತಿದ್ದಳು.

ಆದರೆ ಒಮ್ಮೊಮ್ಮೆ ಆ ಯತ್ನದಲ್ಲಿ ಆಕೆಗೆ ಸೋಲಾಗುತ್ತಿತ್ತು. ಹಾಗೆ ಸೋಲಾದಾಗ, ಬಾಳ್ವೆಯ ಸಂಕಟಗಳಿಗೆಲ್ಲ ಸಾವು ಪರಿಹಾರವೆಂದು ತೋರುತ್ತಿತ್ತು. ಅಮ್ಮಿ ಸಾವಿನ ಮಾತೆತ್ತಿದಾಗ ಸುಂದರಮ್ಮ ರೇಗಿ ಆಕ್ರೋಶ ಮಾಡುತ್ತಿದ್ದಳು :

"ಬಿಡ್ತು ಅನ್ನೇ! ಸಾವಂತೆ...ಇನ್ನು ಮುಂದೆ ಯಾವತ್ತಾದರೂ ಇಂಥ ಮಾತು ಆಡ್ದೇಂತಂದ್ರೆ ನಿನ್ನನ್ನು ಮಾತ್ನಾಡ್ಸೋದೇ ಬಿಟ್ಬಿಡ್ತೀನಿ. ನಮ್ಮನೇಗೂ ನೀನು ಬರ್ಬೇಡ."

ಆಗ ಸುಂದರಮ್ಮನ ಗೆಳೆತನವನ್ನು ಕಳೆದುಕೊಳ್ಳುವುದು ಸಾವಿಗಿಂತಲೂ ಹೆಚ್ಚು ಕಠಿಣವಾಗಿ ಅಮ್ಮಿಗೆ ತೋರುತ್ತಿತ್ತು.

ಆ ಒಂದು ಮಧ್ಯಾಹ್ನ—

ಮಾತು ಹಿಡಿತ ತಪ್ಪಿ ಎಲ್ಲಿಗೋ ಓಡಿಹೋಯಿತು ಆ ಹೊತ್ತು.

"ಅಕ್ಕ, ಬದುಕೋದು ನನಗೆ ಇಷ್ಟವಿಲ್ಲ."

"ಸಾಯೋದು ಬಹಳ ಇಷ್ಟ, ಅಲ್ವೆ ?"

"ನೀನು ಏನೇ ಹೇಳಕ್ಕ, ಇನ್ನು ನಾನು ಬದುಕಿದ್ದು ಆಗ್ಬೇಕಾದ್ದೇನು ?"

"ಅದಕ್ಕೆ ?"

"ಇದಕ್ಕಿಂತ ಸಾವು ಮೇಲಲ್ಲವೆ ?"

"ಇಂಥ ಮಾತನ್ನು ದೇವರು ಮೆಚ್ಚೋದಿಲ್ಲ ಬನೂ."

"ನಾನು ಈ ರೀತಿ ಇರೋದನ್ನು ದೇವರು ಮೆಚ್ತಾನೆ ಅಲ್ವೆ ?"

ಹಾಗೆ ಹೇಳಿದಾಗ ಅಮ್ಮಿಯ ಸ್ವರ ಗಡಸಾಯಿತು ; ಕುತ್ತಿಗೆಯ ನರಗಳು ಬಿಗಿದು ಬಂದುವು: ಸುಂದರಮ್ಮನ ಮುಖ, ಆ ಮಾತು ಕೇಳಿದಾಗ ಕಪ್ಪಿಟ್ಟಿತು. ಹೇಳಬೇಕೆಂದು ಆಕೆ ಬಯಸಿದ ಉತ್ತರ ಗಂಟಲಲ್ಲೇ ಸಿಲುಕಿಕೊಂಡಿತು.

ಮೌನದ ಕೆಲ ನಿಮಿಷಗಳು...

ಆ ಬಳಿಕ ಧೈರ್ಯತಾಳಿ ಸುಂದರಮ್ಮ ಹೇಳಿದಳು :

"ಬನೂ ನಾನೊಂದು ಮಾತು ಹೇಳಲಾ ?"

"ಏನು ?"

" ನೀನು ಸುಖವಾಗಿರೋದು ಸಾಧ್ಯ."

" ಸಾಧ್ಯ ? "

" ಹೂಂ. ನೀನು—"

" ಏನಕ್ಕ ? "

" ಇನ್ನೊಮ್ಮೆ...ಮದುವೆ ಮಾಡ್ಕೋ ಬೇಕು ! "

" ಅಕ್ಕಾ ! "

ಬಳಿಯಲ್ಲೆ ಕುಳಿತಿದ್ದ ಬನಶಂಕರಿ ಎಳೆಯ ಮಗುವಿನಂತೆ, ಸುಂದರಮ್ಮನ ತೊಡೆಗಳ ನಡುವೆ ಮುಖವಿಟ್ಟಳು. ಆಕೆಯ ದೇಹವಿಡೀ ಕಂಪಿಸಿತು. ಹರಿದ ಕಣ್ಣೀರಿನಿಂದ ಸುಂದರಮ್ಮನ ಸೀರೆ ತೋಯ್ದಿತು...

" ಅಕ್ಕಾ ಎಂಥ ಮಾತಕ್ಕ ನೀನು ಹೇಳೋದು ! ಹೀಗೂ ಹೇಳ್ಬಾರ್ದೆ ಅಕ್ಕ ? "

ಬಹಳ ಹೊತ್ತು ಸುಂದರಮ್ಮ ಮಾತನಾಡಲಿಲ್ಲ. ಅಳಬೇಡವೆಂದು ಹೇಳಿ ಅಮ್ಮಿಯ ವೇದನೆಯ ಒರತೆಯನ್ನಾಕೆ ತಡೆಯಲೂ ಇಲ್ಲ. ಅವ್ಯಕ್ತವಾದ ಭಾವನೆ ಹತ್ತು ಮುಖಗಳಿಂದ ಅಮ್ಮಿಯನ್ನು ತಿವಿಯುತ್ತಿತ್ತು. ಕಿವಿಗಳ ಬಳಿ ಮಹಾಸಾಗರ ಭೋರ್ಗರೆಯುತ್ತಿದ್ದ ಅನುಭವ ಆಕೆಗೆ ಆಗುತ್ತಿತ್ತು. ಉರುಳುತ್ತಿದ್ದುದು ಕ್ಷಣವೋ ಯುಗವೋ ಅವಳಿಗೆ ತಿಳಿಯದು.

ಆಗ ಮೆಲ್ಲಮೆಲ್ಲನೆ ಪ್ರತಿಯೊಂದು ಪದವನ್ನೂ ತೂಗಿ ತೂಗಿ ಸುಂದರಮ್ಮ ಮಾತ ನಾಡಿದಳು.

" ಇನ್ನೊಂದು ಮದುವೆ ಪಾಪವಲ್ಲ ಬನೂ...ಖಂಡಿತ ಪಾಪವಲ್ಲ. ಧರ್ಮಶಾಸ್ತ್ರದ ಹೆಸರಲ್ಲಿ ನಿನಗೆ ಹಿಂಸೆಕೊಡೋದಿದೆಯಲ್ಲ ಅದು ಪಾಪ. ನಾವೆಲ್ರೂ ದೇವರ ಮಕ್ಕಳೇ ಅಲ್ಲ ? ಹಾಗಾದರೆ ನಾವೆಲ್ರೂ ಸುಖವಾಗಿದ್ರೆ ಆತನಿಗೆ ತೃಪ್ತಿ ತಾನೆ ?...ನಿಂಗೆ ತಿಳೀದು ಬನೂ... ನಮ್ಮವ್ರು ಎಷ್ಟೋ ಪುಸ್ತಕ ಓದಿದಾರೆ. ಬೆಂಗಳೂರು-ಮೈಸೂರು ಸಂಚಾರ ಮಾಡಿದಾರೆ. ಒಳ್ಳೊಳ್ಳೆ ವಿದ್ವಾಂಸರ ಜತೇಲಿ ಮಾತ್ನಾಡಿದಾರೆ. ಅವರೇನಂತಾರೆ ಗೊತ್ತಾ ? ಇನ್ನೊಂದು ಮದ್ವೆ ಪಾಪ ಅಲ್ಲಾಂತ. ಗಂಡ್ಸು ಎರಡನೇ ಮೂರನೇ ಮದುವೆ ಮಾಡಿಕೊಳ್ಳೋವಾಗ ಹೆಂಗಸು—ವಿಧವೆ—ಮತ್ತೊಮ್ಮೆ ಮದುವೆಯಾಗೋದು ಪಾಪವಲ್ಲ."

ಯಾವುದೋ ಗವಿಯಿಂದ ತಡೆತಡೆದು ಸ್ವರ ಹೊರ ಬಂದ ಹಾಗೆ ಬಿಕ್ಕುತ್ತ ಬಿಕ್ಕುತ್ತ ಅಮ್ಮಿಯೆಂದಳು :

" ಬೇಡ ಅಕ್ಕ, ದಯವಿಟ್ಟು ಆ ಮಾತಾಡ್ಬೇಡ. ಯಾರಾದರೂ ಕೇಳ್ದೋರು ಏನಂದಾರು ? "

ಅರೆ ನಿಮಿಷ ಔಡುಗಚ್ಚಿ ಸುಂದರಮ್ಮ ಮುಂದುವರಿಸಿದಳು :

" ಯಾರಾದರೂ ಕೇಳ್ದೋರು ! ಅವರ್ದೇನು ಗಂಟು ಮುಳುಗಿದ್ದು ? ತಾವು ಹರಿದು ತಿನ್ಬೌದಾದ ಒಂದು ಹೆಣ್ಣು ಕೈ ತಪ್ಪಿ ಹೋಗುತ್ತೆ ಅಂತ ಅವರಿಗೆ ದುಃಖವಾಗುತ್ತೇನೋ ಪಾಪ !.... ನಿಂಗೆ ತಿಳೀದೂ ಬನೂ.... ಕಾಲ ಬದ್ಲಾಗಿದೆ ಈಗ....ಹಿಂದೆ ಗಂಡ ಸತ್ತರೆ ಹೆಂಡ್ತೀನೂ ಚಿತೆ ಏರ್ತಿದ್ಲು. ಇಷ್ಟವಿರ್ಲಿ ಇಲ್ದೆ ಹೋಗ್ಲಿ, ಸಹಗಮನ ಮಾಡಿ ತಾನೂ ಬೂದಿಯಾಗ್ತಿದ್ಲು. ಈಗ ಹಾಗೆ ಮಾಡ್ತಾರೇನು ? ಈಗ ಅದರ ಬದ್ಲು, ಹೆಣ್ಣಿನ ತಲೆ ಬೋಳಿಸಿ ಕುರೂಪಿಯಾದ ಬೊಂಬೆ ಮಾಡಿ ಕೂರ್ಸೋದು ಈ ಜನಕ್ಕೆ ಬೇಕು ! ನಮ್ಮವರು

ಹೇಳ್ತಾ ಇದ್ರು. ಎಲ್ಲೋ ಅಲ್ಲಿ ಇಲ್ಲಿ ವಿಧವೆಯರ ವಿವಾಹ ಆಗಿದೆಯಂತೆ. ಅಂಥವ್ರಿಗೆ ಬಹಿಷ್ಕಾರ ಹಾಕ್ಬೇಕೂಂತ ಕೆಲವರು ಹಟತೊಟ್ರೂನೂ, ಆ ವಿಷಯದಲ್ಲಿ ಬಹಿಷ್ಕಾರ ಹಾಕೋಕೆ ಶಾಸ್ತ್ರದಲ್ಲಿ ಸಾಕಷ್ಟು ಆಧಾರ ಇಲ್ಲಾಂತ ಸ್ವಾಮಿಗ್ಳು ಸುಮ್ನಾದ್ರಂತೆ...ಗೊತ್ತಾ ಈ ವಿಷಯ ? "

ಬನಶಂಕರಿ ಮಾತನಾಡಲೇ ಇಲ್ಲ. ಅಳು ನಿಂತಿತ್ತು. ಆದರೆ ಮೈ ನಡುಕ ನಿಂತಿರಲಿಲ್ಲ.

ಮಗು ಎಚ್ಚತ್ತು ಅಳತೊಡಗಿತೆಂದು ಸುಂದರಮ್ಮ ಒಳಹೋದಳು.

ಆಮೇಲೆ ಸುಂದರಮ್ಮ ಬಹಳ ದಿನ ಆ ವಿಷಯ ಪ್ರಸ್ತಾಪಿಸಲಿಲ್ಲ. ಬನಶಂಕರಿ ಆ ಮಾತುಕತೆಯಾದ ನಾಲ್ಕು ದಿನಗಳಲ್ಲಿ ಸೊರಗಿಹೋದಳು. ಆದರೆ ಮುಖದ ಮೇಲೆ ನಿರಾಶೆ ಮನೆಮಾಡಿರಲಿಲ್ಲ. ಕಣ್ಣುಗಳಲ್ಲಿ ಎಂದೋ ಒಮ್ಮೆ ಏನೋ ಹೊಳಪು ಮಿಂಚುತ್ತಿತ್ತು.

ಅಜ್ಜಿ ಕೇಳಿದಳು :

" ಯಾಕಮ್ಮ ಹೀಗಿದೀಯೆ ? "

" ಹ್ಯಾಗಿದೀನಿ ಅಜ್ಜಿ ? ಚೆನ್ನಾಗಿಯೇ ಇದೀನಲ್ಲ ! "

" ಒಳ್ಳೇ ವಿಚಿತ್ರ ಹುಡುಗಿ. ಹೂಂ...."

ಆಗ ಅಮ್ಮಿ ತಿಳಿಯಾಗಿ ನಕ್ಕುಬಿಟ್ಟಳು.

ನಗುವಿನ ಬಳಿಕ ಯೋಚನೆ. ತಾನು ನಿಜವಾಗಿಯೂ ವಿಚಿತ್ರ ಹುಡುಗಿಯಾಗುವುದು ಸಾಧ್ಯವೆ ? ಸುಂದರಮ್ಮ ತೋರಿಸಿಕೊಟ್ಟಿದ್ದ ಆ ದಡ. ಆದನ್ನು ತಾನೆಂದಾದರೂ ಸೇರುವುದು ಸಾಧ್ಯವೆ ? ಈಗಿನದರ ಬದಲಾಗಿ ಇನ್ನೊಂದು ಹೊಸ ಬದುಕು....

ಮನಸ್ಸಿನಲ್ಲೇ ಆ ಬದುಕನ್ನು ಕಲ್ಪಿಸಿ ಚಿತ್ರಿಸಬೇಕೆಂಬ ಬಯಕೆಯಾಗುತ್ತಿತ್ತು ಅಮ್ಮಿಗೆ. ತನಗಿಂತ ವಯಸ್ಸಿನಲ್ಲಿ ತುಸು ಹಿರಿಯನಾದ ಸುಂದರನಾದ ಒಬ್ಬ ಯುವಕ....ತನ್ನನ್ನು ಆತ ಮೆಚ್ಚಿ—ಆತನಿಗೆ ತಾನೊಲಿದು....ಥೂ—

ಆ ಯೋಚನೆಯ ಜತೆಯಲ್ಲೆ, ಅಂತಹ ಕಲ್ಪನೆ ಎಷ್ಟೊಂದು ಅವಾಸ್ತವ ಎಂಬುದರ ಅರಿವಾದಾಗ, ಅವಳ ಮನಸ್ಸು ಮುದುಡಿಕೊಂಡು ಜಡವಾಗುತ್ತಿತ್ತು, ಬಡವಾಗುತ್ತಿತ್ತು.

ಆದರೆ ಆ ಸುಂದರಮ್ಮ ಒಡಹುಟ್ಟಿದವಳಿಗಿಂತಲೂ ತನಗೆ ಹೆಚ್ಚಿನವಳಾಗಿದ್ದ ಬನಶಂಕರಿಯನ್ನು ಹಾಗೆಯೇ ಬಿಡಲು ಸಿದ್ಧಳಿರಲಿಲ್ಲ. ಆಕೆ ಒದಗಿಸುತ್ತಿದ್ದ ಪುಸ್ತಕಗಳ ಸಹವಾಸದಿಂದ ನೋವು ನಲಿವುಗಳೆರಡೂ ಅಮ್ಮಿಗೆ ದೊರಕುತ್ತಿದ್ದುವು. ರಾಮಾಯಣ ಮಹಾಭಾರತಗಳ ಕಥನ ಮಥನದಿಂದ ಹೊತ್ತು ಕಳೆದು ಮನಸ್ಸು ಸಂಸ್ಕಾರ ಪಡೆಯುತ್ತಿತ್ತು.

ಒಂದು ದಿನ ಸುಂದರಮ್ಮನ ಮಗುವನ್ನೆತ್ತಿಕೊಂಡು ಬನಶಂಕರಿ ನಿಂತಿದ್ದಳು.

ಮಗುವಿನ ತಾಯಿಗೆ ಆ ದೃಶ್ಯ ಅಪೂರ್ವವಾಗಿ ತೋರಿತು. ತನ್ನದು ಮುದ್ದು ಮಗು ನಿಜ. ಅದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಬನಶಂಕರಿಗೇ ಒಂದು ಮಗುವಾದರೆ ? ಆ ಪುತ್ಥಳಿಯನ್ನೆತ್ತಿಕೊಂಡು ಬನಶಂಕರಿ ಬಿಂಕದಿಂದ ಹೇಗೆ ನಿಲ್ಲುತ್ತಿರಲಿಲ್ಲ ! ಒಮ್ಮೆಲೆ ಸುಂದರಮ್ಮನಿಗೆ ತನ್ನ ಗೆಳತಿ ರಾಧೆಯ ನೆನಪಾಯಿತು. ಸಂತಾನವನ್ನು ಗರ್ಭದಲ್ಲಿ ಹೊತ್ತೇ ಆಕೆ ಸಾವಿನ ಬಸಿರಲ್ಲಿ ಆಶ್ರಯಪಡೆದಿದ್ದಳು...

'ಥೂ, ಎಂಥ ಯೋಚನೆಗಳು ' ಎಂದುಕೊಂಡು ಸುಂದರಮ್ಮ ಬನಶಂಕರಿಯ ಬಳಿಗೆ ಬಂದಳು. ಆಕೆಯ ಮುಂಗುರುಳನ್ನೂ ಮಗುವಿನ ಮುಂಗುರುಳನ್ನೂ ಎರಡೂ ಕೈಗಳಿಂದ

ನೇವರಿಸಿ, ತನ್ನ ತಲೆಯ ಬದಿಗೊಯ್ದು ನೆಟಿಕೆ ಮುರಿದು, ಸರಕ್ಕನೆ ಅಡುಗೆ ಮನೆಯೊಳಕ್ಕೆ ಹೋದಳು. ಹೋಗುತ್ತಿದ್ದಾಗ ಕಣ್ಣೀರು ಫಳಕ್ಕನೆ ಚಿಮ್ಮಿತು.

ಬಹಳ ಹೊತ್ತಾದರೂ ಸುಂದರಮ್ಮ ಹೊರಬರಲಿಲ್ಲವೆಂದು ಆಮ್ಮಿಯೇ ಮಗುವಿನೊಡನೆ ಒಳಕ್ಕೆ ಹೋದಳು. ಹಾಲು ಕಾಯಿಸುತ್ತಾ ಒಲೆಯ ಮುಂದೆ ಕುಳಿತಿದ್ದಳು ಸುಂದರಮ್ಮ. ಆಕೆಯ ಕಣ್ಣುಗಳು ಕೆಂಪಗಾಗಿದ್ದುವು.

"ಇದೇನಕ್ಕಾ—ಕಣ್ಣು ?"

"ಹೊಗೆ ಬನೂ."

ಅಲ್ಲಿ ಹೊಗೆ ಇತ್ತೋ ಇಲ್ಲವೋ. ಬನಶಂಕರಿ ಅದನ್ನು ಪರಾಮರ್ಶಿಸುವ ಗೊಡವೆಗೆ ಹೋಗಲಿಲ್ಲ.

"ಬಾ ಬನೂ, ಇಲ್ಲೇ ಕೂತುಕೋ......"

ಬನಶಂಕರಿ ಮಗುವನ್ನು ಅದರ ಕಾಲುಗಳ ಮೇಲೆ ನಿಲ್ಲಿಸಲೆತ್ನಿಸುತ್ತ, ತಾನು ಸುಂದರಮ್ಮನ ಪಕ್ಕದಲ್ಲೇ ಕುಳಿತುಕೊಂಡಳು.

ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯನ್ನು ನೋಡುತ್ತ ಸುಂದರಮ್ಮನೆಂದಳು :

"ಇನ್ನು ಆರು ತಿಂಗಳ ಮೇಲೆ ನಮ್ಮವರು ಬೆಂಗಳೂರಿಗೆ ಹೋಗ್ತಾರೆ. ಅಲ್ಲಿಯ ಆಚಾರ ವಿಚಾರವೇ ಬೇರೆ. ಈ ಊರಿನವರ ಹಾಗಲ್ಲ. ಅದು ದೊಡ್ಡ ಶಹರ. ಅಲ್ಲಿ ಪರಿಚಯದವರ ಕೈಲಿ ಮಾತಾಡಿ ವಿಚಾರಿಸಿ ಏನಾದರೂ ಮಾಡ್ತಾರಂತೆ, ಹುಡುಕ್ತಾರಂತೆ."

ಹೂಂ ಎನ್ನಲಿಲ್ಲ ಬನಶಂಕರಿ.

ಸುಂದರಮ್ಮ ದೃಷ್ಟಿ ಹೊರಳಿಸಿ ಆಕೆಯನ್ನು ನೋಡಿದಳು.

ಬನಶಂಕರಿಯ ಮುಖ ಅಷ್ಟಗಲವಾಗಿತ್ತು. ಒಲೆಯ ಬೆಂಕಿಯ ಎದುರು ಅದು ಮತ್ತಷ್ಟು ಕೆಂಪಗಾಗಿತ್ತು.

ಒಲೆಯ ಮೇಲಿರಿಸಿದ್ದ ಹಾಲು ಉಕ್ಕೇರುತ್ತ ಬಂತು.

ಅದನ್ನೆ ನೋಡುತ್ತಿದ್ದ ಮಗುವೆಂದಿತು :

"ಅಂ......ಶೀ......"

## ೮

ರಾಮಶಾಸ್ತ್ರಿ ಬೆಂಗಳೂರಿಗೆ ಹೋಗಿ ಬಂದುದಾಯಿತು. ಆತ ಬಂದುದನ್ನು ತಿಳಿದ ಬನಶಂಕರಿ ಅವರ ಮನೆಯತ್ತ ಕಾಲಿಡುವುದಕ್ಕೆ ಅಳುಕಿದಳು. ಅಸ್ಪಷ್ಟವಾದ ಮಧುರ ನಿರೀಕ್ಷೆಯೊಂದೇ ಅವಳ ಜೀವನದ ಹೊಲವನ್ನು ಹಸುರಾಗಿ ಇರಿಸಿದ್ದ ಜಲಾಶಯ. ಆ ಜಲಾಶಯಕ್ಕೆ ಕೋಡಿ ಬೀಳುವಂತಹ ವಾರ್ತೆಯನ್ನೇನಾದರೂ ಸುಂದರಮ್ಮ ಕೊಟ್ಟರೆ ? ಅಂತಹ ಆಘಾತವನ್ನು ಇದಿರಿಸಲು ಆಕೆ ಸಿದ್ಧಳಾಗಿರಲಿಲ್ಲ. ಅದರೂ ಬಾಗಿಲ ಬಳಿ ಸಪ್ಪಳವಾದರೆ ಸಾಕು, ಸುಂದರಮ್ಮ ಬಂದಳು, ಮುಂದೇನಿನ್ನು ?—ಎಂಬ ಪ್ರಶ್ನೆ ಅವಳನ್ನು ಗೊಂದಲದಲ್ಲಿ ಕೆಡವುತ್ತಿತ್ತು. ಅಜ್ಜಿಗೆ ಈ ವಿಷಯ ಹೇಗೆ ತಿಳಿಸಬೇಕು ?—ಎಂಬ

ಯೋಚನೆ ಅವಳ ತಲೆ ತಿನ್ನುತ್ತಿತ್ತು. ಆಗ ಆಕೆ ಅಧೀರಳಾಗುತ್ತಿದ್ದಳು. ಬೆವರುತ್ತಿತ್ತು ಮೈ.

ಆ ಒಂದು ದಿನವೆಲ್ಲ ಸುಂದರಮ್ಮ ಅವ್ಮಿಯ ಮನೆಗೆ ಬರಲೇ ಇಲ್ಲ.

"ಬನೂ, ಬಂದ್ಬಿಟ್ಟು ಹೋಗೆ," ಎಂಬ ಪರಿಚಯ ಧ್ವನಿಯೂ ಅವ್ಮಿಗೆ ಕೇಳಿಸಲಿಲ್ಲ.

ಮರುದಿನ ಸುಂದರಮ್ಮ ಸಿಹಿತಿಂಡಿಗಳ ದೊಡ್ಡ ಪೊಟ್ಟಣವನ್ನೆತ್ತಿಕೊಂಡು ಬಂದಳು. ಒಳ್ಳೆಯ ಸುದ್ದಿ ಮತ್ತು ಸಿಹಿತಿಂಡಿ...ಬದುಕಿನಲ್ಲಿ ಅವೆರಡಕ್ಕೂ ಸಂಬಂಧವಿತ್ತು......ಬನಶಂಕರಿಯ ಜೀವನದಲ್ಲಿ ಅಂತಹ ಪ್ರಕರಣ ಆಗಿರಲೇ ಇಲ್ಲ. ಆದರೆ ಈಗ—ಈಗ?

ಸಿಹಿತಿಂಡಿ ಬಂದಿತ್ತು—ಶುಭವಾರ್ತೆ ಇಲ್ಲದೆಯೇ ಬಂದಿತ್ತು.

ಸುಂದರಮ್ಮ ಹೇಳಿದುದಿಷ್ಟೆ:

"ಒಬ್ಬಿಬ್ಬರಿಗೆ ಹೇಳಿದಾರಂತೆ ಕಣೇ...ಆದರೆ ಅದು ಸುಲಭದ ವಿಷಯವಲ್ಲ ನೋಡು...ಇನ್ನೂ ಪ್ರಯತ್ನ ಮಾಡಿ ನೋಡೋಣಾಂತಂದ್ರು..."

...ಅದೇನೂ ಸುಲಭದ ವಿಷಯವಾಗಿರಲಿಲ್ಲ...ನಿಜ...ಆ ಕಾರಣಕ್ಕಾಗಿಯೇ ನಿರಾಶೆಯನ್ನುಂಟುಮಾಡುವ ಉತ್ತರ ಬಂದಿತ್ತು...ಆ ಉತ್ತರದಿಂದ ತನ್ನ ಆತ್ಮೀಯ ಗೆಳತಿಗೆ ನೋವಾಗಬಾರದೆಂದು ಸುಂದರಮ್ಮ ಇನ್ನೂ ನಡೆಯಬೇಕಾಗಿರುವ ಪ್ರಯತ್ನದ ಮಾತನ್ನಾಡಿದ್ದಳು. ಅಲ್ಲದೆ ತನ್ನ ಅಪೇಕ್ಷೆ ಅಷ್ಟು ಬೇಗನೆ ವಿಫಲವಾಯಿತೆಂದು ಒಪ್ಪಿಕೊಳ್ಳುವುದಕ್ಕೂ ಸುಂದರಮ್ಮ ಸಿದ್ಧಳಿರಲಿಲ್ಲ.

ಬನಶಂಕರಿ ತಲೆಬಾಗಿಸಿ ಕುಳಿತಳು.

"ದೇವರಿದಾನೆ, ನೋಡೋಣ," ಎಂದಳು ಸುಂದರಮ್ಮ. ಅದು ಆಕೆಯ ಕೊನೆಯ ರಕ್ಷಣೆಯ ಅಸ್ತ್ರ, ಎಲ್ಲರೂ ಆಡುವ ಕೊನೆಯ ಮಾತು. ಬೇರೆ ಉಪಾಯವಿಲ್ಲದೆ ಸುಂದರಮ್ಮ ಅದೇ ಮಾತನ್ನಾಡಿದಳು.

ರಾಮಶಾಸ್ತ್ರಿ ಪ್ರಯತ್ನಗಳನ್ನೇನೊ ಮಾಡುತ್ತಲಿದ್ದ. ಸಮೀಪವೆ ಇದ್ದ ಹೊಲಗದ್ದೆಗಳಿಂದ ಆತನಿಗೆ ಒಂದಿಷ್ಟು ಉತ್ಪತ್ತಿಯಾಗುತ್ತಿತ್ತು. ದಕ್ಷಿಣೆ, ಪೌರೋಹಿತ್ಯಗಳೆಂದು ಒಂದಿಷ್ಟು ಮೇಲುಸಂಪಾದನೆಯೂ ಆಗುತ್ತಿತ್ತು. ಆದರೆ ಕಂಡುದನ್ನು ಕಂಡಂತೆ ಹೇಳುವ ವಕ್ರನಾಲಗೆಯಿಂದಾಗಿ ಆತನಿಗೆ ವೈರಿಗಳ ಸಂಪಾದನೆಯೂ ಆಗದೆ ಇರುತ್ತಿರಲಿಲ್ಲ. ಹೀಗಾಗಿ ಬಾಳೆಮಣ್ಣೂರಿನಲ್ಲಿ ರಾಮಶಾಸ್ತ್ರಿ ಬನಶಂಕರಿಯ ಮಾತೆತ್ತುವುದು ಸಾಧ್ಯವೇ ಇರಲಿಲ್ಲ.

ಬೇರೆ ಊರುಗಳಲ್ಲಿ ಆತ ಮಾತೆತ್ತಿದನೆಂಬ ಸುದ್ದಿ ಮಾತ್ರ ಬಾಳೆಮಣ್ಣೂರಿಗೆ ಬಂತು. ಆ ಸುದ್ದಿಗೆ ರೆಕ್ಕೆ ಪುಕ್ಕಗಳು ಹುಟ್ಟಿದುವು; ಊಹಾಪೋಹಗಳಾದುವು.

"ಎಲಾ ಶಾಸ್ತ್ರಿ!" ಎಂದು ಕೆಲವರು ಬೆರಳನ್ನು ಮೂಗಿನ ಮೇಲೆ ಇಟ್ಟರು.

"ಶಾಸ್ತ್ರಿ ಆ ವಿಧವೆಗೆ ಏನೋ ಮಾಡಿದಾನೆ. ಅದಕ್ಕೇ ಈ ಪೇಚಾಟ!" ಎಂದರು ಹೆಚ್ಚು ಧೈರ್ಯವಿದ್ದವರು.

ರಾಮಶಾಸ್ತ್ರಿಯ ದಿಟ್ಟತನವನ್ನು ಕಂಡು ಅಸೂಯಾಪರರಾದವರು ನಾಲಗೆಗೆ ಲಂಗುಲಗಾಮಿಲ್ಲದೆ ಮಾತನಾಡಿದರು.

ಹೆಂಗಸರು ಸುಂದರಮ್ಮನನ್ನು ಗೋಳು ಹುಯ್ದರು.

ಇದೆಲ್ಲ ಪರಿಣಾಮವಾಗಿ, ವೈದಿಕಕ್ಕೆಂದು ರಾಮಶಾಸ್ತ್ರಿಗೆ ಬರುತ್ತಿದ್ದ ಆಹ್ವಾನಗಳು ಕಡಿಮೆಯಾದುವು.

ನಾಲಗೆಗಳು ಬನಶಂಕರಿಯನ್ನೂ ತಿವಿಯದೆ ಬಿಡಲಿಲ್ಲ.

ಹೀಗೆ ವಾತಾವರಣವೆಲ್ಲ ಇಂತಹ ಮಾತುಗಳಿಂದ ತುಂಬಿದ್ದರೂ ಅಜ್ಜಿಗೆ ಇದೊಂದು ವಿಷಯವೂ ಗೊತ್ತಿರಲಿಲ್ಲ. ಆಕೆಯೊಡನೆ ಮೊದಲು ಅದನ್ನು ಕುರಿತು ಮಾತನಾಡಿದ್ದು ದೇವಸ್ಥಾನದ ಅರ್ಚಕ.

"ಏನು ಸುಬ್ಬಕ್ಕ, ಏನೋ ನಡೆಸಿದೀಯಂತಲ್ಲಾ ?"

ಅಜ್ಜಿಗೆ ಅರ್ಥವಾಗಲಿಲ್ಲ.

"ರಾಮಶಾಸ್ತ್ರಿ ನಿನ್ನ ಮೊಮ್ಮಗಳಿಗೆ ಇನ್ನೊಂದು ಮದುವೆ ಮಾಡಿಸ್ಬೇಕೊಂತ ಬಹಳ ಓಡಾಡ್ತಿದ್ದಾನಂತೆ."

"ಅಯ್ಯೋ ಯಾರು ಹಾಗಂದೋರು ?"

"ಏನೂ ತಿಳೀದವಳ ಹಾಗೆ ಮಾಡ್ತೀಯಲ್ಲ ಸುಬ್ಬಕ್ಕ! ಏನೋಂತಿದ್ದೆ. ಪರವಾಗಿಲ್ಲ ನೀನೂ!"

"ಅಯ್ಯೋ! ಉಂಟೇ ಎಲ್ಲಾದರೂ! ಸಾಯೋ ಕಾಲಕ್ಕೆ ಈ ಮುದುಕಿ ಸುಳ್ಳಾಡಿದ ಳೊಂತ ಮಾಡ್ತಿದೀರಲ್ಲ."

ಮುದುಕಿಗೊಂದೂ ತಿಳಿಯದೆಂಬುದು ಅರ್ಚಕನಿಗೆ ಅರಿವಾಯಿತು.

ಮತ್ತೆ ಮನೆಯಲ್ಲಿ ಅಜ್ಜಿ—ಮೊಮ್ಮಗಳ ಪ್ರಕರಣ. ಆದರೆ ಸ್ವರವೆತ್ತಿ ಗದರಿಸುವ ಶಕ್ತಿಯೇ ಇರಲಿಲ್ಲ ಅಜ್ಜಿಗೆ. ಮೊಮ್ಮಗಳನ್ನು ಜರೆದು ನಿಂದಿಸಿ ಶಪಿಸಿ ಕೂಗಾಡಬೇಕೆಂದು ಆಕೆಗೆ ತೋರುತ್ತಿತ್ತು. ಆದರೆ ಆ ಮಾತುಗಳೆಲ್ಲ ಗಂಟಲಲ್ಲೆ ತಡೆದು ನಿಲ್ಲುತ್ತಿದ್ದುವು. ಆಕೆಯ ಹೃದಯ ಸೀದು ಹೋಗಿ, ಕೈಕಾಲುಗಳು ಕೊನೆಯೇ ಇಲ್ಲವೆಂಬಂತೆ ಕಂಪಿಸುತ್ತಿದ್ದುವು.

ಅಳುತಳುತ ಬನಶಂಕರಿ ಇಷ್ಟೇ ಅಂದಳು :

"ನನಗೊಂದೂ ತಿಳೀದು ಅಜ್ಜಿ. ಸುಂದರಮ್ಮ ಯಾವತ್ತೋ ಒಮ್ಮೆ ಏನೋ ಅಂದಿದ್ಲು—ಅಷ್ಟೇ ಅಜ್ಜಿ."

"ಅಯ್ಯೋ ಅಮ್ಮೀ....ಬೀದಿ ಮಾತಾಯ್ತಲ್ಲೇ ನಮ್ಮ ಸಂಸಾರ! ನನ್ನ ಮಾನ ಕಳೆದಿಯಲ್ಲೇ!"

"ಅಜ್ಜಿ, ಸಾಕಜ್ಜಿ. ಇನ್ನೊಂದು ಮಾತು ಹೇಳಿದರೆ ಬಾವಿಗೆ ಹಾರಿ ಪ್ರಾಣ ಬಿಡ್ತೀನಿ."

"ಓ ದೇವರೇ!"

ಅಜ್ಜಿ ಮೊಮ್ಮಗಳನ್ನು ಮತ್ತೆ ಬಯ್ಯಲಿಲ್ಲ. ಅವಳ ಮೆದುಳು ಯೋಚಿಸುವುದನ್ನೆ ನಿಲ್ಲಿಸಿತು. ಯಾವುದು ತಪ್ಪೊ, ಯಾವುದು ಸರಿಯೊ, ಯಾರಿಗೆ ಗೊತ್ತು ? ತನ್ನನ್ನೊಮ್ಮೆ ಪರಮಾತ್ಮ ತನ್ನ ಸಾನ್ನಿಧ್ಯಕ್ಕೆ ಕರೆದುಕೊಳ್ಳಬಾರದೇ ಎಂದು ಅಜ್ಜಿ ಹಂಬಲಿಸಿದಳು. ಆದರೆ ಆ ಹಂಬಲವನ್ನು, ಅಮ್ಮಿಗೆ ನೋವಾಗಬಹುದೆಂದು, ಮಾತುಗಳ ರೂಪದಲ್ಲಿ ಆಕೆ ಹೊರ ಗೆಡವಲಿಲ್ಲ. ಮೊಮ್ಮಗಳ ಮೈದಡವುತ್ತ ಅಜ್ಜಿ ಮೆಲ್ಲನೆ ಹೇಳಿದಳು :

"ದೇವರಿಗೆ ಕಣ್ಣಲ್ಲಿ ರಕ್ತವಿಲ್ಲ ಅಮ್ಮಿ....ನಮ್ಮ ಹಣೇಲಿ ಬರದದ್ದೇ ಹೀಗೆ... ಸಹಿ ಸ್ಕೋಬೇಕು ಮುದ್ದೂ........"

ಬನಶಂಕರಿ ಸಹಿಸಿಕೊಂಡಳು. ಬಿಂದಿಗೆಯನ್ನು ಕೆಳಕ್ಕಿಳಿಸಿದಾಗ ಬಾವಿಯ ನೀರು ಅಮ್ಮಿಯನ್ನು ಕಂಡು ಅಣಕಿಸುತ್ತಿತ್ತು. ಆ ಅಣಕಕ್ಕೆ ಅಮ್ಮಿ ಅಂಜಲಿಲ್ಲ. ನೀರಿನ ಆಳದ

ನೆಮ್ಮದಿಗೆ ಅವಳು ಮನಸೋಲಲಿಲ್ಲ.

....ಒಂದು ದಿನ ಅಜ್ಜಿ ಬೀದಿಯುದ್ದಕ್ಕೂ ಗೋಳೋ ಎಂದು ಅಳುತ್ತ ಓಡಿ ಬಂದಳು. ಯಾಕೆ, ಏನು, ಎಂದು ಯಾರೂ ಕೇಳಬೇಕಾಗಿರಲಿಲ್ಲ. ಅಜ್ಜಿಗಿಂತ ಮುಂಚಿತವಾಗಿ ಆ ಸುದ್ದಿ ಪ್ರಸಾರವಾಗಿತ್ತು. ಅದು, ಮಠದ ವೃದ್ಧಯತಿವರ್ಯರ ನಿಧನ. ಆ ನಿಧನದಿಂದ ಅಜ್ಜಿಯಷ್ಟೇ ಅಲ್ಲ; ಬಾಳೆಮಣ್ಣೂರಿನ ಎಷ್ಟೆಷ್ಟೋ ಜನ ದುಃಖಿತರಾಗಿದ್ದರು. ಸ್ವಾಮಿಗಳ ನಿಧನದಿಂದ, ಒಳ್ಳೆಯ ವ್ಯಕ್ತಿಯೊಬ್ಬರು ಕಣ್ಮರೆಯಾದ ಹಾಗಾಯಿತು.

ಹಾಗಾಯಿತೆಂದು ಸಂತುಷ್ಟರಾದವರೂ ಕೆಲವರಿದ್ದರು. ಆ ವೃದ್ಧ ಸ್ವಾಮಿ ಇದ್ದಾಗ ಧರ್ಮದ ಮಠದ ಮರೆಯಲ್ಲಿ ಕುಹಕ ನಡೆಸುತ್ತಿದ್ದ ದುಷ್ಟರ ಹಾದಿ ಸುಗಮವಾಗಿರಲಿಲ್ಲ. ಬಲು ಎಚ್ಚರಿಕೆಯಿಂದ ಕಳ್ಳತನದಿಂದ ತಮ್ಮ ದುರ್ವ್ಯಾಪಾರಗಳನ್ನು ಅವರು ನಡೆಸಬೇಕಾಗುತ್ತಿತ್ತು. ಈ ಮುದುಕ ಶನಿ ಇನ್ನೂ ಇದೆಯಲ್ಲಾ—ಎಂದು ಅವರು ಗೊಣಗುತ್ತಿದ್ದರು. ಅಂಥವರಿಗೆ ಈಗ ಸಂತೋಷವಾಯಿತು.

ಅಜ್ಜಿ ಮಾತ್ರ ಸ್ವಾಮಿಗಳ ನಿಧನದಿಂದ ಧೃತಿಗೆಟ್ಟಳು. ಬಾಳೆಮಣ್ಣೂರಿಗೆ ತಾನು ಬಂದು ನೆಲೆಸಿದ ಆರಂಭದಿಂದ ನಡುವೆ ಹಿಂತಿರುಗಿ ಹೋದವರೆಗೆ; ಬಳಿಕ ಮೊಮ್ಮಗಳೊಡನೆ ಬಂದ ದಿನದಿಂದ ಈವರೆಗೆ—ಆ ಸ್ವಾಮಿಗಳು ಆಡಿದ್ದ ಧೈರ್ಯ ತುಂಬಿಸುವ ನೂರು ಮಾತುಗಳು ಅಜ್ಜಿಗೆ ನೆನಪಾದುವು. ಬಾಲವಿಧವೆಯಾದ ಮೊಮ್ಮಗುವನ್ನು ಬೆನ್ನಿಗೆ ಅಂಟಿಸಿಕೊಂಡು ಬಂದು, ಬಲು ಸುರಕ್ಷಿತವಾಗಿ ಅಜ್ಜಿ ಅದನ್ನು ಸಾಕಿ ಸಲಹಿದ್ದಳು. ಅದು ಬಲು ದೊಡ್ಡ ಜವಾಬ್ದಾರಿಯ ಕೆಲಸವಾಗಿತ್ತು. ಆ ಕೆಲಸವನ್ನು ನಿರ್ವಹಿಸಲು ಅಜ್ಜಿ ಸಮರ್ಥಳಾಗಿದ್ದರೆ, ಅದಕ್ಕೆ ಕಾರಣರು ಆ ಯತಿ.

" ದೇವರಂಥಾ ಮನುಷ್ಯ...ದೇವರಂಥಾ ಮನುಷ್ಯ... ! ಹೋಗಿಯೇ ಬಿಟ್ರು. ಈ ಚಂಡಾಲ ಲೋಕಾನ ಬಿಟ್ಟು ಹೊರಟೇ ಹೋದ್ರು..."

ಅಜ್ಜಿಯ ವ್ಯಥೆಯ ಪೂರ್ಣ ಅರಿವು ಬನಶಂಕರಿಗೆ ಆಗಲು ಬಹಳ ದಿನ ಹಿಡಿಯಲಿಲ್ಲ. ಆಕೆಯನ್ನು ಕುರಿತ ಕುತ್ಸಿತ ಮಾತುಗಳು ಬಹಿರಂಗವಾಗಿ ನಿರ್ಭಯವಾಗಿ ಓಡಾಡಿದುವು.

" ಏನು ಸುಬ್ಬಕ್ಕಾ, ಸ್ವಾಮಿಗ್ಳು ತೀರ್‍ಕೊಂಡ್ರಲ್ಲಾ..." ಎಂದು ಅಜ್ಜಿಯೊಡನೆಯೂ ಕೆಲವರು ವ್ಯಂಗ್ಯೋಕ್ತಿಯನ್ನಾಡಿದರು.

ಅಜ್ಜಿ ಪ್ರತಿ ದಿನವೂ ಗೊಣಗಿದಳು, ಶಪಿಸಿದಳು, ದೇವರಿಗೆ ಮೊರೆ ಇಟ್ಟಳು. ದೇಹ ಬಡವಾಯಿತು, ಬೆನ್ನು ಮತ್ತಷ್ಟು ಬಾಗಿತು. ಉಳಿದಿದ್ದ ಎರಡು ಮೂರು ಹಲ್ಲುಗಳೂ ಉದುರಿಹೋದುವು. ಕಣ್ಣುಗಳು ಮಸಕಾದುವು.

" ಇನ್ನೇನಪ್ಪಾ ಗತಿ ? ಅಮ್ಮಿಗೆ ಯಾರಪ್ಪಾ ದಿಕ್ಕು ? " ಎನ್ನುವುದೇ ಅಜ್ಜಿಯ ದಿನ ನಿತ್ಯದ ಪಲ್ಲವಿಯಾಯಿತು.

ಸುಂದರಮ್ಮನೇನೋ ಸಂತೈಸುವ ಮಾತನ್ನಾಡದಿರಲಿಲ್ಲ.

" ನೀವು ಸುಮ್ನಿರಿ ಅಜ್ಜಿ...ಯಾಕೆ ಹೀಗೆ ಗೋಳಾಡ್ತೀರ ? ಯಾರು ಏನ್ಮಾಡ್ತಾರೋ ನೋಡೋಣ. ನಾವಿಲ್ವೆ ? "

ಅವರಿದ್ದರು. ಆ ಧೈರ್ಯವೊ ಅಥವಾ ಆತ್ಮವಿಶ್ವಾಸವೊ ಅಂತೂ ಬನಶಂಕರಿ ಎದೆಗುಂದಲಿಲ್ಲ. ತನ್ನ ಬಾಳಿನ ದೋಣಿಯ ಅಂಬಿಗಳೂ ಅವಳಾಗಿರಲಿಲ್ಲ. ಅವಳ ಕೈಯಲ್ಲಿ

ಚುಕ್ಕಾಣಿ ಇರಲಿಲ್ಲ. ಹಾಯಿ ಇರಲಿಲ್ಲ ದೋಣಿಗೆ. ಸುಮ್ಮಸುಮ್ಮನೆ ಗೊತ್ತು ಗುರಿ ಇಲ್ಲದೆ ಅದು ನೀರ ಮೇಲೆ ತೇಲುತ್ತಿತ್ತು. ಮುಳುಗಿರಲಿಲ್ಲ, ತೇಲುತ್ತಿತ್ತು.

ಸುಂದರಮ್ಮನೆಂದಳು :

"ಬನೂ, ಮೂದೇವಿಯಾಗ್ಬೇಡಮ್ಮಾ. ಏನಾಗಿದೇಂತ ಈ ಮೌನ ?"

"ಮೂದೇವಿಯಾಗಿದ್ದರೇ ಮೇಲಾಗಿತ್ತು ಅಕ್ಕಾ. ಮಾತನಾಡೋ ಕಷ್ಟ ತಪ್ಪಿತ್ತು."

"ಹಾಗೆ ನೊಂದ್ಕೋ ಬಾರ್ದು ಬನೂ. ದಿವಸ್ದಿಂದ ದಿವಸಕ್ಕೆ ಅಜ್ಜಿ ಕ್ಷೀಣವಾಗ್ತಾ ಇದಾರೆ. ನೀನು ನಗುನಗ್ತಾ ಓಡಾಡ್ತಾ ಇದ್ರೆ ಆಕೆಗೂ ಸಮಾಧಾನವಾಗುತ್ತೆ."

ಅವಿಮ್ಮ ನಕ್ಕಳು. ನೋವು ನಗುವಾಗಿ, ಮಾಟವಾದ ಆ ತುಟಿಗಳ ಮೇಲೆ ವಿಶಾಲ ವಾದ ಮುಖದ ಮೇಲೆ ಕ್ಷಣಕಾಲ ಕುಣಿದು ಮರೆಯಾಯಿತು.

ಗೆಳತಿಯ ಸಂಕಟವನ್ನು ಸಹಿಸಲಾರದೆ ಸುಂದರಮ್ಮನ ಕಂಠ ಗದ್ಗದಿತವಾಯಿತು. ಆಕೆ ತನ್ನ ಮನೆಗೆ ಹೊರಟುಹೋದಳು. ಮನೆಯಲ್ಲಿ ದೇವರ ಮೂರ್ತಿಯ ಮುಂದೆ ನಿಂತು ಕೈ ಜೋಡಿಸಿ ತಲೆಬಾಗಿ ಅತ್ತಳು.

"ಯಾರ ಪ್ರೀತ್ಯರ್ಥ ದೇವರೆ—ಇದು ಯಾರ ಪ್ರೀತ್ಯರ್ಥ ?" ಎಂದು ಮೌನದ ಮಹಾದೇವನನ್ನು ಆಕೆ ಕೇಳಿದಳು.

...ಪಟ್ಟಕ್ಕೆ ಬಂದ ಯುವಕ ಯತಿಗಳ ಧರ್ಮರಾಜ್ಯಭಾರ ಬಾಳೆಮಣ್ಣೂರಿನಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿತು. ತಮ್ಮ ಪ್ರೀತ್ಯರ್ಥವಾಗಿ ಏನನ್ನು ಮಾಡಿಸುವುದಕ್ಕೂ ಅವರು ಹಿಂದು ಮುಂದು ನೋಡಲಿಲ್ಲ. ಅವರ ವಿಷಯಲಂಪಟತನ ಗೋಪ್ಯದ ಆವರಣವನ್ನು ದಾಟಿ ಹೊರಬಂತು. ಅವರ ಹಸ್ತಕರ ಬಲೆಯೊಳಗಿಂದ ಪಾರಾಗುವುದು ದುಸ್ಸಾಧ್ಯ ವಾಯಿತು.

ಅಜ್ಜಿ ಈಗಲೂ ದೇವಸ್ಥಾನಕ್ಕೆ ಹೋಗುತ್ತಿದ್ದಳು. ಅಲ್ಲಿ ಮಠಕ್ಕೆ ಸಂಬಂಧಿಸಿದ ಹತ್ತಾರು ಕೆಟ್ಟ ವಾರ್ತೆಗಳು ಆಕೆಯ ಕಿವಿಯ ಮೇಲೆ ಬೀಳುತ್ತಿದ್ದುವು. ಶ್ರವಣಶಕ್ತಿ ಕಡಿಮೆ ಯಾಗಿತ್ತು ಆ ಕಿವಿಗಳಿಗೆ. ಹೀಗಿದ್ದರೂ ಆಕೆಗೆ ಸ್ಪಷ್ಟವಾಗಿ ಕೇಳಿಸುವಂತೆ ಗಟ್ಟಿಯಾಗಿಯೇ ಜನ ಮಾತನಾಡುತ್ತಿದ್ದರು. ಮುದುಕಿ ಜೋಲುಮೋರೆ ಹಾಕಿಕೊಂಡು ಹಿಂತಿರುಗುತ್ತಿದ್ದಳು.

ಆಕೆಯನ್ನು ಹಾದಿಯಲ್ಲೆ ತಡೆದು ಒಮ್ಮೆ ಮಠದವನೊಬ್ಬ ಸುಖ ದುಃಖ ವಿಚಾರಿಸಿದ.

"ಏನು ಸುಬ್ಬಕ್ಕ, ಅಪರೂಪವಾದೆಯಲ್ಲಾ. ಹೊಸ ಯತಿಗಳು ಪಟ್ಟಕ್ಕೆ ಬಂದಮೇಲೆ ಮಠಕ್ಕೆ ನೀನು ಬರೋದೇ ಇಲ್ಲಾಂತ ಕಾಣುತ್ತೆ."

ಉಗುಳು ನುಂಗುತ್ತ ಅಜ್ಜಿ ಮೆಲ್ಲನೆ ಉತ್ತರವಿತ್ತಳು :

"ಉಂಟೆ ಎಲ್ಲಾದರೂ ? ಬಂದಿದ್ದೆ...:ಬಂದಿದ್ದೆ....ಆದರೆ ಈಗ ವಯಸ್ಸಾಗ್ತಾ ಬಂತು...."

"ಪುರಾಣ ಕೇಳೋಕೂ ಬರೋದಿಲ್ಲ ನೀನು ? ಬಿಂದೆಯಾದರೆ ಮೊಮ್ಮಗಳ್ನ ಕರಕೊಂಡು ಬಂದ್ಬಿಡ್ತಿದ್ದೆ...."

"ಹೌದೌದು....ಈಗ ನಡೆಯೋಕೂ ಆಗಲ್ಲ....ಕಾಲು ನಡುಗ್ತವೆ...."

"ಸಾಯಂಕಾಲ ಮನೇಲೇ ಇರ್ತೀಯೇನೋ ?....ಮೊಮ್ಮಗಳ್ನ ಪಾಪ....ಬಿಟ್ಟಿರೋ ಹಾಗೂ ಇಲ್ಲ."

ಹಲ್ಲುಗಳಿಲ್ಲದ ಒಸಡುಗಳನ್ನು ಒಂದಕ್ಕೊಂದು ಆನಿಸಿ, ಕ್ಷಣಕಾಲ ಮೌನವಾಗಿದ್ದು ಅಜ್ಜಿ ಬೇಕೆಂದೇ ಸ್ವರವೇರಿಸಿ ಕೇಳಿದಳು :

" ಆಂ ? ಏನಂದಿರಿ ? "

ಆತನ ಉತ್ತರ ತಡವರಿಸಿತು. ಆದರೂ ನಗುತ್ತ ಹೇಳಿದ :

" ಏನೂ ಇಲ್ಲ....ಈಗೀಗ ಸಾಯಂಕಾಲವೆಲ್ಲ ಮನೇಲೇ ಇರ್ತೀಯಾ—ಅಂದೆ."

" ಇರ್ತೀನಿ ! ಅಲ್ದೆ ಮತ್ತೆ ಸುಡುಗಾಡಿಗೆ ಹೋಗ್ಬೇಕೇನು ? ಅವ್ನಿಂದ ಆಜ್ಞೆ ಬರೋಕ್ಮುಂಚೆ ನಾನೇ ಸುಡುಗಾಡಿಗೆ ಹೋಗ್ಲೇನು ? "

ಮಠದವನು ಅಲ್ಲಿ ನಿಲ್ಲಲಿಲ್ಲ.

ಬಳಿಕ ಅಜ್ಜಿ ಕೇಳಿಸುವವರಿಗೆ ಅರ್ಥವಾಗದ ಹಾಗೆ ಏನನ್ನೋ ಗೊಣಗುತ್ತ ಮುಂದೆ ನಡೆದಳು.

ಒಂದು ರಾತ್ರೆ ಅಮ್ಮಿ—ಅಜ್ಜಿಯರು ನಿದ್ದೆ ಹೋಗಲು ಸಿದ್ಧತೆ ಮಾಡುತ್ತಿದ್ದಾಗಲೇ ಮನೆಯ ಬಾಗಿಲನ್ನು ಧಪಧಪನೆ ಬಡೆದ ಸದ್ದಾಯಿತು. ಸುಂದರಮ್ಮ ಹಾಗೆ ಎಂದೂ ಕದ ಬಡೆದವಳಲ್ಲ. ಯಾವುದೋ ಗಂಡಾಂತರ ಬಂತೆಂದು ಆಕೆಯ ಎದೆ ಡವಡವನೆ ಹೊಡೆದು ಕೊಂಡಿತು. ಆದರೂ ಅಮ್ಮಿ ಕಂಗಾಲಾಗಲಿಲ್ಲ.

" ಯಾರೇ ಅದು ಕದ ತಟ್ತಿರೋದು ? ಸುಂದರಮ್ನೇನೆ ? " ಎಂದು ಅಜ್ಜಿ ಮೊಮ್ಮ ಗಳನ್ನುದ್ದೇಶಿಸಿ ಕೇಳಿದಳು.

ಮೊಮ್ಮಗಳು ಉತ್ತರವೀಯಲಿಲ್ಲ. ಉಸಿರು ಹಿಡಿದು ಕ್ಷಣಕಾಲ ನಿಂತಳು.

ಮತ್ತೊಮ್ಮೆ ಹಿಂದಿನಂತೆಯೆ ಸದ್ದಾಯಿತು.

" ಯಾರದು ? " ಎಂದು ಅಮ್ಮಿ ತನಗೆ ತಾನೇ ಧೈರ್ಯತುಂಬುವಂತಹ ಗಡಸು ಸ್ವರದಲ್ಲಿ ಕೇಳಿದಳು.

ಉತ್ತರ ಬರಲಿಲ್ಲ. ಎರಡು ನಿಮಿಷಗಳ ಮೌನದ ಬಳಿಕ ಟಕ್ ಟಕ್ ಸದ್ದು. ಆಮೇಲೆ ಕೃತಕವಾಗಿ ರಾಗವೆಳೆದ ಸ್ವರ :

" ಬಾಗಿಲೂ ಊ ಊ..."

ಟಕ್ ಟಕ್ ಸದ್ದು ಮತ್ತು ಆ ಸ್ವರ ಬಾ—ಗಿ—ಲೂ—ಊ...ಸುಂದರಮ್ಮನ ಮನೆಯ ಮುಂದೆ ಗಂಡ ರಾಮಶಾಸ್ತ್ರಿ ಹಾಗೆ ಕದ ತಟ್ಟಿ ' ಬಾಗಿಲೂ ' ಎಂದಾಗಲೆಲ್ಲ ಬನಶಂಕರಿಗೆ ಪ್ರತಿ ಸಾರೆಯೂ ಏಕರೀತಿಯ ವಿಶೇಷ ಅನುಭವವಾಗುತ್ತಿತ್ತು. ಈ ದಿನ ಸದ್ದಾಗುತ್ತಿರು ವುದು ತನ್ನ ಮನೆಯ ಎದುರು ; ಆ ಸ್ವರ ಬರುತ್ತಿರುವುದು ತನ್ನನ್ನು ಉದ್ದೇಶಿಸಿ !

ಬವಳಿ ಬಂದ ಹಾಗಾಯಿತು ಅಮ್ಮಿಗೆ. ಆದರೂ ಆಕೆ ಕರ್ಕಶ ಸ್ವರದಲ್ಲಿ ಕಿರಿಚಿದಳು :

" ಯ್ಯಾರ್ರಿ ಅದು ? ಅದು ಯ್ಯಾರ್ರೀ ? "

ಮತ್ತೆ ಬಾಗಿಲ ಮೇಲೆ ಸದ್ದು.

" ನಾನು ಚಿನ್ನಾ ! "

" ಯಾವನೋ ಅವನು ಬಡ್ಡೀಮಗ ? ಬಂದೆ ತಾಳು !" ಎಂದು ಅಜ್ಜಿ ಎದ್ದು ನಿಲ್ಲುತ್ತ ಆಕ್ರೋಶ ಮಾಡಿದಳು. ಆದರೆ ವೃದ್ಧೆಯ ಆ ಸ್ವರಕ್ಕೆ ಅಂಜಿ ಆತ ಓಡಿ ಹೋಗು ವಂತೆ ತೋರಲಿಲ್ಲ.

ಭಾವಣಿಯೇ ಹಾರಿ ಹೋಗುವಂತೆ ಅಮ್ಮಿ ಕೂಗಿದಳು :

" ಸುಂದರಮ್ಮಾ ! ಅಕ್ಕಾ ! ಅಕ್ಕಾ ! ಬನ್ನಿ ! ಬನ್ನಿ ! ಯಾವನೋ ಪಿಶಾಚಿ ಬಾಗಿಲು ಬಡೀತಿದ್ದಾನೆ ! "

" ಬಂದೇ ! " ಎಂದು ಸುಂದರಮ್ಮನ ಸ್ವರ ಬಂತು.

ಆದರೆ ಒಮ್ಮೆಲೆ ಅವಳು ಬರಲಿಲ್ಲ. ಮಗುವನ್ನು ಮಲಗಿಸುತ್ತಿದ್ದವಳು ಎದ್ದು ನಿಂತಳು. ಗಂಡ ಮನೆಗೆ ಬಂದಿರಲಿಲ್ಲ. ಅದು ಅನಿಶ್ಚಯತೆಯ ಒಂದು ನಿಮಿಷ.

ಬಾಗಿಲು ಬಡೆಯುತ್ತಿದ್ದವನಿಗೆ ರಾಮಶಾಸ್ತ್ರಿ ಮನೆಯಲ್ಲಿ ಇಲ್ಲದೆ ಇರುವ ವಿಷಯ ತಿಳಿದಿತ್ತೇನೊ ! ಆತ ಮೌನವಾಗಿಯೇ ನಿಂತ.

ಅಮ್ಮಿ ಮತ್ತೆ ಕರೆದಳು :

" ಅಕ್ಕಾ ! ಬನ್ನಿ ! ಅಕ್ಕಾ ! "

ಅದು ಕಾತರಪೂರ್ಣ ಆರ್ತನಾದ. ತನಗರಿಯದಂತೆಯೇ ಸುಂದರಮ್ಮ ಅದಕ್ಕೆ ಉತ್ತರವಿತ್ತಳು :

" ಬಂದೆ ಬನೂ…ಕತ್ತಿ ಹುಡುಕ್ತಾ ಇದೀನಿ—ಸಿಗ್ತು ! ಬಂದೆ ! ಅವರೂ ಬಂದ್ಬಿಟ್ರು ! "

ರಾಮಶಾಸ್ತ್ರಿಯ ಮನೆಯ ಬಾಗಿಲು ತೆರೆದ ಸದ್ದಾಯಿತು. ಇತ್ತ ಹೊರಗಿದ್ದ ವ್ಯಕ್ತಿ ಚಲಿಸಿದ ಸಪ್ಪಳ.

ಮತ್ತೆರಡು ನಿಮಿಷ ಮೌನ.

" ತೆಗೆಯೇ ಬಾಗಿಲು ! "

ಅದು ಸುಂದರಮ್ಮನ ಸ್ವರ. ಅಮ್ಮಿ ಬಾಗಿಲು ತೆರೆದಳು. ಒಂದು ಕೈಯಲ್ಲಿ ಮುರು ಕಲು ಕುಡುಗೋಲೊಂದು. ಇನ್ನೊಂದರಲ್ಲಿ ಚಿಮಿಣಿದೀಪ. ಹಣೆಯ ಮೇಲೆ ಬೆವರಿನ ಮುತ್ತುಗಳು ಸಾಲು ಕಟ್ಟಿದ್ದರೂ ಕಣ್ಣುಗಳಲ್ಲಿ ಸಿಟ್ಟು ಕಿಡಿಕಾರುತ್ತಿತ್ತು.

ಆ ಅಕ್ಕನ ಎದುರು ಅಳಬೇಕೆನ್ನಿಸಿತ್ತು ಅಮ್ಮಿಗೆ. ಆದರೂ ಆಕೆ ಮನಸ್ಸನ್ನು ಬಿಗಿ ಹಿಡಿದು ಕೇಳಿದಳು:

" ಎಲ್ಲಿ ನಿಮ್ಮವರು ? "

" ಆ ಪಿಶಾಚೀನ ಅಟ್ಟಿಸ್ಕೊಂಡು ಹೋಗಿದಾರೆ ! "

" ಅಯ್ಯೊ ! ಒಬ್ಬರೇ ಹೋದರೆ ? "

" ಒಬ್ಬರು ಸಾಲ್ದೇನು ಅದಕ್ಕೆ ? ಅಂಥವ್ರಿಗೆಲ್ಲಾ ಶಕ್ತಿ ಸಾಮರ್ಥ್ಯ ಇರುತ್ತೆ ಅಂತ ತಿಳ್ಕೊಂಡಿದ್ಯೇನು ನೀನು ? "

" …ಬಾ ಅಕ್ಕ, ಒಳಗೆ."

ಸುಂದರಮ್ಮ ಒಳಬಂದಳು. ಅಜ್ಜಿ ತನ್ನ ಕೆಂಪು ಸೀರೆಯ ಸೆರಗಿನಿಂದ ಕಣ್ಣೊರೆಸಿ ಕೊಳ್ಳುತ್ತಿದ್ದಳು.

" ನಮ್ಗತಿ ಈ ಸ್ಥಿತಿಗೂ ಬಂತಲ್ಲೇ," ಎಂದು ಆಕೆ ಎರಡು ಮೂರು ಸಾರೆ ಅಂದಳು.

" ಒಬ್ಬೊಬ್ಬರದು ಒಂದೊಂದು ಗತಿ. ನೀವು ಸುಮ್ನಿರ್ಬಾರ್ದೆ ಅಜ್ಜಿ ? " ಎಂದಳು ಸುಂದರಮ್ಮ.

ನಿಮಿಷಗಳು ಕಳೆದುವು ಮೆಲ್ಲನೆ.

“ ಏಳಿ, ಇಬ್ಬರೂ ನಮ್ಮನೆಗೇ ಬಂದ್ಬಿಡಿ. ಅಲ್ಲೇ ಮಲಕ್ಕೊಳ್ಳಿ.”

ಆ ಮಾತಿಗೆ ಉತ್ತರ ಹೇಳುವುದರ ಬದಲು ಬನಶಂಕರಿ ಗಾಬರಿಯಿಂದಲೇ ಕೇಳಿದಳು :

“ ಎಲ್ಲಕ್ಕ ನಿಮ್ಮವರು ಕಾಣ್ತೊಲ್ಲ ! ”

ಸುಂದರಮ್ಮ ಆ ವಾತಾವರಣದಲ್ಲೂ ವಿಚಿತ್ರವೆನಿಸುವ ಹಾಗೆ ಹಿತವಾಗಿ ನಕ್ಕಳು.

“ ಅವರು ಮನೆಗೆ ಬಂದಿದ್ರೆ, ತಾನೆ ? ” ಎಂದಳು.

ಸುಂದರಮ್ಮನ ಎದೆಗಾರಿಕೆಯನ್ನು ಕಂಡು ಅಜ್ಜಿ ಮೊಮ್ಮಗಳ ಹೃದಯಗಳು ಅರಳಿದುವು.

ಆ ರಾತ್ರೆ ಏನೋ ಅಮ್ಮಿ ಅಜ್ಜಿಯೊಡನೆ ಸುಂದರಮ್ಮನ ಮನೆಯಲ್ಲಿ ನಿದ್ದೆಹೋದಳು. ಆದರೆ ರಾತ್ರೆಗಳು ಆ ಬಳಿಕ ಕೂಡಾ ಎಷ್ಟೋ ಇದ್ದುವಲ್ಲ ?

ಹಗಲು ರಾತ್ರೆಗಳೆರಡನ್ನೂ ಎಚ್ಚರದಿಂದ ಕಳೆಯಬೇಕಾದ ಪರಿಸ್ಥಿತಿ.

‘ ಬಾಗಿಲು ’ ಬಡಿದವನ ಅನಂತರ ಬಂದವನು ಒಬ್ಬ ಕುಡುಕ ಮಹಾನುಭಾವ. “ ಆ ಸ್ವಾಮಿ ಆಗ್ಬೌದೋ ?...ನಾನು ಆಗಾಕಿಲ್ವೊ ? ” ಎಂದು ಆತ ಕಿರಿಚುತ್ತಿದ್ದ.

ಆದರೆ ಈ ಸಲ ರಾಮಶಾಸ್ತ್ರಿ ಮನೆಯಲ್ಲಿದ್ದ.

“ ನಿನ್ನನ್ನು ಚೆನ್ನಾಗಿ ಥಳಿಸ್ತೀನಿ, ಆಗ್ಬೌದೊ ? ” ಎಂದು ಆತ ಕುಡುಕನನ್ನು ಕೇಳಿದ.

“ ಓ ಆಗ್ಬೌದು. ಥಳಿಸಿ ಬುದ್ದಿ ! ”

ಕುಡುಕನಿಗೆ ಅಮಲೇರಿತ್ತು.

ರಾಮಶಾಸ್ತ್ರಿ ಒಂದು ಸೌದೆ ಕೋಲು ತಂದು ಆ ವ್ಯಕ್ತಿಗೆ ಬಲವಾಗಿ ಬಾರಿಸಿದ. ಜುಟ್ಟು ಹಿಡಿದು ದರದರನೆ ಎಳೆದುಕೊಂಡು ಬೀದಿಯುದ್ದಕ್ಕೂ ಹೋದ.

“ ಚೆನ್ನಾಗಿ ಒಡೀರಿ ಬುದ್ದಿ. ನೀವಾಗ್ಲೆ ಅವಳ್ಜತೇಲಿ ಮನಿಕ್ಕೊಂಡು ಎದ್ಬಿಟ್ರೇಂತ ನಾನ್ಬಂದೆ........ನಿಮ್ಕೆಲ್ಸ ಇನ್ನೂ ಆಗೇ ಇಲ್ವೇನೋ ? ”

“ ಥೂ ! ಯಾವನೊ ನೀನು ಮುಠ್ಠಾಳ ? ” ಎಂದು ಗದರಿಸುತ್ತ ರಾಮಶಾಸ್ತ್ರಿ, ದೂರ ಬೀದಿಯ ಬದಿಯಲ್ಲಿ ಆತನನ್ನು ಕೆಡವಿದ, ತುಳಿದ.

ಅದಾದ ಸ್ವಲ್ಪ ದಿನಗಳಲ್ಲೆ ಒಂದು ಸಂಜೆ ರಾಮಶಾಸ್ತ್ರಿ ಮನೆಗೆ ಹಿಂದಿರುಗುತ್ತಿದ್ದಾಗ ಯಾರೋ ಪುಂಡರು ಅವನ ಮೇಲೆ ಬಿದ್ದರು. ಯಾರು ಎಂಬುದು ತಿಳಿಯದ ಹಾಗೆ ಹಿಂಬದಿಯಿಂದ ಬಂದು ಹೊಡೆದು ಓಡಿಹೋದರು. ತಲೆಗೂ ಕಾಲಿಗೂ ಒಂದಿಷ್ಟು ಗಾಯ ವಾಗಿತ್ತು. ರಕ್ತ ಸೋರಿತ್ತು ಸ್ವಲ್ಪ.

ಅದು ಯಾಕೆ ಎಂಬುದು ರಾಮಶಾಸ್ತ್ರಿಗೆ ತಿಳಿದಿತ್ತು. ಸುಂದರಮ್ಮನಿಗೂ ತಿಳಿದಿತ್ತು. ಬನಶಂಕರಿಗೂ ಅದು ತಿಳಿಯುವುದು ಕಷ್ಟವಾಗಿರಲಿಲ್ಲ. ಮಠದ ಸ್ವಾಮಿಯಿಂದ ಹಿಡಿದು ಕುಡಿದ ಲಫಂಗನ ವರೆಗೆ, ಎಷ್ಟೊಂದು ಜನ ವಿರೋಧಿಗಳಿರಲಿಲ್ಲ ರಾಮಶಾಸ್ತ್ರಿಗೆ! ಬನಶಂಕರಿಯ ನಿಮಿತ್ತದಿಂದ ಎಷ್ಟೊಂದು ಜನ ಹೊಸ ವಿರೋಧಿಗಳನ್ನು ಆತ ಗಳಿಸಿಕೊಂಡಿರಲಿಲ್ಲ !

ಹಾಗೆಂದು ರಾಮಶಾಸ್ತ್ರಿಯಾಗಲಿ ಸುಂದರಮ್ಮನಾಗಲಿ ಬನಶಂಕರಿಯ ಕೈ ಬಿಡುವುದು ಸಾಧ್ಯವಿತ್ತೆ ? ತನಗೆ ಏನಾದರೂ ಸರಿಯೆ, ಆದರೆ ತನ್ನಿಂದಾಗಿ ಬೇರೆಯವರಿಗೆ ಹೀಗಾಯಿ ತಲ್ಲಾ, ಎಂದು ಆಕೆ ಸಂಕಟಪಟ್ಟಳು.

ರಾಮಶಾಸ್ತ್ರಿಗಾದ ಗಾಯಗಳು ಗುಣವಾದುವು.

ಆದರೆ ಬನಶಂಕರಿಯ ಹೃದಯದ ಹುಣ್ಣಿನ ಮೇಲೆ ಕಾದ ಕಬ್ಬಿಣದಿಂದ ಎಳೆಯಲಾಗಿದ್ದ ಬರೆಗಳು ಹಸುರಾಗಿಯೇ ಉಳಿದಿದ್ದುವು.

ಅಂತಹ ಸನ್ನಿವೇಶದಲ್ಲಿ ಅಜ್ಜಿ ಕಾಹಿಲೆ ಬಿದ್ದಳು. ಹೊರಹೋಗುವುದಂತಿರಲಿ, ಮಲಗಿದ್ದಲ್ಲಿಂದ ಆಕೆ ಏಳುವುದೇ ದುಸ್ತರವಾಯಿತು. ಅಮ್ಮಿ ದೇವಸ್ಥಾನಕ್ಕೆ ಹೋಗಿ ಸೇವೆ ಮಾಡಲಿಲ್ಲ, ಪ್ರಸಾದ ತರಲಿಲ್ಲ.

ಜೀವನಹಳ್ಳಿಯಲ್ಲಿ ಆಕೆಯದಾದ ಸ್ವಲ್ಪ ಹಣವಿತ್ತು. ಸುಂದರಮ್ಮನಿಗೆ ಹೇಳಿದ್ದರೆ, ಗಂಡನನ್ನು ಕಳುಹಿಸಿ ಅದನ್ನು ತರಿಸಿ ಕೊಡುತ್ತಿದ್ದಳೋ ಏನೋ. ಆದರೆ ಪುಂಡರು ರಾಮಶಾಸ್ತ್ರಿಯ ಮೇಲೆ ಕೈಮಾಡಿದ ಅನಂತರ ಅಂತಹ ಕೆಲಸವನ್ನೆಲ್ಲ ಆತನಿಗೆ ವಹಿಸಿಕೊಡಲು ಅಮ್ಮಿ ಅಪೇಕ್ಷಿಸಲಿಲ್ಲ.

ಸುಂದರಮ್ಮ ಅಕ್ಕಿ ಬೇಳೆ ಸಾಲ ಕೊಟ್ಟಳು. ಮನೆಯಲ್ಲಿ ಅಜ್ಜಿ ಕೂಡಿಹಾಕಿದ್ದ ಹಲ ಕೆಲವು ರೂಪಾಯಿಗಳೂ ಕರಗಿಹೋದುವು.

ಹೀಗೆ ಅಜ್ಜಿ ಮಲಗಿದ್ದಾಗಲೊಮ್ಮೆ, ಮಠದ ಸ್ವಾಮಿಗಳಿಂದ ಆಕೆಗೆ ಕರೆ ಬಂತು.

"ಏನಪ್ಪ? ಈ ಮುದುಕಿಯಿಂದ ಆಗಬೇಕಾದ ಸೇವೆ ಇನ್ನೂ ಮುಗಿದಿಲ್ವೊ?" ಎಂದು ಅಜ್ಜಿ ಕಹಿ ಮನಸ್ಸಿನಿಂದ ಅಂದಳು.

ಮಠದ ದೂತನೆಂದ:

"ಯಾರಿಗೆ ಗೊತ್ತು ಸುಬ್ಬಕ್ಕ? ಕಾಹಿಲೆ ಬಿದ್ದಿದ್ದೀಂತ ಸನ್ನಿಧಿಗೆ ನೀನು ಅರಿಕೆ ಮಾಡೋದಾದರೂ ಬೇಡ್ವೇನು? ನಿನ್ನ ಸಂಕಟ ಅವರಿಗಾದರೂ ಹ್ಯಾಗೆ ವೇದ್ಯವಾಗ್ಬೇಕು ಹೇಳು."

ಮಾತು ಬೇಗನೆ ಮುಗಿಯಲೆಂದು ಬನಶಂಕರಿ, "ಈಗೇನಾಗ್ಬೇಕು?" ಎಂದು ಕೇಳಿದಳು.

ಆ ದೂತ ಹುಬ್ಬು ಕುಣಿಸುತ್ತ, ಅಸಹ್ಯವಾಗಿ ನಗುತ್ತ, ಹಸಿದವನು ಒಂದೇ ಸಲ ಕಬಳಿಸ ಬಯಸುವನಂತೆ ಅಮ್ಮಿಯನ್ನು ನೋಡಿದ.

"ಹೆ—ಹೆ—ಅಂಥಾದೇನೂ ಇಲ್ಲ...ಅಜ್ಜಿಗೆ ಕಾಹಿಲೆ ಅನ್ನೋ ವಿಷಯ ಸ್ವಾಮಿಗ್ಳಿಗೆ ನೀನು ಬಂದು ಅರಿಕೆ ಮಾಡೋದು ಮೇಲೂಂತ...ಅಲ್ವೆ? ಯೋಚಿಸ್ನೋಡು."

"ಆಗಲಿ ಹೋಗಿ ನೀವಿನ್ನು," ಎಂದಳು ಅಜ್ಜಿ.

ಆತನೇನೊ ಹೊರಟು ಹೋದ. ಅಮ್ಮಿ ಮರೆತರೆ, ಮತ್ತೆ ಬಂದು ನೆನಪು ಹುಟ್ಟಿಸುವ ಆಶ್ವಾಸನೆಯನ್ನಿತ್ತು ಹೋದ.

ಆದರೆ ಅಮ್ಮಿ ಅಲ್ಲಿಗೆ ಹೋಗಬಯಸಲಿಲ್ಲ. "ಬೇಡ" ವೆಂದು ಬಾಯಿ ಬಿಟ್ಟು ಹೇಳದಿದ್ದರೂ, "ಹೋಗು" ಎಂದು ಅಸ್ಪಷ್ಟವಾಗಿಯೂ ತೊದಲು ಮಾತು ಆ ನಾಲಗೆಯಿಂದ ಹೊರಬೀಳಲಿಲ್ಲ.

ಮಠದ ದೂತ ಮತ್ತೊಮ್ಮೆ ಬರುವ ವೇಳೆಗೆ ಅಜ್ಜಿಯ ದೇಹಸ್ಥಿತಿ ಉಲ್ಬಣವಾಗಿತ್ತು.

೯

" ಸುಬ್ಬಕ್ಕಾ, ಏ ಸುಬ್ಬಕ್ಕಾ..."

ಆ ಸ್ವರ ಹೊರಗಿನಿಂದ ಮೆಲ್ಲನೆ ಕರೆಯಿತು. ಮನೆಯೊಳಗಿಂದ ಉತ್ತರ ಬರಲಿಲ್ಲ.

" ಸುಬ್ಬಕ್ಕಾ..."

ಕುಳಿತಲ್ಲಿಯೇ ತೂಕಡಿಸುತ್ತಿದ್ದ ಅಮ್ಮಿ ಹೌಹಾರಿ ಎಚ್ಚತ್ತಳು.

" ಯಾರು ? "

" ಅಜ್ಜಿಗೆ ಹ್ಯಾಗಿದೆ ಈಗ ? "

ಮೃದುವಾಗಿತ್ತು ಆ ಸ್ವರ. ಅದು ಯಾರದೋ ಅಮ್ಮಿಗೆ ತಿಳಿಯಲಿಲ್ಲ. ಆದರೆ ಆ ಧ್ವನಿಯಲ್ಲಿ ಅನುಕಂಪವಿತ್ತು.

ಅಮ್ಮಿ ಎದ್ದು ಬಾಗಿಲು ತೆರೆದಳು.

ಆಗಿನ್ನೂ ಬೆಳಕು ಹರಿದಿರಲಿಲ್ಲ. ನಕ್ಷತ್ರಗಳ ಪ್ರಕಾಶದಲ್ಲಿ ಬಾಗಿಲ ಬಳಿ ನಿಂತಿದ್ದ ವ್ಯಕ್ತಿಯನ್ನು ಅಮ್ಮಿ ಕಂಡಳು. ಪುರುಷಾಕೃತಿ. ಆದರೂ ಯಾಕೋ ಅಮ್ಮಿಗೆ ದಿಗಿಲಾಗಲಿಲ್ಲ. ತನಗೆ ಪರಿಚಯವಿದ್ದ ಸ್ವರ. ಬಾಳೆಮಣ್ಣೂರಿಗೆ ತಾನು ಬಂದು ನೆಲೆಸಿದ ಈ ಹತ್ತು ವರ್ಷಗಳಲ್ಲಿ ಆ ಧ್ವನಿಯನ್ನು ಹಲವು ಸಾರೆ ಆಕೆ ಕೇಳಿದ್ದಳಲ್ಲ ?

...ಮುಂಜಾವದ ತಣ್ಣನೆಯ ಗಾಳಿ ಹೊರಗಿನಿಂದ ಒಳಕ್ಕೆ ನವುರಾಗಿ ಬೀಸುತ್ತಿತ್ತು. ಎಣ್ಣೆ ಮುಗಿಯಿತೆಂದು ಗೋಳಿಡುತ್ತ ಅತ್ತಿಂದಿತ್ತ ತೂರಾಡುತ್ತಿತ್ತು ಮಿಣಿಮಿಣಿ ದೀಪ.

ಅಮ್ಮಿ ಚಲನೆ ಇಲ್ಲದೆ ಬೊಂಬೆಯ ಹಾಗೆ ನಿಂತಿದ್ದಳು. ಆ ವ್ಯಕ್ತಿಯೂ ಮುಂದಿನ ಮಾತಿಗಾಗಿ ತಡವರಿಸಿದಂತೆ ತೋರಿತು.

" ಹ್ಯಾಗಿದೆ ಸುಬ್ಬಕ್ಕನಿಗೆ ? "

" ಹುಂ... ? "

" ಅಜ್ಜಿಗೆ ಹ್ಯಾಗಿದೆಯಮ್ಮ ? "

ಸ್ವರ ಯಾರದೆಂದು ಗುರುತು ಹಿಡಿಯುವ ಯತ್ನದಲ್ಲೇ ಮನಸ್ಸು ನೆಟ್ಟಿದ್ದ ಅಮ್ಮಿ ಉತ್ತರ ಕೊಡಲಿಲ್ಲ;

" ಯಾಕೆ-ಇನ್ನೂ ನಿದ್ದೆ ಗುಂಗಿನಲ್ಲೇ ಇದ್ದೀಯೇನು ? "

ಗೇಲಿ ಮಾಡಿದ ಆ ಪ್ರಶ್ನೆಯ ಜತೆಯಲ್ಲಿ ಮಿತವಾದ ನಗು. ಉತ್ತರವಾಗಿ ತಾನೂ ನಕ್ಕಂತೆ ಭಾಸವಾಯಿತು ಅಮ್ಮಿಗೆ.

" ಅಜ್ಜಿಗೆ ಈಗ್ತಾನೇ ಮಂಪರು ಬಂತು."

" ಹೂಂ...ಬಂದು ಕರೆದೆ ಎಂತ ಹೆದರಿಕೆಯಾಯ್ತೇನು ? ನದೀ ಕಡೆಗೆ ಹೋಗ್ತಾ ಇದ್ದೆ...ವಿಚಾರಿಸ್ಕೊಂಡು ಹೋಗೋಣಾಂತ ಇಲ್ಲಿಗ್ಬಂದೆ."

ಅವರು ದೇವಸ್ಥಾನದ ಪಾರುಪತ್ಯಗಾರರಾಗಿದ್ದರು—ನಾರಾಯಣರಾಯರು. ಗುರುತು ಸಿಕ್ಕಿದ ಮೇಲೆ ಮುಂದೇನು ಹೇಳಬೇಕೋ ಅಮ್ಮಿಗೆ ತೋಚಲಿಲ್ಲ.

" ಬರ್ತೀನಮ್ಮ ಹಾಗಾದರೆ..."

ಹಾಗೆಂದ ನಾರಾಯಣರಾಯರು ಅಲ್ಲೇ ನಿಂತಿದ್ದರು ಇನ್ನೂ.

ರಾತ್ರಿಯೆಲ್ಲ ನಿದ್ದೆ ಹೋಗಿರಲಿಲ್ಲ ಅಮ್ಮಿ. ಕಣ್ಣಲ್ಲಿ ಎಣ್ಣೆ ಇಟ್ಟು ಅಜ್ಜಿಯ ಜೀವ ವನ್ನಾಕೆ ಅಷ್ಟು ಹೊತ್ತೂ ಕಾದಿದ್ದಳು. ಯುಗದಂತೆ ಕಂಡಿದ್ದ ಇರುಳು ಕಳೆಯುವ ಹೊತ್ತಿಗೆ, ಮಾನವ ಜೀವಿಯೊಂದು ಸ್ನೇಹದ ಸಹಾನುಭೂತಿಯ ಮಾತನ್ನಾಡಿತ್ತು. ಮತ್ತೆ, ಬಂದ ಹಾಗೆಯೇ ಹಿಂತಿರುಗಿ ಕತ್ತಲೆಯಲ್ಲಿ ಮರೆಯಾಗಲು ಹೊರಟಿತು ಆ ಸಹಾನುಭೂತಿ.

ಗಂಟಲೊಳಕ್ಕೇ ಸಿಲುಕಿಕೊಂಡಂತೆ ಅಮ್ಮಿಯ ಸ್ವರ ನುಡಿಯಿತು :

" ಬನ್ನಿ ಒಳಕ್ಕೆ."

ನಾರಾಯಣರಾಯರು ಒಳಕ್ಕೆ ಕಾಲಿಟ್ಟರು. ಮೂಲೆಯಲ್ಲಿ ಮಲಗಿದ್ದ ಅಜ್ಜಿಯ ಆಕೃತಿ ಮಸುಕಾಗಿ ದೀಪದ ಬೆಳಕಿನಲ್ಲಿ ಅವರಿಗೆ ತೋರಿತು. ನರಳಾಟ ನಿಲ್ಲಿಸಿ ಅಜ್ಜಿ ಮುಂಜಾವ ದಲ್ಲಿ ನಿದ್ದೆ ಹೋಗಲೆತ್ನಿಸಿದಾಗ, ಅಮ್ಮಿ ಆಕೆಯ ಕತ್ತಿನವರೆಗೂ ಕಂಬಳಿ ಹೊದಿಸಿದ್ದಳು.

ಒಳಬಂದ ನಾರಾಯಣರಾಯರಿಗೇಕೋ ಒಂದು ವಿಧವಾಗಿ ತೋರಿತು ಆ ವಾತಾ ವರಣ. ನಿದ್ದೆ ಹೋಗಿದ್ದ ಅಜ್ಜಿಯನ್ನು ಎಚ್ಚರಿಸಲು ಅವರು ಬಯಸಲಿಲ್ಲ. ಆದರೂ ಆ ಕ್ಷಣ, ಅಜ್ಜಿಯ ಮುಖ ನೋಡಬೇಕೆಂದು ಅವರಿಗೆ ತೋರಿತು.

ಚಿಮಿಣಿ ದೀಪವನ್ನವರು ಎತ್ತಿಕೊಂಡು ಅಜ್ಜಿಯ ಬಳಿ ಸಾರಿದರು. ಆ ಮಂದ ಬೆಳಕಿನಲ್ಲಿ ನಿದ್ದೆ ಹೋಗಿದ್ದ ಅಜ್ಜಿಯ ಮುಖ ಕಂಡಿತು. ಅದು ಬದುಕಿನ ಗಾಣದಲ್ಲಿ ಬಡಕ ಲಾಗಿದ್ದ ದೇಹ. ಮುಖವೆಷ್ಟು ಕ್ಷೀಣವಾಗಿತ್ತು! ಕಣ್ಣುಗಳೆಷ್ಟು ಆಳಕ್ಕೆ ಇಳಿದಿದ್ದುವು! ಅದು ಕೊನೆಯ ಕಾಹಿಲೆ ಎಂಬ ವಿಷಯದಲ್ಲಿ ಸಂದೇಹವೇ ಇರಲಿಲ್ಲ...

ನಾರಾಯಣರಾಯರು ನಿಟ್ಟುಸಿರು ಬಿಟ್ಟು, ದೀಪವನ್ನು ಇನ್ನೇನು ಕೆಳಗಿಡಬೇಕು. ಅಷ್ಟರಲ್ಲಿ, ಬಲವಾದೊಂದು ಸಂಶಯ ಅವರನ್ನು ಕಾಡಿತು. ಗಾಢ ನಿದ್ದೆಯಿಂದಾಗಿ ಅಜ್ಜಿಯ ದೇಹ ನಿಶ್ಚಲವಾಗಿತ್ತೆ ? ಅದು ನಿಜವಾಗಿಯೂ ಗಾಢ ನಿದ್ದೆಯೆ ?

ಅವರು ದೀಪವನ್ನು ಮತ್ತೊಮ್ಮೆ ಮುಖದ ಬಳಿಗೆ ಒಯ್ದರು. ಎಷ್ಟೊಂದು ವಿಕಾರ ವಾಗಿತ್ತು ಆ ಮುಖ! ನಾರಾಯಣರಾಯರು ಗಾಬರಿಯಾಗಿ ಆಕೆಯ ಹಣೆ ಮುಟ್ಟಿದರು, ಕೈ ಮುಟ್ಟಿದರು, ಮೈ ಮುಟ್ಟಿದರು. ಆ ದೇಹ ಮರದ ಕೊರಡಾಗಿತ್ತು. ತಣ್ಣಗಾಗಿತ್ತು ಮೈ.

" ಆ್ಹ ! " ಎಂದು ನಾರಾಯಣರಾಯರ ಬಾಯಿಯಿಂದ ಉದ್ಗಾರ ಹೊರಬಿತ್ತು.

ಭಯವಿಹ್ವಲಳಾದ ಅಮ್ಮಿ ಕೂಗಿದಳು :

" ಹ್ಯಾಗಿದೆ ನನ್ನಜ್ಜಿಗೆ ? ಹ್ಯಾಗಿದೆ ? "

ನಾರಾಯಣರಾಯರು ಎದ್ದು ನಿಂತರು.

" ಅಜ್ಜಿಯ ಕತೆ ಆಯಿತಮ್ಮ...ಪುಣ್ಯವಂತೆ ಸುಬ್ಬಕ್ಕ ನಿದ್ದೆಯಲ್ಲೇ ಹೊರಟ್ಹೋಗಿ ದ್ದಾಳೆ ! "

ಕರುಳುಕಿತ್ತು ಬರುವ ಹಾಗೆ ಬನಶಂಕರಿ " ಆ್ಹ ! " ಎಂದು ಕಿರಿಚಿದಳು. ಅಜ್ಜಿಯ ಬಳಿ ಧಾವಿಸಿ, ಆ ಮೈ ಹಿಡಿದಲುಗಿಸಿ, " ಅಯ್ಯಯ್ಯೋ ! " ಎಂದಳು. ಆ ಅಜ್ಜಿ ಏಳಲಿಲ್ಲ, ಉಸಿರಾಡಲಿಲ್ಲ. ಮೋಸವಾಯಿತು, ಘಾತವಾಯಿತು, ಎಂದುಕೊಂಡಳು ಅಮ್ಮಿ. ತಾನೆಲ್ಲೋ ಕ್ಷಣಕಾಲ ನಿದ್ದೆ ಹೋದಾಗ, ತನಗೆ ತಿಳಿಯದಂತೆಯೇ ಹೊರಟುಹೋದಳಲ್ಲಾ ! ರಾತ್ರೆ ಇಡೀ

ಕಾಯುತ್ತ ಕುಳಿತಿದ್ದರೂ ಹೀಗಾಯಿತಲ್ಲಾ !

"ಅಜ್ಜೀ, ಅಜ್ಜೀ! ಅಯ್ಯಯ್ಯೋ! ಅಯ್ಯೋ! ಅಜ್ಜೀ-ಓ ಅಜ್ಜೀ!" ಒಡೆದ ಗಂಟಲಿನಿಂದ ಅಳು ಹತ್ತು ದಿಕ್ಕುಗಳತ್ತ ಹರಿಯಿತು. ಅಮ್ಮಿ ಎಳೆಯ ಮಗುವಿನ ಹಾಗೆ ಗೋಳಾಡಿದಳು.

"ಏನಾದರೂ ಮಾಡೀಪ್ಪಾ! ಉಳಿಸೀಪ್ಪ ನನ್ನಜ್ಜೀನ!...ಅಯ್ಯಯ್ಯೋ!..."

ಉಳಿಸುವ ಕೆಲಸಕ್ಕೆ ಸಂಬಂಧಿಸಿ ಅವರು ಮಾಡುವುದೇನೂ ಇರಲಿಲ್ಲ. ಬನಶಂಕರಿ, ಅಜ್ಜಿಯ ಶವದ ಮೇಲೆ ಮುಖವಿಟ್ಟು ಹಣೆಹಣೆ ಚಚ್ಚಿಕೊಳ್ಳುತ್ತಾ, ಕೂದಲು ಕಿತ್ತು ಕೊಳ್ಳುತ್ತಾ ರೋದಿಸಿದಳು.

ನಾರಾಯಣರಾಯರು ಸಮಾಧಾನಪಡಿಸಲೆಂದು ಎರಡು ಮಾತು ಅಂದರು :

"ಅಳಬಾರದಮ್ಮ.... ಅಳಬಾರ್ದು .... ಅದೆಲ್ಲಾ ನಮ್ಕೈಲಿದೆಯೆ ?"

ಅದು ಅಮ್ಮಿಯ ಪಾಲಿಗೆ ಹೊಸ ಮಾತೇನೂ ಆಗಿರಲಿಲ್ಲವಲ್ಲ! ಹಿಂದೆಯೂ ಬಾರಿ ಬಾರಿಗೆ ಅಂದಿದ್ದರು ಯಾರು ಯಾರೋ: "ನಮ್ಕೈಲಿದೆಯೆ ?" "ನಮ್ಕೈಲಿದೆಯೆ ?" ಅಮ್ಮಿಗೆ ಬೇಕಾಗಿದ್ದುದು ವೇದಾಂತವಲ್ಲ. ಹಾಲು ಹಸುಳೆಯಾಗಿದ್ದ ದಿನದಿಂದ ತನ್ನನ್ನು ಸಾಕಿ ಸಲಹಿದ್ದ ಅಜ್ಜಿಯ ಅವಶ್ಯತೆ ಇತ್ತು ಆಕೆಗೆ.

"ಯಾರಾದರೂ ಉಳಿಸೀಪ್ಪಾ ನಮ್ಮಜ್ಜೀನಾ! ಉಳಿಸೀಪ್ಪಾ!"

ಆಕೆಯ ಕೈಹಿಡಿದು ದೂರವೆಳೆದು ಶವದಿಂದ ಅವಳನ್ನು ಬೇರ್ಪಡಿಸಬೇಕೆಂದು ತೋರಿತು ನಾರಾಯಣರಾಯರಿಗೆ. ಆದರೆ ಅವರು ಹಿಂಜರಿದರು. ಏನೋ ನೆನಪಾದವ ರಂತೆ ಗಡಬಡಿಸಿ ಎದ್ದರು. ಆ ಮನೆಯಿಂದ ಹೊರಬಿದ್ದು ರಾಮಶಾಸ್ತ್ರಿಯ ಮನೆಯ ಎದುರು ನಿಂತು ಶಾಸ್ತ್ರಿಯ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದರು.

ಆದರೆ ಸುಂದರಮ್ಮನಿಗೆ ಆಗಲೆ ಎಚ್ಚರವಾಗಿತ್ತು. ಆಕೆ ದೀಪ ಹಚ್ಚಿದಳು.

ಅಮ್ಮಿಯ ರೋದನ, ಮುಂಬೆಳಗಿನ ಮೌನವನ್ನು ಭೇದಿಸಿಕೊಂಡು ದುಃಖದ ಸಂದೇಶ ದೊಡನೆ ದೂರ ದೂರಕ್ಕೆ ಸಾಗಿತು.

ಕದ ತೆರೆಯುತ್ತಾ ರಾಮಶಾಸ್ತ್ರಿಯೆಂದ :

"ನೀವು!"

—ಹಾಗೆ ಹೇಳಿದ್ದರೂ ಆತನ ಯೋಚನೆ ಅಮ್ಮಿಯ ಮನೆಯತ್ತ ಆಗಲೆ ಧಾವಿಸಿತ್ತು.

ನಾರಾಯಣರಾಯರೇನೊ ಅಂದರು :

"ಸ್ನಾನಕ್ಕೇಂತ ನದೀ ಕಡೆಗೆ ಇದೇ ಈಗ ಹೊರಟಿದ್ದೆ. ಅಳೋದು ಕೇಳಿಸ್ತು."

ಆದರೆ ಅವರ ಉತ್ತರವನ್ನು ಕೇಳುವ ತಾಳ್ಮೆ ಆ ದಂಪತಿಗೆ ಇರಲಿಲ್ಲ. ಅವರಿಬ್ಬರೂ ಅಮ್ಮಿಯ ಮನೆಯೊಳಕ್ಕೆ ಬಂದರು. ರಾಯರೂ ಅವರನ್ನು ಹಿಂಬಾಲಿಸಿದರು.

ಇಷ್ಟು ವರ್ಷ ಸ್ವಲ್ಪ ಸ್ವಲ್ಪವಾಗಿಯೇ ನಿರ್ಗತಿಕಳಾಗುತ್ತ ಬಂದಿದ್ದ ಅಮ್ಮಿ ಈಗ ಸಂಪೂರ್ಣವಾಗಿ ಅನಾಥಳಾಗಿದ್ದಳು. ರಾಮಶಾಸ್ತ್ರಿಯಾಗಲೀ ಸುಂದರಮ್ಮನಾಗಲೀ ಅಂತಹ ಸಂದರ್ಭವನ್ನು ನಿರೀಕ್ಷಿಸಿರಲಿಲ್ಲವೆಂದಲ್ಲ. ಆದರೆ ಅವರೆಗೆ ಇದ್ದುದು ನಿರೀಕ್ಷೆ ಮಾತ್ರ. "ನಾಳೆಯ ಗತಿ ?" ಎಂದಷ್ಟೆ ಅಷ್ಟರವರೆಗೆ ಯೋಚನೆಯಾಗಿದ್ದುದು ಈಗ ವಾಸ್ತವ ಪ್ರಶ್ನೆಯಾಗಿತ್ತು.

ಸೋದರಿಯ ದುರ್ಗತಿಗಾಗಿ ಸುಂದರಮ್ಮನೂ ಎರಡು ನಿಮಿಷ ಕಂಬನಿ ಮಿಡಿದಳು. ಹಾಗೆ ಕಣ್ಣೊರೆಸಿಕೊಂಡಾಗಲೂ ಆಕೆ ಅಮ್ಮಿಯ ಮೈದಡವುತ್ತ ಅಂದಳು :

“ ಸಾಕಮ್ಮ ಇನ್ನು, ಸಾಕು ಬನೂ .... ಅತ್ತರೆ ವಾಪಸು ಬರ್ರಾರೇನು ? ”

ಸುಂದರಮ್ಮನಿಗೆ ತೆಕ್ಕೆಬಿದ್ದು ಮತ್ತೂ ಗಟ್ಟಿಯಾಗಿ ಅಮ್ಮಿ ಅತ್ತಳು :

“ ಅಯ್ಯೋ ಅಕ್ಕಾ ! ನನ್ನ ಬಾಳು ಹೀಗಾಯ್ತಲ್ಲೇ ! ... ಅಯ್ಯೋ ! ”

ಬೆಳಗಾಯಿತು. ಹತ್ತಿರದ ಬೇರೆ ಮನೆಗಳಿಂದಲೂ ಜನ ಬಂದು ಬಾಳು ಬರಿದಾದ ಆ ದೃಶ್ಯವನ್ನು ನೋಡಿದರು.

“ ನೀವಿದೀರಲ್ಲಪ್ಪ. ನಾನು ಹೊರಡ್ತೀನಿ .... ” ಎಂದರು ನಾರಾಯಣರಾಯರು ರಾಮಶಾಸ್ತ್ರಿಯನ್ನುದ್ದೇಶಿಸಿ.

“ ಹೂಂ ಹೊರಡಿ .... ದೇವಸ್ಥಾನಕ್ಕೆ ಹೋಗೋಕೆ ಹೊತ್ತಾಗುತ್ತಲ್ಲ ? ”

“ ಸ್ನಾನ ಬೇರೆ ಆಗಿಲ್ಲ.”

“ ಹೌದೌದು, ಹೊರಡಿ .... ನಾವಿದ್ದೀವಿ.”

.... ಆ ದಿನ ಅಜ್ಜಿಯ ಪಾರ್ಥಿವ ಶರೀರವನ್ನು ಕಾಡು ಸೌದೆ ಸುಟ್ಟು ಬೂದಿ ಮಾಡಿತು. ಸುಖದುಃಖಗಳ ಕುಲುಮೆಯಲ್ಲಿ ಕುದಿದು ಕರಗಿ ಹೋಗಿದ್ದ ಜೀವ .... ಅಂತೂ ಕೊನೆಗೊಮ್ಮೆ ಅದಕ್ಕೆ ಸಾವೂ ಅಲ್ಲ ಬದುಕೂ ಅಲ್ಲ ಎನ್ನುವಂತಹ ಸನ್ನಿವೇಶದಿಂದ ಮುಕ್ತಿ ದೊರಕಿತ್ತು.

ಅಳು ನಿಲ್ಲಿಸಿದ ಬನಶಂಕರಿ ಬಹಳ ಕಾಲ ಯೋಚಿಸಿದಳು : ಮುಂದೇನಾಗುವುದು ? ಏನಾಗುವುದು ಮುಂದೆ ?

ಪ್ರಶ್ನೆ ಬಗೆಹರಿಯಲಿಲ್ಲ.

ಅದು ಶೂನ್ಯದಲ್ಲಿ ಮನಸ್ಸಿನ ತೂಗಾಟ ...

ಹೀಗೆ ತೂಗುತ್ತ ತೂಗುತ್ತ ಯೋಚಿಸುವ ಕೆಲಸವನ್ನೆ ಬಿಟ್ಟುಕೊಟ್ಟಿತು ಆಕೆಯ ಮಿದುಳು.

“ ಬನೂ, ನಡಿಯಮ್ಮ ನಮ್ಮನೆಗೆ .... ”

ಉತ್ತರವಿಲ್ಲದೆ ಅಮ್ಮಿ ನಡೆದಳು.

“ ಬನೂ. ನೀರು ಕಾದಿದೆ. ಸ್ನಾನ ಮಾಡಮ್ಮ ....”

ಆ ಮಾತಿನ ಅರ್ಥ ಅಮ್ಮಿಗಾಗಲಿಲ್ಲ.

“ ಹೂಂ ? ”

“ ಸ್ನಾನ ಮಾಡೇ.”

ಶವಕ್ಕೆ ಆಗಲೇ ಸ್ನಾನ ಮಾಡಿಸಿದ್ದರಲ್ಲ ? ಮತ್ತೊಮ್ಮೆ ಯಾಕೀಗ ?

ಬೇರೆ ಹಾದಿ ಇಲ್ಲವೆಂದು ಸುಂದರಮ್ಮ ಮೆಲ್ಲನೆ ಬನಶಂಕರಿಯ ತೋಳು ಹಿಡಿದು ಎಬ್ಬಿಸಿ ಬಚ್ಚಲು ಮನೆಗೆ ಕರೆದೊಯ್ದಳು.

ಆ ರೀತಿ ಸ್ನಾನ. ಊಟ ಅದಕ್ಕಿಂತ ಭಿನ್ನವಾಗಿರಲಿಲ್ಲ.

“ ಏಳಮ್ಮ ಊಟಕ್ಕೇಳು ...”

“ ಹುಂ ? ”

“ ಬಡಿಸಿದೀನಿ ಏಳು ! ”

“ ಹಸಿವಿಲ್ಲಕ್ಕ ನಂಗೆ.”

“ ಹಾಗಾದರೆ ನಾನೂ ಸುಮ್ನಿರ್‍ತೀನಿ .... ಇಬ್ಬರೂ ಉಪ್ವಾಸ ಇದ್ಬಿಡೋಣ ....”

“ ನೀನು ಊಟಮಾಡು ಹೋಗಕ್ಕ ....”

“ ಏಳು ಹಾಗಾದರೆ ನೀನೂ.”

ಅದಾದ ಮೇಲೆ ನಿದ್ದೆ.

“ ಮಲಕೋತೀಯೇನೆ ? ”

ಮೌನ.

“ ನಿದ್ದೆ ಬಂತೇನೆ ಬನೂ ? ”

“ ಹುಂ ? ಏನಕ್ಕ ? ”

ಅನಾಯಾಸವಾಗಿ ದೊರೆತಿದ್ದ ಅಕ್ಕನ ಮನೆಯಲ್ಲಿ ಆ ಬಳಿಕ ನಿದ್ದೆ....ದಿನಗಳು ಕಳೆದುವು. ನಾಲಗೆಗಳು ಮತ್ತೆ ಮಾತನಾಡಿದುವು. ಅಲ್ಲಿಂದ ಇಲ್ಲಿಂದ ಬರುತ್ತಿದ್ದ ಸಹಾನುಭೂತಿಯ ಸ್ವರವನ್ನು ಅಣಕಿಸಿ, ಭರ್ತ್ಸನೆಯ ಕುಟಿಲ ನುಡಿಗಳು ಕುಣಿದಾಡಿದುವು.

‘ ಅಂತೂ ಬನಶಂಕರಿಗೊಂದು ಆಶ್ರಯ ಸಿಕ್ತು ! ’

‘ ಛೆ ! ಪಾಪ ! ಹಾಗೆಲ್ಲ ರಾಮಶಾಸ್ತ್ರಿ ಬಿಟ್ಬಾಕ್ತಾನೇನ್ರಿ ? ’

‘ ಹೆಂಡತಿ ಬಸುರಿ. ಯಾರಾದರೊಬ್ಬರು ಬೇಕೇ ಬೇಕಲ್ಲ ಕೆಲಸಕ್ಕೆ—ಮನೆಗೆಲಸಕ್ಕೆ ! ’

ಕೆಲವರು ಯೋಚಿಸಿದರು : ಹೇಗಾದರೂ ಮಾಡಿ ಬನಶಂಕರಿಯನ್ನು ರಾಮಶಾಸ್ತ್ರಿಯ ಮನೆಯಿಂದ ಹೊರಹಾಕಿಸಬೇಕು ; ಆ ಬಳಿಕ ಎಲ್ಲವೂ ಸುಲಭ !

ಆದರೆ, ಒಳಗಿಂದ ಜ್ವಾಲಾಮುಖಿ ಕುದಿಯುತ್ತಿದ್ದರೂ ಹೊರಗಿಂದ ರಾಮಶಾಸ್ತ್ರಿ ಶಾಂತನಾಗಿದ್ದ. ಯಾವ ನಿಂದೆಯೂ ಅವನ ತಾಳ್ಮೆಯನ್ನು ಕದಡಿದಂತೆ ತೋರಲಿಲ್ಲ.

ಸುಂದರಮ್ಮನೊಮ್ಮೆ ದೇವಸ್ಥಾನಕ್ಕೆ ಹೋಗಿದ್ದಾಗ ಯಾರೋ ಹೆಂಗಸು ಕೇಳಿದಳು :

“ ಎಲ್ಲಿ ಸುಂದರಮ್ನೋರೆ—ದೇವರ ದರ್ಶನಕ್ಕೆ ನೀವು ಬರೋದು ಕಡಿಮೆ ಆಗ್ಬಿಡ್ತೇ...”

“ ಯಾಕ್ರೀ ಹಾಗಂತೀರ ? ನಿಮ್ಮ ಮುಖ ಆಗಾಗ್ಗೆ ನೋಡ್ತಿರ್‍ತೀನಲ್ಲ ? ”

ಸದ್ಯಃ, ಸುಂದರಮ್ಮ ‘ ಮುಖ ’ ಎಂದಳು ; ‘ ಮೂತಿ ’ ಎನ್ನಲಿಲ್ಲ.

“ ಅಲ್ಲಾ. ಹಿಂದೆ ನಿಮ್ಮವ್ರೂ ನೀವೂ ಜತೇಲೆ ಹೋಗ್ತಾ ಬರ್‍ತಾ ಇದ್ರಿ. ಈಗ ಒಬ್ಬರೇ ಇದೀರಲ್ಲಾ, ಅದಕ್ಕೆ ಹೇಳ್ದೆ. ಕೋಪಿಸ್ಕೋಬೇಡಿ ನನ್ತಾಯಿ... ”

“ ಜತೇಲೆ ಬರ್‍ತಾ ಇದ್ದಾಗ ನೋಡೋಕೆ ಸೊಗಸಾಗಿರ್‍ತಿತ್ತು, ಅಲ್ಲ ? ”

“ ನಿಮ್ದೇನಪ್ಪ ಮಾತೆತ್ತಿದರೆ ಕೊಂಕು.”

“ ಸಾಕ್ರೀ ! ಎಳೇ ಮಗು...ಪಾಪ...ನನ್ಮಾತು ಕೇಳಿ ನೋವಾಯ್ತೇನೋ ! ”

...ಒಂದು ದಿನ ಸುಂದರಮ್ಮ ವೈದ್ಯರಲ್ಲಿಗೆ ಹೋಗಿದ್ದಳು. ಅಲ್ಲಿಂದ ಹಿಂತಿರುಗಿದಾಗ ಹಾದಿಯಲ್ಲಿ ಕಾಣಲು ದೊರೆತ ಹೆಂಗಸೊಬ್ಬಳು ಅಂದಳು :

“ ಔಷಧಿ ತರೋಕೆ ಹೋಗಿದ್ರೀಂತ ಕಾಣುತ್ತೆ.”

“ ಹೂನಮ್ಮ .”

“ ಔಷಧಿ—ನಿಮಗೋ ಬನಶಂಕರಿಗೋ ? ”

ಸುಂದರಮ್ಮ ಕಣ್ಣು ಕೆರಳಿಸಿ ಸಿಡಿನುಡಿದಳು :

" ಏನಂದೆ ? "

ಅಂದುದನ್ನು ವಿವರಿಸಲು ಆ ಹೆಂಗಸು ಅಲ್ಲಿದ್ದರಲ್ಲವೆ !

ಮತ್ತೊಂದು ದಿನ ಬೆನ್ನ ಹಿಂದಿನಿಂದ ಯಾರೋ ಅಂದುದು ಕೇಳಿಸಿತು :

" ಬಜಾರಿ ! ಈಕೇನೆ ಗೊತ್ತು ಮಾಡಿದಾಳೋ ಏನೊ. ಇನ್ನೊಂದು ಇಲ್ಲಿ ಗಂಡ ನಿಗೇಂತ."

ಸರಕ್ಕನೆ ತಿರುಗಿ ನೋಡಿದಳು ಸುಂದರಮ್ಮ. ಹಾಗೆ ಮಾತನಾಡಿದವರನ್ನು ಹರಿದು ತಿನ್ನುವ ಇಚ್ಛೆಯಾಯಿತು ಅವಳಿಗೆ. ಆದರೆ ಆಕೆಯ ಉಗುರುಗಳ ಪರಿಚಯ ಮಾಡಿಕೊಳ್ಳಲು ಇಷ್ಟವಿಲ್ಲದೆ, ಈ ಇಬ್ಬರು ಹೆಂಗಸರೂ ಸರಸರನೆ ಹೊರಟುಹೋಗಿದ್ದರು.

ಮನೆ ಸೇರಿದ ಸುಂದರಮ್ಮ ರೋಷ ತಡೆಯಲಾಗದೆ ಕೂಗಾಡಿದಳು :

" ಎಂಥೆಂಥಾ ಮನುಷ್ಯರಿದ್ದಾರೆ ಈ ಲೋಕದಲ್ಲಿ ! "

ಅಮ್ಮಿಗೆ ಅರ್ಥವಾಗುತ್ತಿತ್ತು. ಹೃದಯ ಹೆಪ್ಪುಗಟ್ಟಿ ಮೆದುಳು ಮುದುಡಿಕೊಂಡಿದ್ದರೂ ಆಕೆಗೆ ಅರ್ಥವಾಗುತ್ತಿತ್ತು.

ಬಹಳ ದಿನ ಅಮ್ಮಿ ಮನಸ್ಸಿನಲ್ಲೆ ಮೆಲುಕು ಹಾಕಿದಳು : ಸುಂದರಮ್ಮನ ಮನೆಯಲ್ಲೇ ಇನ್ನೆಷ್ಟು ದಿನ ಇರುವುದು ಸಾಧ್ಯ ? ಆಕೆಯ ಬಾಣಂತಿತನ ಮುಗಿಯುವವರೆಗೂ ಅಲ್ಲಿರ ಬೇಕಾದುದು ನ್ಯಾಯ. ಅದಾದ ಮೇಲೆ ?

—ಆ ಪ್ರಶ್ನೆ ಬಾರಿ ಬಾರಿಗೂ ಮುಖ ತೋರಿಸುತ್ತಿತ್ತು. ಎಂದೂ ಉತ್ತರ ದೊರೆ ಯುತ್ತಿರಲಿಲ್ಲ.

...ಮಧ್ಯಾಹ್ನ ಬಟ್ಟೆಬರೆಯೊಡನೆ ಬನಶಂಕರಿ ನದಿಯ ದಡಕ್ಕೆ ಹೋಗುತ್ತಿದ್ದಳು. ಯಾರೂ ಇಲ್ಲದೊಂದು ಮೂಲೆಯಲ್ಲಿ ಬಟ್ಟೆಯೊಗೆದು ಹಿಂಡಿ ರಾಮಶಾಸ್ತ್ರಿಯ ಮನೆಗೆ ಹಿಂತಿರುಗುತ್ತಿದ್ದಳು.

ಜನರ ದೃಷ್ಟಿ ತನ್ನ ಮೇಲಿದ್ದರೂ, ನೆಲ ನೋಡಿಕೊಂಡೇ ಬರುವುದು ಆಕೆಗೆ ರೂಢಿ ಯಾಯಿತು...

ಬನಶಂಕರಿ ಬಟ್ಟೆ ಒಗೆಯುತ್ತಿದ್ದಾಗಲೊಮ್ಮೆ ಒಂದು ಮಧ್ಯಾಹ್ನ ಹಿಂದಿನಿಂದ ಮಾತು ಕೇಳಿಸಿತು :

" ಚೆನ್ನಾಗಿದಿಯೇನಮ್ಮ ? "

ಪರಿಚಿತವಾಗಿತ್ತು ಸ್ವರ. ಅಮ್ಮಿ ಕುಳಿತಲ್ಲಿಂದಲೆ ಮುಖ ತಿರುಗಿಸಿ ನೋಡಿದಳು. ನಾರಾ ಯಣರಾಯರು ! ಆಕೆಯ ಗಂಟಲಿನಿಂದ ಸ್ವರ ಹೊರಡಲಿಲ್ಲ. ಯಾಕಾದರೂ ಮಾತನಾಡಿಸಿ ದರೊ—ಎನ್ನಿಸಿತು. ಅವರಿಗೆ ಉತ್ತರ ಕೊಡಬೇಕೆ ಬೇಡವೆ ? ದಿಗಿಲಾಯಿತು. ಕುಳಿತಲ್ಲೆ ಭೂಮಿಯಲ್ಲಿಳಿದು ಕಣ್ಮರೆಯಾಗುವುದು ಸಾಧ್ಯವಿದ್ದರೆ ?

" ಯಾಕೆ ಬನಶಂಕರಿ ? ನನ್ಜತೇಲಿ ಮಾತಾಡ್ಬಾರ್ದೇನು ? ನಾನೂ ಕೆಟ್ಟವನು—ಎಲ್ಲರ ಹಾಗೆ—ಅಂತ ತಿಳಿದಿದೀಯೇನು ? "

ನಂಬುಗೆ ಹುಟ್ಟಿಸುವ ಮಾತು ! ತಾನು ಏನಾದರೂ ಉತ್ತರ ಕೊಡಬೇಕೆಂದು ತೋರಿತು ಅಮ್ಮಿಗೆ. ಆದರೆ ಮೆದುಳು ಯಾವ ಉತ್ತರವನ್ನೂ ಸಿದ್ಧಗೊಳಿಸಲಿಲ್ಲ. ಮೈ ಮಾತ್ರ ಬೆವರಿಗೆ ಜನ್ಮವಿತ್ತಿತು.

" ಹೋಗಲಿ ಬಿಡು ! ನನ್ನ ಗುರುತಾದರೂ ಇದೆ ತಾನೆ ? "

ಅನುಭವಿಯಾದ ನಾರಾಯಣರಾಯರ ನಯ ನುಡಿ !

" ಅಯ್ಯೋ, ಹಾಗಂದರೇನು ? "

ತನ್ನ ಸ್ವರವನ್ನೇ ಕೇಳುತ್ತ ಅಮ್ಮಿಗೆ ಆಶ್ಚರ್ಯವಾಯಿತು. ತಾನು ಮಾತನಾಡಿದಂತಾಯಿತು ಹಾಗಾದರೆ !

ಸೋಲನ್ನು ಯಾವ ಕಾಲದಲ್ಲೂ ಒಪ್ಪದ ನಾರಾಯಣರಾಯರು ಮುಗುಳ್ನಕ್ಕರು :

" ಮತ್ತೆ ಯಾಕಿಷ್ಟು ಭಯ ? ಒಳ್ಳೇ ಗುಮ್ಮನ್ನು ಕಂಡಹಾಗೆ ಮಾಡ್ತೀಯಲ್ಲ. ಹೊರಡ್ತೀನಮ್ಮ ನಾನು. "

ಅಮ್ಮಿಯ ಮುಖ ಬಾಡಿತು. ಅಜ್ಜಿ ತೀರಿದ ದಿನ ಮುಂಜಾವದಲ್ಲಿ ಅವರು ಬಂದಿದ್ದರು. ಭೂಮಿಯಲ್ಲಿ ತನ್ನವಳಾಗಿ ಉಳಿದಿದ್ದ ಆ ಒಬ್ಬಳೇ ಒಬ್ಬಳು ಅಜ್ಜಿ ತನ್ನಿಂದ ಮರಳಿ ಬರದ ರೀತಿಯಲ್ಲಿ ಹೊರಟುಹೋದುದನ್ನು ಅವರು ಕಂಡಿದ್ದರು. ದುಃಖದ ಮಹಾ ತೆರೆಗಳು ಬಲು ಭೀಕರವಾಗಿ ತನ್ನನ್ನು ಮುತ್ತಿದಾಗ ಸಾಂತ್ವನದ ಎರಡು ಮಾತುಗಳನ್ನು ಅವರು ಆಡಿದ್ದರು.

ಕಹಿಯಾಗಿರಲಿಲ್ಲ ಆ ನೆನಪು ; ಬದಲು, ಹಿತಕರವಾಗಿತ್ತು.

ಈಗ ಮತ್ತೆ ಅವರೊಡನೆ ಒಂದೆರಡು ಮಾತು ಆಡುವ ಸುಯೋಗ. ಅದಕ್ಕೂ ಭಾಗ್ಯ ಬೇಕು. ತಾನು ಸರಿಯಾಗಿ ಉತ್ತರ ಕೊಡಲಿಲ್ಲವೆಂದು ಅವರು ಹೊರಟೇ ಬಿಟ್ಟರಲ್ಲ ?

ಅಮ್ಮಿ ತಿರುಗಿ ನೋಡಿದಳು. ಅಲ್ಲೇ ಇದ್ದುವು ಆ ಪಾದಗಳು. ಲಜ್ಜೆಯಿಂದ ಅಮ್ಮಿಯ ಮುಖ ಕೆಂಪಾಗಾಯಿತು. ಕಣ್ಣುಗಳಿಗೆ ಕತ್ತಲು ಕವಿದ ಹಾಗಾಯಿತು.

ನಾರಾಯಣರಾಯರು ನಗುತ್ತ ಅಂದರು :

" ಪಿಶಾಚಿ ತೊಲಗ್ತು ಅಂತ ಇದ್ದೆಯೇನು ? ಇಲ್ಲವಮ್ಮಾ. ಇನ್ನೂ ಇಲ್ಲೇ ನಿಂತಿದೀನಿ."

ಮತ್ತೊಮ್ಮೆ ಮೆಲ್ಲನೆ ಹೊರಬಿದ್ದ ಅಮ್ಮಿಯ ಸ್ವರ :

" ಸುಮ್ಮನೆ ಯಾಕೆ ಗೋಳುಹುಯ್ತೀರಿ ಇನ್ನೊಬ್ಬರನ್ನು ? "

ಅದಕ್ಕೆ ಉತ್ತರ ನಗು. ಜತೆಯಲ್ಲಿ—

" ಅಂತೂ ನಾನೂ ಕೆಟ್ಟವನೂಂತ ಅಂದ ಹಾಗಾಯ್ತು ನೀನು !"

ಅಮ್ಮಿ ಮಾತನಾಡಲು ತಿಳಿಯದೆ ಸುಮ್ಮನಾದಳು. ಅದನ್ನು ಕಂಡು ನಾರಾಯಣರಾಯರು ಮಾತಿನ ಸರಣಿ ಬದಲಾಯಿಸಿದರು.

" ಬನಶಂಕರೀ..."

ಮತ್ತೊಮ್ಮೆ ತನ್ನ ಹೆಸರು ಹಿಡಿದು ಅವರು ಕರೆದಿದ್ದರು !

" ಹೂಂ ?"

" ರಾಮಶಾಸ್ತ್ರಿಯರ ಮನೇಲೆ ಇದೀಯೇನು ? "

" ಹೂಂ."

" ಎಲ್ಲ ಅನುಕೂಲವಾಗಿದೆ ತಾನೆ ?"

" ಇದೆ."

" ಪಾಪ ! ಅಜ್ಜಿ ಇರ್‍ತಿದ್ರೆ ನಿನಗೆ ಈ ಗೋಳಾಗ್ತಿರ್‍ಲಿಲ್ಲ."

ಆ ಮಾತಿಗೆ ಅರ್ಥವಿಲ್ಲವೆಂಬುದು ನಾರಾಯಣರಾಯರಿಗೆ ಗೊತ್ತಿದ್ದರೂ ಅವರು

ಅದನ್ನು ಆಡಿದ್ದರು. ಅಜ್ಜಿ ಚಿರಕಾಲವೇನಾದರೂ ಬದುಕುವುದು ಸಾಧ್ಯವಿತ್ತೆ? ಆದರೆ ಅಮ್ಮಿ ಹಾಗೆ ಯೋಚಿಸಿರಲಿಲ್ಲ. ಆಕೆಯ ಪಾಲಿಗದು ಇನ್ನೊಂದು ಮಾನವ ಜೀವಿ ತೋರಿದ ಅಪೂರ್ವ ಸಹಾನುಭೂತಿಯಾಗಿತ್ತು. ಆಕೆಯ ಕಣ್ಣುಗಳು ಒದ್ದೆಯಾದುವು.

"ಹೊರಡ್ತೀನಿ ಇನ್ನು......ನಿನಗೇನಾದರೂ ತೊಂದರೆಯಾದರೆ ಬಂದು ಹೇಳಮ್ಮ. ನನ್ನಿಂದ ಏನು ಸಾಧ್ಯವೋ ಅದನ್ನ ಖಂಡಿತ ಮಾಡ್ತೀನಿ."

ಹಾಗೆ ಹೇಳಿ ನಾರಾಯಣರಾಯರು ಹೊರಟುಹೋದರು. ಕೃತಜ್ಞತೆಯಿಂದ ಅಮ್ಮಿಯ ಹೃದಯ ತುಂಬಿಹೋಯಿತು. ಎಷ್ಟೊಂದು ಒಳ್ಳೆಯವರು! ಎಲ್ಲರೂ ಮೂದಲಿಸುವ ತನ್ನನ್ನು ವಾತ್ಸಲ್ಯದಿಂದ ಅವರು ಕಂಡರಲ್ಲ?

ಆದರೆ ನಾರಾಯಣರಾಯರ ವಾತ್ಸಲ್ಯದಲ್ಲಿ ಅಮ್ಮಿಗೆ ಅರ್ಥವಾಗದೇ ಇದ್ದ ಸ್ವಾರ್ಥವಿತ್ತು. ಅವರು ವಿಷಯಲಂಪಟನಾಗಿರಲಿಲ್ಲ. ಆದರೆ ರಸಿಕನಾಗಿದ್ದರು. ನಾಲ್ವತ್ತು ವರ್ಷ ವಯಸ್ಸಿನ ಆ ಪಾರುಪತ್ಯಗಾರರಿಗೆ ನಾಲ್ವರು ಮಕ್ಕಳಿದ್ದರು. ಅವರನ್ನು ಹೊತ್ತು ಹೆತ್ತುದಲ್ಲದೆ ಎರಡು ಸಾರೆ ಬಸಿರು ಕೂಡ ಕಳೆದಿದ್ದ ಅವರ ಹೆಂಡತಿ ತಕ್ಕಮಟ್ಟಿಗೆ ಸುಂದರಿಯೇ. ಮನೆಯಲ್ಲಿ ಇಷ್ಟು ದೊಡ್ಡ ಸಂಸಾರವಿದ್ದರೂ ನಾರಾಯಣರಾಯರ ಗಮನ ನಾಯಿಯಂತೆ ಅತ್ತಿತ್ತ ಸುತ್ತಾಡದೆ ಇರುತ್ತಿರಲಿಲ್ಲ. ಅದು ಅವರ ದೇಹಕ್ಕೆ ಅಂಟಿಕೊಂಡಿದ್ದ ದೌರ್ಬಲ್ಯ. ಆದರೂ ಅವರು ಸಂಯಮದ ಜೀವನ ನಡೆಸುತ್ತಿದ್ದರು. ತಾವೂ ಮಾನವಂತರಾಗಿ ಸರ್ವಮಾನ್ಯರಾಗಿ ಇರಬೇಕೆಂಬುದು ಅವರ ಬಯಕೆಯಾಗಿತ್ತು.

ಆದರೆ ಆ ಬಯಕೆ ಬನಶಂಕರಿಯನ್ನು ಕುರಿತಾಗಿ ಬೆಳೆದು ಬರುತ್ತಲಿದ್ದ ಹಂಬಲಕ್ಕೆ ಅಡ್ಡಿಯಾಗಿರಲಿಲ್ಲ. ತಾವು ಮಾಡುತ್ತಿರುವುದು ತಪ್ಪು ಎನ್ನುವುದರ ಬಗ್ಗೆ ಅವರಿಗೆ ಯಾವ ಸಂಶಯವೂ ಇರಲಿಲ್ಲ. ಆದರೂ ತಿಳಿದೂ ತಿಳಿದೂ ಅವರು ತಪ್ಪು ಮಾಡಲು ಮುಂದಾಗುತ್ತಿದ್ದರು.

ಬನಶಂಕರಿಯ ವಿಷಯದಲ್ಲೂ ಆದುದಷ್ಟೆ. ವಿಧವೆ ಸುಬ್ಬಕ್ಕ ಹತ್ತು ವರ್ಷಗಳಿಗೆ ಹಿಂದೆ ಮೊಮ್ಮಗಳನ್ನು ಕರೆದುಕೊಂಡು ಬಾಳೆಮಣ್ಣೂರಿಗೆ ಬಂದಿದ್ದಳು. ಆ ಬಾಲ ವಿಧವೆಯ ಕತೆಯನ್ನೆಲ್ಲ ಕೇಳಿ ತಿಳಿದಿದ್ದರು ನಾರಾಯಣರಾಯರು. ಹುಡುಗಿ ಯುವತಿಯಾದಳು ಮೆಲ್ಲನೆ. ಕಂಡವರೂ ಕಾಣದವರೂ ಆಕೆಯ ಬಗೆಗೆ ಮಾತನಾಡಿದರು. ಒಂದೆರಡು ಸಾರಿ ಬನಶಂಕರಿಯನ್ನು ನೋಡಿದಾಗ, ಅವರ ಮನಸ್ಸು ಚಂಚಲವಾಯಿತು. ಆದರೂ ಅವರು ದುಡುಕಲಿಲ್ಲ. ವೃದ್ಧ ಸ್ವಾಮಿಗಳಿರುವಷ್ಟು ಕಾಲ ಅಂತಹದೊಂದೂ ಸಾಧ್ಯವಿರಲಿಲ್ಲ.

ಕಟ್ಟುನಿಟ್ಟಿನ ಆಡಳಿತಗಾರನೆಂದು ದೇವಸ್ಥಾನದ ಜನ ಅವರಿಗೆ ಹೆದರುತ್ತಿದ್ದರು. ಆ ಹಿಡಿತ ಸಡಿಲುವಂತೆ ವರ್ತಿಸಲು ಅವರು ಸಿದ್ಧರಿರಲಿಲ್ಲ.

ಪರಿಸ್ಥಿತಿ ತೀವ್ರವಾಗಿ ಬದಲಾದುದು ಯುವಕ ಯತಿ ಪಟ್ಟಕ್ಕೆ ಬಂದಾಗ. ಆ ಯತಿಗೆ ಬನಶಂಕರಿ ಶರಣಾಗತಳಾಗುವುದು ಅನಿವಾರ್ಯವಾಗಿತ್ತು. ನಾರಾಯಣರಾಯರಿಗೆ ಅದು ಸಹನೆಯಾಗದ ವಿಷಯ. ಅವರ ಇರುವಿಕೆಯನ್ನೇ ಯಾರೋ ಇತರರು ಪ್ರಶ್ನಿಸಿ ಅಣಕಿಸಿದ ಹಾಗಾಯಿತು. ತಡಮಾಡಬಾರದೆಂದು ನಾರಾಯಣರಾಯರು ಕಾರ್ಯೋನ್ಮುಖರಾದರು.

ಆದರೆ ಆ ದಿಕ್ಕಿನಲ್ಲಿ ಹೆಜ್ಜೆಯನ್ನಿಟ್ಟಾಗ ಮಾತ್ರ ಸ್ವಲ್ಪ ಕಸಿವಿಸಿಯಾಯಿತು ಅವರಿಗೆ, ಬನಶಂಕರಿಯ ಸಂಕಟಸಮಯದಲ್ಲಿ ಹಾಗೆ ಲಾಭ ಪಡೆಯುವುದು ಸರಿಯೋ ಎಂಬ ಶಂಕೆ

ಬಾಧಿಸಿತು. ಆದರೆ ಅಂತಹ ತುಮುಲ ದೀರ್ಘಕಾಲವಿರುತ್ತಿರಲಿಲ್ಲ. ಅನ್ಯಾಯವಾಗಿ ಬೀದಿಪಾಲಾಗಬೇಕಾದವಳನ್ನು ತಾನು ರಕ್ಷಿಸುತ್ತಿದ್ದೇನೆ ಎಂದಿತು ಮನಸ್ಸಿನೊಂದು ಭಾಗ. ಆ ಭಾಗದ ಯೋಚನೆಯನ್ನು ಕಂಡು ಇನ್ನೊಂದು ಭಾಗ ನಕ್ಕಿತು.

ಯತಿಗಳು ಸುಮ್ಮನಿರಲಿಲ್ಲ. ನಾರಾಯಣರಾಯರ ಆಸಕ್ತಿಯನ್ನು ತಿಳಿಯದ ಅವರು ರಾಮಶಾಸ್ತ್ರಿಯ ಮೇಲೆಯೇ ಹರಿಹಾಯ್ದರು. ಯಾವ ನಾಚಿಕೆಯೂ ಇಲ್ಲದೆ ಬನಶಂಕರಿಗೆ ನೇರವಾಗಿ ಹೇಳಿ ಕಳುಹಿದರು.

ಆಕೆ ನದಿಗೆ ಹೊರಟಾಗಲೆಲ್ಲ ಮಠದ ದೂತ ಹಿಂಬಾಲಿಸತೊಡಗಿದ.

"ಏನಮ್ಮ ಬನಶಂಕರಿ ? ಎಷ್ಟು ದಿವಸಾಂತ ಆ ರಾಮಶಾಸ್ತ್ರಿಯ ಭಿಕ್ಷಕ್ಕೆ ಕೈಯೊಡ್ಡೀಯಮ್ಮ ನೀನು ?"

ಸಾಧ್ಯವಿದ್ದಷ್ಟು ದಿವಸ ಅಂತಹ ಮಾತುಗಳನ್ನು ಅಮ್ಮಿ ಸಹಿಸಿದಳು.

ಆಮೇಲೆ ಆತ್ಮರಕ್ಷಣೆಗೆಂದು ವ್ಯಗ್ರಳಾದಳು.

"ನಿಮ್ಮ ಹಾದಿ ಹಿಡಿದು ನೀವು ಹೋಗಿ. ಇನ್ನೊಮ್ಮೆ ಮಾತಾಡ್ಸೋಕೆ ಬಂದ್ರೆ, ಮಂಗಳಾರ್ತಿ ಮಾಡ್ತೀನಿ !"

"ಓ ! ಅಷ್ಟು ಧೈರ್ಯ !"

"ಸಾಕು ! ನಾಚಿಕೆ ಆಗೋದಿಲ್ಲ ನಿಮಗೆ ?"

"ನಮಗ್ಯಾಕಮ್ಮಾ ನಾಚಿಕೆ ? ನಾವೇನು ಬಸವಿಯ ಹಾಗೆ ಬೆಳೀತಾ ಊರ ಚಾಕರಿ ಮಾಡ್ತಿದ್ದೇವೇನು ?"

"ಏನಂದಿರಿ ?"

"ಏನೋ ಅಂದೆ. ನಿನ್ಮೇಲೆ ದಯೆ ಇಟ್ಟು ಸ್ವಾಮಿಗ್ಳು ಹೇಳಿಕಳಿಸಿದ್ರೆ ಇಂಥ ಮಾತಾಡ್ತೀಯಲ್ಲಾ !"

...ಬನಶಂಕರಿ ಆ ವಿಷಯವನ್ನು ಸುಂದರಮ್ಮನಿಗೆ ತಿಳಿಸಲಿಲ್ಲ. ಹಾಗೆ ಹೇಳಿ, ತುಂಬಿದ ಬಸುರಿಯಾದ ಸುಂದರಮ್ಮನಿಗೆ ತೊಂದರೆಕೊಡಲು ಆಕೆ ಇಷ್ಟಪಡಲಿಲ್ಲ. ರಾಮಶಾಸ್ತ್ರಿಗೂ ಆ ವಿಷಯ ಹೇಳಲಿಲ್ಲ. ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂಬ ಭೀತಿಯಾಯಿತು ಅವಳಿಗೆ. ತನ್ನ ಭವಿಷ್ಯತ್ತಿನ ಬಗೆಗೂ ಭಯವಾಯಿತು.

ಕೆಲವು ದಿನಗಳ ಮೇಲೆ ನಾರಾಯಣರಾಯರು ಮತ್ತೊಮ್ಮೆ ಕಾಣಲು ದೊರೆತರು. ಅವರನ್ನು ಕಂಡಾಗ ಅಮ್ಮಿಗೆ ಸಮಾಧಾನವೆನಿಸಿತು.

ನದಿಯಿಂದ ಹಿಂತಿರುಗುವಾಗ ನಾಲ್ಕು ಮಾರು ದೂರದಲ್ಲೇ ಆಕೆಯನ್ನು ಹಿಂಬಾಲಿಸಿ ಅವರು ಬಂದರು.

ನಾರಾಯಣರಾಯರೆಂದರು :

"ರಾಮಶಾಸ್ತ್ರಿ ಮನೇಲಿದಾರೇನು ?"

"ಇದಾರೆ."

"ಮನೇಲಿ ಎಲ್ರೂ ಚೆನ್ನಾಗಿದಾರಾ ?"

ಅವರಿಗೆ ಎಲ್ಲ ವಿಷಯವೂ ತಿಳಿದಿದೆ, ಎಂದುಕೊಂಡಳು ಅಮ್ಮಿ.

"ಚೆನ್ನಾಗಿದಾರೆ..."

ನಾಲ್ಕು ಹೆಜ್ಜೆ ಅವರಿಬ್ಬರೂ ಮೌನವಾಗಿಯೇ ನಡೆದರು. ಎದುರುಗಡೆಯಿಂದ ದೂರದಿಂದ ಯಾರೋ ಬರುತ್ತಿದ್ದ ಹಾಗೆ ತೋರಿತು. ಅಮ್ಮಿಯನ್ನು ಹಿಂದೆ ಉಳಿಸಿ ರಾಯರು ಬೇಗ ಬೇಗನೆ ಹೆಜ್ಜೆ ಇಟ್ಟರು.

ಹಾಗೆ ಹೊರಡುತ್ತ ಅವರೆಂದರು :

"ಮಠದವನು ಮಾತನಾಡ್ತಾ ಇದ್ನಲ್ವೆ ಮೊನ್ನೆ ? ಅವರ ತಲೆ ಹರಟೆ ಜಾಸ್ತಿಯಾಯ್ತೊಂತ ತೋರುತ್ತೆ. ನೀನೇನೂ ಹೆದರ್ಕೋಬೇಡ ಬನಶಂಕರಿ. ಏನೂ ಯೋಚ್ನೆ ಮಾಡ್ಬೇಡ..."

ಹೆದರಬಾರದು, ಯೋಚನೆ ಮಾಡಬಾರದು...

ಮನೆಯಲ್ಲಿ ಸುಂದರಮ್ಮ ತಾಯ್ತನವನ್ನು ಇದಿರು ನೋಡುತ್ತಿದ್ದಳು. ಇನ್ನು ಕೆಲವೇ ದಿನಗಳ ಮಾತು. ಆ ಬಳಿಕ ಸುಂದರಮ್ಮ ಮತ್ತೊಮ್ಮೆ ತಾಯಿಯಾಗುವಳು.

ರಾಮಶಾಸ್ತ್ರಿ ಸೂಲಗಿತ್ತಿಗೆ ಹೇಳಿಬಂದ.

"ನನಗೆ ಏನೋ ಆಗುತ್ತಮ್ಮ...ಮನಸ್ನಲ್ಲಿ ಅಳುಕು...ಯಾಕೆ ಹೀಗಾಗುತ್ತೋ ?"

—ಹೀಗೆಂದು ಸುಂದರಮ್ಮ ಹೇಳಿದರೆ ಬನಶಂಕರಿ ಉತ್ತರವೀಯುತ್ತಿದ್ದಳು :

"ಹೆದರ್ಬೇಡ ಅಕ್ಕಾ, ಯೋಚ್ನೆ ಮಾಡ್ಬೇಡ...ನಾನಿದೀನಿ."

ಅವೆರಡು ಎಷ್ಟು ಒಳ್ಳೆಯ ಪದಗಳು ! ಅಂತಹ ಮಾತುಗಳಿಂದ ತನಗೆ ಧೈರ್ಯ ನೀಡಿದ ನಾರಾಯಣರಾಯರನ್ನು ಆಕೆ ಆಗಾಗ್ಗೆ ನೆನೆಸಿಕೊಂಡಳು. ದೇವಸ್ಥಾನದ ಪಾರುಪತ್ಯಗಾರರು ಅಷ್ಟು ಒಳ್ಳೆಯವರಾಗಿದ್ದಾಗ ತಾನು ಯಾಕೆ ಹೆದರಬೇಕು ? ಯೋಚನೆ ಮಾಡಬೇಕು ?

ಸುಂದರಮ್ಮನೆನ್ನುತ್ತಿದ್ದಳು :

"ಆದರೂ ಯಾಕೋ ಭಯವಾಗುತ್ತಮ್ಮ ನನಗೆ..."

'ನಾನೇ ಹೆದರದೆ ಇರುವಾಗ ನೀನು ಯಾಕೆ ಭಯ ಪಡಬೇಕು ?' ಎಂದು ಕೇಳಬೇಕೆನ್ನಿಸಿತು ಬನಶಂಕರಿಗೆ. ಆದರೆ ಮಾತು ಹೊರಡದೆ ಮುಗುಳುನಗೆ ತುಟಿಯ ಮೇಲೆಯೇ ನಿಂತಿತು.

"ಖುಷಿಯಾಗಿದಿಯಲ್ಲೆ ಬನೂ !"

ನಾಚಿಕೆಯಾಯಿತು ಅಮ್ಮಿಗೆ. ತನ್ನ ಮನಸ್ಸಿನ ಆಳದ ಯೋಚನೆಗಳನ್ನೆಲ್ಲಿ ಸುಂದರಮ್ಮ ಕಂಡುಹಿಡಿದಳೋ ಎಂದು ಗಾಬರಿಯೂ ಆಯಿತು. ಏನಾದರೂ ಉತ್ತರ ಕೊಡದಿರುವುದು ಸಾಧ್ಯವಿರಲಿಲ್ಲ.

"ಹೀಗೇ ಅಕ್ಕಾ...ಪುಟಾಣಿ ಗಂಡು ಮಗು ಮನೆಗೆ ಇನ್ನೇನು ಬಂದ್ಬಿಡುತ್ತೇಂತ—"

ಸುಂದರಮ್ಮ ನಾಚಿದಳು. ಅವಳ ಮುಖ ರಂಗೇರಿತು. ಆದರೆ ಮರುಕ್ಷಣದಲ್ಲೇ ಸುಂದರಮ್ಮನಿಗೆ ಬನಶಂಕರಿಯ ಇರುವಿಕೆಯ ನೆನಪಾಗಿ ಮುಖ ಕಪ್ಪಿಟ್ಟಿತು.

"ಮಗು ಎಲ್ಲಿ ಹೋಯ್ತೋ ಏನೋ...ಒಂದಿಷ್ಟು ಹೊರಗೆ ಇಣಿಕಿನೋಡೇ" ಎಂದು ಬನಶಂಕರಿಯನ್ನು ಕಳುಹಿಸಿಕೊಟ್ಟು ಸುಂದರಮ್ಮ, ಮಲಗಿದ್ದಲ್ಲಿಂದಲೆ ಪಕ್ಕಕ್ಕೆ ಹೊರಳಿ, ಗೋಡೆಗೆ ಮುಖ ಮಾಡಿದಳು. ನಿಧಾನವಾಗಿ ಯೋಚನೆಗಳು ದೂರಸರಿದುವು. ನಿದ್ದೆ ಅವಳ ಬಳಿಸಾರಿತು.

......ಆ ಒಂದು ದಿನ, ಮೊನಚಾದ ಈಟಿಯಿಂದ ಬಲವಾಗಿ ತಿವಿದಹಾಗೆ ಆ ಮಾತು ಬಂದಿತ್ತು.

"ಅಂತೂ ಕೊನೆಗೆ ಎಂಥಾ ಮೀನೇ ಬುಟ್ಟಿಗ್ಬಿತ್ತು ನೋಡು!"

ಹಾಗೆ ಹೇಳಿದ ಹೆಂಗಸು ಮೀನಿನ ಬುಟ್ಟಿಯನ್ನು ಎಂದಾದರೂ ಕಂಡಿದ್ದಳೋ ಇಲ್ಲವೋ! ಆದರೆ ಬನಶಂಕರಿಯನ್ನು ಬಲೆ ಬೀಸುವ ಬೆಸ್ತರವಳೆಂದು ಕರೆಯಲು ಆಕೆ ಹಿಂದು ಮುಂದು ನೋಡಲಿಲ್ಲ.

ಅಮ್ಮಿಗೆ ನದೀದಂಡೆಯ ಕೊಂಕುಮಾತಿನ ಅರ್ಥವಾಗಿತ್ತು. ಹಾಗಾದರೆ ನಾರಾಯಣ ರಾಯರೊಡನೆ ತಾನು ಮಾತನಾಡುತ್ತಿದ್ದುದನ್ನು ಯಾರೋ ನೋಡಿದ್ದರೆಂದಾಯಿತು.

ಮತ್ತೊಂದು ಸ್ವರ:

"ಆಹಾ! ಅದೇನು ಚಕ್ಕಂದವೊ! ಅದೇನು ಸರಸಸಲ್ಲಾಪವೊ!"

"ಹೋಗಲಿ ಬಿಡೆ. ನಮಗೇನಂತೆ? ಪಾಪ ಮಾಡಿದವರು ರೌರವ ನರಕಕ್ಕೆ ಹೋಗ್ತಾರೆ."

ಎಂತಹ ಔದಾರ್ಯ!

ಅಮ್ಮಿ ಆ ಗುಂಪನ್ನು ದಾಟಿ ನದಿಯ ದಂಡೆಯ ಮೇಲೆಯೇ ಕೆಳಕ್ಕೆ ಬೇಗಬೇಗನೆ ನಡೆದು ಹೋದಳು.

ಒಬ್ಬ ಹೆಂಗಸು ಸ್ವರವೇರಿಸಿ ಅಂದಳು:

"ಇನ್ನೂ ಸ್ವಲ್ಪ ದೂರ ಹೋಗೇ ಮಾರಾಯ್ತೀ. ನಿಮ್ಮನ್ನಟ್ಕ ನೋಡಿ ನಾವ್ಯಾಕೆ ಪಾಪಿಗ್ಳಾಗೋಣ?"

ಕೊನೆಯದಾಗಿ ಬಂದ ಆ ಮಾತು:

"ಅಲ್ಲಾಂದ್ರೆ...ದೇವಸ್ಥಾನದ ಪಾರುಪತ್ಯಗಾರನನ್ನೇ ಹಿಡ್ಕೊಂಡ್ಬಿಟ್ಲಲ್ಲ?"

ಅಮ್ಮಿಯ ಕಾಲುಗಳು ಕಂಪಿಸಿದುವು. ಎದೆ ಡವಡವನೆ ಒಂದೇ ಸಮನೆ ಹೊಡೆದು ಕೊಂಡಿತು. ಉರಿಯುತ್ತಿದ್ದ ಮನೆಯಿಂದ ಓಡುವವಳ ಹಾಗೆ, ಆಕೆ ನದೀ ದಡವನ್ನು ಬಿಟ್ಟು ಮನೆಯತ್ತ ಬೇಗಬೇಗನೆ ನಡೆದಳು.

ಬಟ್ಟೆಗಳನ್ನೂ ಒಗೆಯದೆ ಆಕೆ ಓಡಿಬಂದ ರೀತಿಯನ್ನು ಕಂಡು ಸುಂದರಮ್ಮ ಒರಗಿ ಕುಳಿತಲ್ಲಿಂದಲೇ ಕೇಳಿದಳು:

"ಏನಾಯ್ತೆ? ಯಾವನೇ ಆತ ಮಾತಾಡ್ಸೋಕೆ ಬಂದವನು?"

ಮುಖದ ಮೇಲೆ ಬರೆದುದನ್ನು ಓದುವವಳ ಹಾಗೆ ಆ ಪ್ರಶ್ನೆ ಕೇಳಿದಳು ಸುಂದರಮ್ಮ.

ತಡವರಿಸುತ್ತ ತಡವರಿಸುತ್ತ ಅಮ್ಮಿ ಸುಳ್ಳು ಹೇಳಿದಳು:

"ಏನೂ ಇಲ್ಲಕ್ಕ. ಯಾರೂ ಇಲ್ಲಕ್ಕ. ಜಾಸ್ತಿ ಜನ ಸೇರ್ಬಿಟ್ಟಿದ್ರು. ಮನೇಲೆ ಒಗೆಯೋಣಾಂತ ಬಂದೆ."

ಅದು ಸುಳ್ಳು, ಎಂಬದು ಸ್ಪಷ್ಟವಾಗಿತ್ತು. ತಾನು ಓಡಾಡುವಂತಿದ್ದರೆ ಸ್ವತಃ ಸುಂದರಮ್ಮನೇ ನದೀದಡಕ್ಕೆ ಬಂದು, ಬನಶಂಕರಿಯನ್ನು ಕೆಣಕುವ ಎದೆಗಾರಿಕೆ ತೋರಿದವರೊಡನೆ ಮಾತನಾಡುತ್ತಿದ್ದಳು. ಈಗ ಆಕೆ ಅಸಹಾಯಳು. ಸುಂದರಮ್ಮನಿಗೆ ವ್ಯಥೆಯಾಯಿತು. ಹೆಚ್ಚು ಮಾತನಾಡಿ ಗೆಳತಿಯನ್ನು ನೋಯಿಸಬಾರದೆಂದು ಅವಳು ಉಗುಳು ನುಂಗಿಕೊಂಡು

ಸುಮ್ಮನಾದಳು.

ಸುಂದರಮ್ಮನ ಮೌನಕ್ಕಾಗಿ ಎಷ್ಟೊಂದು ಕೃತಜ್ಞಳಾಗಿದ್ದಳು ಅಮ್ಮಿ! ಮತ್ತೂ, ಅದೇ ಪ್ರಶ್ನೆಯನ್ನೇ ಆಕೆ ಕೇಳಿದ್ದರೆ ಅಮ್ಮಿ ಏನು ಉತ್ತರ ಕೊಡುವುದು ಸಾಧ್ಯವಿತ್ತು? ನಾರಾಯಣ ರಾಯರು ತನ್ನನ್ನು ಕಂಡು ಎರಡು ಸಾರೆ ಮಾತನಾಡಿಸಿದರೆಂದೆ? ತಮ್ಮಿಬ್ಬರ ಬಗ್ಗೆ ಹೆಂಗಸರು ನಗೆಯಾಡಿದರೆಂದೆ?

ತನ್ನಿಂದಲೂ ತಪ್ಪಾಯಿತೆಂದು ಅಮ್ಮಿ ಭಾವಿಸಿದಳು. ವಿಧವೆಯಾದ ತಾನು ಗಂಡಸರೊಡನೆ ಮಾತನಾಡಬಾರದಿತ್ತು.

ಆದರೆ ಹಾಗೆ ತಾನು ಮಾತನಾಡಿದ್ದು ನಿಜವಾಗಿಯೂ ದೊಡ್ಡ ತಪ್ಪೆ? ಒಂದು ಮನುಷ್ಯನ ಜೀವ ಇನ್ನೊಂದು ಮನುಷ್ಯ ಜೀವದೊಡನೆ ಮಾತನಾಡುವುದೂ ತಪ್ಪೆ?

ಮೀನು ಬುಟ್ಟಿಗಿಳಿತ್ತು......ಚಕ್ಕಂದ ಸರಸ ಸಲ್ಲಾಪ...ಪಾಪ, ರೌರವ ನರಕ...

ಅಮ್ಮಿ ಬಾವಿ ನೀರು ಸೇದಿ ಬಟ್ಟೆ ಒಗೆಯುತ್ತಲೆ ಇದ್ದಳು. ಧಿಮಿಗುಡುತ್ತಿದ್ದ ಮೆದುಳಿನಿಂದ ನೂರು ಯೋಚನೆಗಳು ಹೊರಹೊಮ್ಮುತ್ತಲೆ ಇದ್ದುವು...

...ನಾರಾಯಣರಾಯರೊಡನೆ ಎಂತಹ ಸಂಬಂಧ ತನ್ನದು ಹಾಗಾದರೆ? ಅವರು ತೋರಿದ ಸಹಾನುಭೂತಿಯನ್ನು ತಾನು ಸ್ವೀಕರಿಸಿದ್ದು ತಪ್ಪೆ?

ದೇವಸ್ಥಾನದ ಆ ಪಾರುಪತ್ಯಗಾರರು—

ವಿಶಾಲವಾದ ಹಣೆ, ಮುಖದ ಅಂದವಾದ ನಿಲುವಿಗೆ ಒಪ್ಪುತ್ತಿದ್ದ ಪಿಳ್ಳಂಜುಟ್ಟು, ದೃಢಕಾಯ, ಆ ಕಣ್ಣುಗಳಲ್ಲಿ ಸದಾಕಾಲವೂ ಇರುತ್ತಿದ್ದ ತಿಳಿವಳಿಕೆಯ ನೋಟ, ತುಟಿಗಳ ಮೇಲೆ ಚಿಮ್ಮಲು ಸಿದ್ಧವಾಗಿ ನಿಂತಿದ್ದ ಕುಡಿನಗೆ...ವಯಸ್ಸಿನಲ್ಲಿ ತನಗಿಂತ ದೊಡ್ಡವರು. ಮದುವೆಯಾಗಿತ್ತು ಅವರಿಗೆ. ಮಕ್ಕಳಿದ್ದರು.

ಕೆಲವು ವರ್ಷಗಳ ಹಿಂದೊಮ್ಮೆ ಅಜ್ಜಿ ಅವರನ್ನೂ ದೂರದಿಂದ ತೋರಿಸಿಕೊಟ್ಟಿದ್ದಳು.

"ಅಮ್ಮೀ, ಅವರೇ ನೋಡು...ಹೊಸ ಪಾರುಪತ್ಯಗಾರ್ರು. ಬಹಳ ಕಟ್ಟು ನಿಟ್ಟು. ಇನ್ನೂ ಚಿಕ್ಕ ವಯಸ್ಸು...ಇಬ್ಬರು ಮಕ್ಳಿದಾರೆ."

ತನಗೆ ಸಂಬಂಧವಿಲ್ಲದ ಯಾವುದೊ ವಿಷಯವೆಂಬಂತೆ ಅಮ್ಮಿ ಆಗ ಆ ಮಾತಿಗೆ ಕಿವಿಗೊಟ್ಟಿದ್ದಳು. ಆದರೂ ಎಲ್ಲೋ ಆಳ ಆಳದಲ್ಲಿ ಉಳಿದು ಹೋಗಿದ್ದ ಆ ಮಾತು ಈಗ ನೆನಪಾಗುತ್ತಿತ್ತು.

—ಈಗ ಅವರಿಗೆ ಇನ್ನೆಷ್ಟು ಮಕ್ಕಳಿರಬಹುದಲ್ಲ?

ಎಂಥ ಯೋಚನೆ!—ಎನ್ನುತ್ತ, ಬಟ್ಟೆಯನ್ನು ಬಲವಾಗಿ ಟಪ ಟಪನೆ ಅಮ್ಮಿ ಕಲ್ಲಿನ ಮೇಲೆ ಹೊಡೆದಳು.

...'ನಿನಗೇನಾದರೂ ತೊಂದರೆಯಾದರೆ ಬಂದು ಹೇಳಮ್ಮ'—ಎಂದಿದ್ದರು ನಾರಾಯಣರಾಯರು. ಆ ಮಾತು ಕೇಳಿದಾಗ ತನಗೆ ಸಮಾಧಾನವಾಗಿತ್ತು. ತೊಂದರೆ—ಅಂದರೆ ಎಂಥದು? ಈ ಜನ ತನ್ನ ಬಗೆಗೆ ಕೆಟ್ಟ ಕೆಟ್ಟ ಮಾತುಗಳನ್ನಾಡುವುದು ತೊಂದರೆಯೆ? ಸ್ವಾಮಿ ಮಠದ ದೂತನನ್ನು ಕಳುಹಿರುವುದು ತೊಂದರೆಯೆ? ಆ ತೊಂದರೆಗಾಗಿ ನಾರಾಯಣರಾಯರು ಏನಾದರೂ ಪರಿಹಾರ ತೋರಬಹುದೆ? ಅವರು ತನಗೆ ರಕ್ಷಣೆ ಕೊಡುವರೆ? ತನ್ನಿಂದಾಗಿ ಶಾಸ್ತ್ರಿ ದಂಪತಿಗೆ ಎಷ್ಟೋ ತೊಂದರೆ! ಅದನ್ನು ಹೋಗಲಾಡಿಸುವುದು ಇವರಿಗೆ

ಸಾಧ್ಯವೆ ?

ಪ್ರಶ್ನೆಗಳೇಳುತ್ತಿದ್ದುವು ಒಂದರ ಅನಂತರ ಒಂದಾಗಿ-ಸಮರ್ಪಕವಾದ ಒಂದು ಉತ್ತರವನ್ನು ಪಡೆಯುವುದಕ್ಕೂ ಪುರಸೊತ್ತಿಲ್ಲದ ಹಾಗೆ.

ಕೆಲಸ ನಿಲ್ಲಿಸಿ ಬೆರಳಿಂದ ಹಣೆಯ ಬೆವರು ತೆಗೆಯುತ್ತ, ಅಮ್ಮಿ ಒಂದು ನಿಮಿಷ ಯಾವ ಯೋಚನೆಯನ್ನೂ ಮಾಡದೆ ಮೆದುಳಿಗೆ ವಿರಾಮ ಕೊಟ್ಟಳು.

ಮತ್ತೆ ಸುಂದರಮ್ಮನ ಸೀರೆ ಹಿಂಡುತ್ತಿದ್ದಂತೆ ಆಕೆಗೆ ಅಳು ಬಂತು. ಎಷ್ಟು ಒಳ್ಳೆಯವಳು ಸುಂದರಮ್ಮ! ಇಷ್ಟಾದರೂ ಸಂಕಟ ಸಹಿಸುವ ಹಾಗೆ ತನ್ನನ್ನು ಕಠಿನ ಮನಸ್ಕಳಾಗಿ ಮಾಡಿದವಳು ಆಕೆ. ತಾನು ಏನು ಮಾಡಿದರೆ ತಾನೇ ತೀರೀತು ಆ ಋಣ ?

ಅಜ್ಜಿಗೋಸ್ಕರ ಬಾಳೆಮಣ್ಣೂರಿಗೆ ಬಂದುದಾಯಿತು. ಇನ್ನು ಯಾರಿಗೋಸ್ಕರ ಇಲ್ಲಿರಬೇಕು ? ಬೇರೆ ಯಾವುದಾದರೂ ಊರಿಗೆ ಹೊರಟುಹೋದರೆ ಮೇಲಲ್ಲವೆ ?

ಹೊರಟುಹೋಗುವ ಯೋಚನೆ ಬಂದಾಗ ಅಮ್ಮಿಗೆ ರಾಮಶಾಸ್ತ್ರಿ—ಸುಂದರಮ್ಮನ ನೆನಪಾಯಿತು. ಆ ನೆನಪು ಸೂಕ್ಷ್ಮವಾಗಿ ಆಕೆಯ ಹೃದಯವನ್ನು ಹಿಂಡಿತು.

ಅದು ಮಳೆಗಾಲದ ಆರಂಭ. ಧೋ ಧೋ ಎಂದು ಸುರಿಯಿತು ಮಲೆನಾಡಿನ ಮುಂಗಾರು ಮಳೆ. ಭದ್ರಾನದಿ ತುಂಬಿ ಹರಿಯಿತು. ಬಾಳೆಮಣ್ಣೂರಿನಲ್ಲಿ ಎಲ್ಲಿ ನೋಡಿದರಲ್ಲಿ ತೋರುತ್ತಿದ್ದುದೊಂದೇ : ಕೆಂಪು ಕೊಳಚೆ ನೀರು, ಮಳೆಗಾಳಿ ಬೀಸಿ ಗುಡುಗು ಮಿಂಚುಗಳ ಆರ್ಭಟವಾಗುತ್ತಲಿದ್ದಂತೆ ಒಂದು ರಾತ್ರೆ ಅಮ್ಮಿಯ ಅಜ್ಜಿಯ ಮನೆ ಕುಸಿದು ಬಿತ್ತು. ಮೊದಲು ಅದು ಯಾವ ಸದ್ದೆಂದು ಯಾರಿಗೂ ಅರ್ಥವಾಗಲಿಲ್ಲ. ಪ್ರಸವವೇದನೆ ಅನುಭವಿಸುತ್ತ ಮಲಗಿದ್ದ ಸುಂದರಮ್ಮ, "ಅದೇನು, ಅದೇನು ?" ಎಂದು ಮತ್ತೆ ಮತ್ತೆ ಕೇಳಿದಳು. ರಾಮಶಾಸ್ತ್ರಿ ಲಾಟೀನನ್ನು ಕಿಟಕಿಯ ಬಳಿ ಹಿಡಿದು ನೋಡಿದ. ಏನೂ ಕಾಣಿಸಲಿಲ್ಲ. ಅಮ್ಮಿಗೆ ಮಾತ್ರ ಒಮ್ಮೆಲೆ ಹೊಳೆಯಿತು. ಅವಳೆಂದಳು :

"ನಮ್ಮ ಮನೆ ಬಿತ್ತೂಂತ ತೋರುತ್ತೆ."

"ಹೌದು ಹೌದು," ಎಂದ ರಾಮಶಾಸ್ತ್ರಿ.

ನೋವಿನ ನಡುವಿನಲ್ಲೂ ಸುಂದರಮ್ಮನೆಂದಳು :

"ಹೋಗಲಿ ಬಿಡು. ಅಜ್ಜೀ ಜತೇಲೆ ಅದೂ ಹೋಗಬೇಕಾಗಿತ್ತು. ಮಳೆ ಬರಲೀಂತ ಕಾದಿತ್ತೇನೋ !"

ಸದ್ಯಃ ನಾಲ್ಕು ಕಾಸು ಬೆಲೆ ಬರುವ ಯಾವ ಸಾಮಾನೂ ಅಲ್ಲಿರಲಿಲ್ಲ. ಅಮ್ಮಿ ಸುಂದರಮ್ಮನ ಮನೆಯಲ್ಲಿ ಇರತೊಡಗಿದಂದಿನಿಂದ ಆ ಮನೆ ಹೆಗ್ಗಣಗಳ ವಾಸಸ್ಥಾನವಷ್ಟೇ ಆಗಿತ್ತು.

ಹೊರಗೆ ಮಳೆಯ ಘೋರ ಆರ್ಭಟವಾದರೆ ಒಳಗೆ ಪ್ರಸವದ ನೋವಿನಿಂದ ಸುಂದರಮ್ಮ ಗೋಳಾಡಿದಳು. ತನ್ನ ನೋವಿನ ಸ್ವರ ಮಳೆಯ ದೆಸೆಯಿಂದ ಬಹಳ ದೂರ ಕೇಳಿಸುತ್ತಿಲ್ಲವಲ್ಲ ಎಂಬುದೇ ಆಕೆಯ ಸಮಾಧಾನವಾಯಿತು.

ಹೆರಿಗೆಯಾಯಿತು ಸುಂದರಮ್ಮನಿಗೆ. ಹೆಣ್ಣು ಮಗು. ಮಗುವಿನ ಮೇಲೆ ದೃಷ್ಟಿ ಹಾಯಿಸಿದ ಬಳಿಕ ತಾಯಿ ಸುಂದರಮ್ಮ ತನ್ನ ಗೆಳತಿ ಬನಶಂಕರಿಯನ್ನು ನೋಡಿದಳು. ನೋಡಿ ನಕ್ಕಳು.

ನಾಲ್ಕು ದಿನಗಳ ಮೇಲೆ, ರಾಮಶಾಸ್ತ್ರಿ ಪಕ್ಕದಲ್ಲಿದ್ದಾಗಲೆ, ಸುಂದರಮ್ಮ ಮಗುವಿನ ನಾಮಕರಣದ ಮಾತು ತೆಗೆದಳು :

"ನಾನು ಆಗಲೆ ತೀರ್ಮಾನಿಸ್ಬಿಟ್ಟದೀನಿ."

"ಈ ಸೇವಕನಿಗೂ ತಿಳಿಸ್ಬಹುದೋ ? "

ರಾಮಶಾಸ್ತ್ರಿಯ ಮಾತು ಕೇಳಿ ಬನಶಂಕರಿಗೆ ನಗು ಬಂತು.

"ಹೇಳಿ ಅಕ್ಕ, ಕೇಳೋಣ," ಎಂದು ಆಕೆಯೂ ದನಿಗೂಡಿಸಿದಳು.

"ಬನಶಂಕರಿ."

"ಏನು ? " ಎಂದಳು ಅಮ್ಮಿ.

"ಏನೂ ಅಲ್ಲ ನನ್ಮಗೂ ಹೆಸರು—ಬನಶಕಂರಿ."

"ಸಾಕು ತಮಾಷೆ."

"ತಮಾಷೆಯಲ್ಲ ಬನೂ."

ರಾಮಶಾಸ್ತ್ರಿ ನಗಲೂ ಇಲ್ಲ; ರೇಗಲೂ ಇಲ್ಲ. ಉಪಾಯವಾಗಿ ಬೇರೆ ಮಾತು ತೆಗೆದ.

ಬಾಣಂತಿ ಇನ್ನೂ ಮಲಗಿದ್ದಾಗಲೇ ಒಂದು ಮುಂಜಾನೆ ಅಮ್ಮಿ ಕೊಳೆಯಾದ ಬಟ್ಟೆಗಳನ್ನೆಲ್ಲ ಹೊತ್ತುಕೊಂಡು ನದಿಯತ್ತ ಹೊರಟಳು.

"ಇನ್ನೂ ಸೆಳೆತ ಇದೆ ಬನಶಂಕರಿ. ಅಲ್ದೆ ಇಷ್ಟು ಬೆಳಿಗ್ಗೆ ಒಂದು ನರಹುಳವೂ ಇರೋಲ್ಲ ಅಲ್ಲಿ."

ನರಹುಳವಿಲ್ಲದಾಗ ನದಿಯ ಬಳಿಗೆ ಹೋಗಬೇಕೆಂದೇ ಅಮ್ಮಿ ಹೊರಟದ್ದಳು.

"ಪರವಾಗಿಲ್ಲ. ಬೇಗ್ನೆ ಬಂದ್ಬಿಡ್ತೀನಿ..."

ಆ ದಿನ, ಅಜ್ಜಿ ಸತ್ತ ಮುಂಜಾನೆ, ನಾರಾಯಣರಾಯರು ಸ್ನಾನಕ್ಕೆ ಹೊರಟ್ಟಿದ್ದರು. ಈ ದಿನವೂ ಅವರು ಬರಬಹುದೆ—ಬರಬಹುದೆ ?

ಅವರು ಬಂದಿರಲಿಲ್ಲ. ನಿರಾಶಳಾಗದೆ ಅಮ್ಮಿ ದಿನವೂ ಮುಂಜಾನೆ ನದಿಯ ದಂಡೆಗೆ ನಡೆದಳು.

ಆ ದಿನ ಆ ಸ್ವರ ಕೇಳಿಸಿತು.

"ಬನಶಂಕರೀ..."

ಅಮ್ಮಿಯ ಹೃದಯ ಹೊಯ್ದಾಡಿತು : ತಾನು ಉತ್ತರಿಸಬೇಕು...

"ಬನಶಂಕರೀ ! ಇದೇನು ಇಷ್ಟು ಬೆಳಿಗ್ಗೆ ಬಂದ್ಬಿಟ್ಟಿದೀಯ !"

"ಮೈಲಿಗೆ ಬಟ್ಟೆ ರಾಶಿ ಬಿದ್ದಿತ್ತು, ಬಂದೆ."

"ತಾಯಿ ಮಗು ಚೆನ್ನಾಗಿದಾರೇನು ? "

"ಇದಾರೆ."

ಅಮ್ಮಿ ದಂಡೆಯ ಉದ್ದಕ್ಕೂ ದೃಷ್ಟಿ ಹಾಯಿಸಿದಳು. ಆಗಿನ್ನೂ ಯಾರೂ ಬಂದಿರಲಿಲ್ಲ.

"ಯಾರಾದ್ರೂ ನೋಡ್ಬೌದೂಂತ ಹೆದರಿಕೆ, ಅಲ್ವೆ ? "

ಅಮ್ಮಿ ಮೌನವಾಗಿ ತಲೆಯಾಡಿಸಿದಳು.

" ನಿಮ್ಮನೆ ಬಿದ್ಹೋಯ್ತುಂತೆ."

" ಹೂಂ."

ತಾನು ಬಾಳೆಮಣ್ಣೂರು ಬಿಟ್ಟು ಎಲ್ಲಿಗಾದರೂ ಹೊರಟು ಹೋಗಲು ಇಚ್ಛಿಸಿದ್ದನ್ನು ಅವರಿಗೆ ತಿಳಿಸಬೇಕೆಂದುಕೊಂಡಳು ಅಮ್ಮಿ. ಆದರೆ ಅಷ್ಟರಲ್ಲೆ ನಾರಾಯಣರಾಯರು ಕೇಳಿದರು :

" ಮುಂದೆ ರಾಮಶಾಸ್ತ್ರಿ ಮನೇಲೇ ಇರ್ತೀಯಾ ? "

ತನಗೆ ಬದುಕು ಅಸಹನೀಯವಾಗಿದೆಯೆಂದು ಈಗ ಹೇಳಬೇಕು ಈಗ.

ಆದರೆ ಗಂಟಲನಾಳವೇ ಮುಚ್ಚಿಹೋಗಿತ್ತು.

ಮತ್ತೂ ಮಾತನಾಡಿದವರು ನಾರಾಯಣರಾಯರೇ.

" ಬನಶಂಕರಿ, ನಿನಗೊಂದು ವಿಷಯ ಹೇಳ್ಬೇಕೂಂತ ಬಹಳ ದಿವಸ್ದಿಂದ ಯೋಚ್ನೆ ಮಾಡಿದ್ದೆ. ನಿಮ್ಮಜ್ಜಿ ಇರೋವಾಗ್ಲೆ ಹೇಳ್ಬೇಕಾಗಿತ್ತು. ಆದರೆ ಪಾಪ, ಆಕೆ ಹೊರಟ್ಹೋದ್ರು—"

ಮುಂದಿನ ಮಾತಿಗೆ ಕಾತರಳಾಗಿ ಅಮ್ಮಿ ಕುಳಿತಳು. ಆ ಮಾತು ಏನಿರಬಹುದೆಂಬ ಕಲ್ಪನೆಯೇ ಅವಳಿಗಿರಲಿಲ್ಲ. ಆದರೂ ನಿರಾಶೆಯ ಮಡುವಿನಲ್ಲಿ ಮುಳುಗುತ್ತಿದ್ದ ಅವಳ ಮನಸ್ಸು ಅದನ್ನು ತಿಳಿಯಲು ತವಕಗೊಂಡಿತು.

" ನಾನು—ಆ ವಿಷಯ ನಿನಗೆ ಹೇಳಬಹುದೋ ಬಾರದೋ ನನಗೆ ತಿಳೀದು—ಆದರೆ ಹೇಳ್ಲೇ ಬೇಕು...ರಾಮಶಾಸ್ತ್ರಿ ಮನೆಗೇ ಬಂದು ಒಂದಿನ ಹೇಳೋಣಾಂತಿದ್ದೆ."

ಅಯ್ಯೋ—ಅದೇನೆಂದು ಹೇಳಬಾರದೇ ಇವರೊಮ್ಮೆ.

"ಇನ್ನೇನಿಲ್ಲ ಬನಶಂಕರಿ...ನೀನು, ನಿನಗಿಷ್ಟವಾದರೆ ನನ್ಮನೇಲಿ ಇರು...ನಿನಗಾಗಿ ಬೇರೆ ಮನೆ ಮಾಡ್ಕೊಡ್ತೀನಿ...ನಿನಗಿಷ್ಟವಾದರೆ. ಹ್ಯಾಗೂ ಸಾಯೋವರೆಗೂ ಒಬ್ಬಳೇ ಇರೋಕೆ ಆಗುತ್ತೇನು ? "

ಅರ್ಥವಾಗದ ನೋವೊಂದು ಅಮ್ಮಿಯ ಹೃದಯವನ್ನು ಹಿಸುಕಿತು. ಮೆದುಳು ಚೀರಾಡಿತು. ಕಣ್ಣಿಗೆ ಕತ್ತಲು ಕವಿಯಿತು. ಒಮ್ಮೆಲೆ ಆಕೆ ಅತ್ತಳು, ಗಟ್ಟಿಯಾಗಿ, ಎಳೆಯ ಮಗುವಿನಂತೆ.

ಬೇರೆ ಯಾರಿಗಾದರೂ ಕೇಳಿಸಿತೇನೋ ಎಂದು ಗಾಬರಿಯಾಗಿ ರಾಯರು ಅತ್ತಿತ್ತ ನೋಡಿದರು. ಇನ್ನೂ ಯಾರೂ ಬಂದಿರಲಿಲ್ಲ. ಸ್ವಾರ್ಥವೊ ಸಹಾನುಭೂತಿಯೊ, ಒಬ್ಬ ಹೆಣ್ಣಿಗಲ್ಲದೆ ಇನ್ನೊಬ್ಬಳಿಗೂ ಕೊಡುವಷ್ಟು ವಿಪುಲವಾಗಿದ್ದ ಪ್ರೇಮರಾಶಿಯೊ, ನಾಲ್ಕು ಮಕ್ಕಳಾದರೂ ತೃಪ್ತಿಕಾಣದೆ ಇದ್ದ ಶರೀರದ ಬಯಕೆಯೊ, ರಾಯರು ಮಾತನ್ನಾಡಿದ್ದರು. ತಪ್ಪೊ ಸರಿಯೊ ಅದನ್ನು ಯೋಚಿಸುವ ಗೊಡವೆಗೆ ಅವರು ಹೋಗಲಿಲ್ಲ.

ಅಳುತ್ತಿದ್ದ ಬನಶಂಕರಿಯ ಕೆದರಿದ ಗುಂಗುರು ಕೂದಲನ್ನು ರಾಯರ ಬೆರಳುಗಳು ಮುಟ್ಟಿದುವು. ಧರ್ಮಕ್ಷೌರಿಕನ ಕತ್ತಿಗೆ ಆಹುತಿಯಾಗದೆ ಉಳಿದಿದ್ದ ಆ ಕೂದಲನ್ನು ಅಂತೂ ಒಬ್ಬರು ಮುಟ್ಟಿದರು.

ಸದ್ದು ನಿಂತಿತು, ಅಳು ನಿಲ್ಲಲಿಲ್ಲ.

ಆದರೆ ಅಮ್ಮಿ ವಾಸ್ತವ ಭೂಮಿಗೆ ಇಳಿದಳೇನೊ ! ಆಕೆ ಧಿಗ್ಗನೆದ್ದು ದೂರ ನಿಂತಳು.

ಕಸಿವಿಸಿಗೊಂಡ ಮನಸಿನಿಂದ ರಾಯರೂ ಎದ್ದರು.

"ತಪ್ಪು ತಿಳ್ಕೋಬೇಡ ಬನಶಂಕರಿ…ನನ್ನ ಒತ್ತಾಯವಿಲ್ಲ……ನಾಳೆಯೋ ನಾಡಿದ್ದೋ ಹೇಳು…" ಎನ್ನುತ್ತ ಅವರು ಅಲ್ಲಿಂದ ಹೊರಟುಹೋದರು.

ಅಳುತ್ತಿದ್ದ ಶಿಲಾಪ್ರತಿಮೆಯಾಗಿ ಅಮ್ಮಿ ಅಲ್ಲೆ ನಿಂತಳು. ಜುಳುಜುಳು ಸದ್ದು ಮಾಡಿತು ಹರಿಯುತ್ತಿದ್ದ ಭದ್ರಾನದಿಯ ನೀರು. ದೂರದಲ್ಲಿ ಸೇತುವೆಯ ಮೇಲಿಂದ ಒಂದು ಎತ್ತಿನ ಗಾಡಿ ಗಡಗಡನೆ ಆಚೆಯ ದಡಕ್ಕೆ ಸಾಗಿತು. ಪೂರ್ವ ದಿಕ್ಕಿನಲ್ಲೆಲ್ಲೋ ದೂರದಲ್ಲಿ ಉದಯಿಸುತ್ತಿದ್ದ ಸೂರ್ಯನ ಹಸಿ ಕಿರಣಗಳು ತೂರಿಬಂದುವು. ಅಲ್ಲಿ ಇಲ್ಲಿ ಒಬ್ಬೊಬ್ಬರಾಗಿ ಬಂದ ಜನರ ಆಕೃತಿಗಳು ಕಾಣಿಸಿಕೊಂಡುವು. ಅಮ್ಮಿಯೇನೋ ಕದಲದೆ ನಿಂತಳು. ಎದುರಿಗಿದ್ದುದು ಅಪಾರವೆಂಬ ಭ್ರಮೆ ಹುಟ್ಟಿಸುತ್ತಿದ್ದ ಜಲರಾಶಿ. ಅದರ ಮುಂದೆ ನಿಶ್ಚೇತನಳಾಗಿದ್ದಳು ಅಮ್ಮಿ.

ತನಗೆ ರಕ್ಷಣೆ ಕೊಟ್ಟಿದ್ದ ಶಾಸ್ತ್ರಿಗಳ ಮನೆಯ ಬಟ್ಟೆಗಳ ರಾಶಿ ಮೂಕವಾಗಿ ಆಕೆಯನ್ನೆ ನೋಡುತ್ತಿತ್ತು.

## ೧೦

ಎರಡು ಮೂರು ದಿನಗಳಲ್ಲ, ಆರೇಳು ದಿನಗಳಾಗಿದ್ದುವು—ನದಿಯ ದಂಡೆಯಲ್ಲಿ ನಾರಾಯಣರಾಯರೊಡನೆ ಅಮ್ಮಿ ಮಾತನಾಡಿ. ಆಮೇಲೆ ಅತ್ತ ಹೋಗುವ ಸಾಹಸ ಮಾಡಿರಲ್ಲಿಲ್ಲ ಆಕೆ. ತಾನು ಏನು ಉತ್ತರ ಹೇಳಬೇಕೆಂಬುದೇ ಅವಳಿಗೆ ತಿಳಿಯದಾಗಿತ್ತು. ದೊಡ್ಡ ಸಮಸ್ಯೆಯಾಗಿ ಕುಳಿತಿತ್ತು ಅಮ್ಮಿಯ ಬದುಕು. ಅದಕ್ಕೆ ಆಕೆಯೇ ಪರಿಹಾರ ಹುಡುಕಬೇಕು. ಅದನ್ನು ಹುಡುಕುವಷ್ಟು, ಯೋಚಿಸುವಷ್ಟು ಚೈತನ್ಯವೂ ಅವಳಲ್ಲಿ ಉಳಿದಿರಲಿಲ್ಲ, ಯಾರೊಡನಾದರೂ ಅದನ್ನು ಕುರಿತು ಮಾತನಾಡಬೇಕು ಆಕೆ. ಯಾರೊಡನೆ? …ಇಲ್ಲ, ಸುಂದರಮ್ಮನೊಡನೆ ಆ ವಿಷಯವೆತ್ತುವುದು ಸಾಧ್ಯವೇ ಇರಲಿಲ್ಲ. ಅಜ್ಜಿಯ ಮರಣದ ದಿನ ಮುಂಜಾವದಲ್ಲಿ ನಾರಾಯಣರಾಯರು ಅಮ್ಮಿಯ ಮನೆಯ ಒಳಕ್ಕೆ ಬಂದಿದ್ದರು. ಅದನ್ನೂ ಸುಂದರಮ್ಮನಿಗೆ ಅಮ್ಮಿ ಹೇಳಿಯೇ ಇರಲಿಲ್ಲ. ಅನಂತರ ನದೀ ದಂಡೆಯ ಮಾತುಕತೆ…ಯಾವುದೂ ಸುಂದರಮ್ಮನಿಗೆ ಗೊತ್ತಿರಲಿಲ್ಲ.

ಸ್ವಲ್ಪ ದಿನಗಳಲ್ಲೆ ಸುಂದರಮ್ಮ ಓಡಾಡತೊಡಗಿದಳು. ತನ್ನ ಸೇವೆಯಲ್ಲಿ ಎಷ್ಟೊಂದು ಸೊರಗಿಹೋಗಿದ್ದಳು ಬನಶಂಕರಿ!

"ಅಂತೂ ನನ್ನ ಬಾಣಂತನ ನಿನಗೊಂದು ಕತ್ತೆ ದುಡಿತ ಆಗ್ಹೋಯ್ತಲ್ಲೇ…"

"ಎಂಥ ಮಾತಕ್ಕ!"

ಅವಳು ಹಾಗೆಯೇ, ಆ ಅಮ್ಮಿ. ಬಲಿಕೊಡಲು ಗೊತ್ತಾದ ಯಜ್ಞ ಪಶುವಿನ ಹಾಗೆ. ಸಾಧು ಪ್ರಾಣಿ. ಒಂದು ಆಸೆ, ಒಂದು ಬಯಕೆ, ಬಾಯಿ ತೆರೆದು ಒಂದು ಮಾತು?……

ಗೆಳತಿಯ ಹೃದಯದೊಳಗಿನ ಕೋಲಾಹಲವನ್ನು ಸುಂದರಮ್ಮ ತಿಳಿಯದೇ ಹೋದಳು. ಅಮ್ಮಿಯ ಹಿತಚಿಂತನೆಯನ್ನೇ ಯಾವಾಗಲೂ ಮಾಡುತ್ತಿದ್ದ ಆಕೆ, ತನ್ನ ಗೆಳತಿಯ ಜೀವನದ

ಆ ಸಂದಿಗ್ಧ ಕಾಲದಲ್ಲಿ ಏನನ್ನೂ ಮಾಡಲಾರದೇ ಹೋದಳು.

ಎವೆಗೆ ಎವೆ ಆತುಕೊಳ್ಳದೇ ಹೋದ ರಾತ್ರೆಗಳು...ಸ್ವಲ್ಪ ಹೊತ್ತು ನಿದ್ದೆ ಬಂದರೂ ಭೀಕರವೆನಿಸುವ ಕನಸುಗಳು......ಯಾರೋ ತನ್ನ ತಲೆಗೂದಲನ್ನು ಕರಕ್ ಕರಕ್ ಎಂದು ಕತ್ತರಿಸಿದ ಹಾಗೆ. ಗರ್ಭಿಣಿಯಾದ ತಾನು ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುತ್ತಿದಾಗ ಯಾರೋ ತನ್ನ ಬಸಿರಿನತ್ತ ಬೊಟ್ಟುಮಾಡಿ ವ್ಯಂಗ್ಯೋಕ್ತಿಯಾಡಿದ ಹಾಗೆ. ಅಂತಹ ದುಃಸ್ವಪ್ನ ಬಿದ್ದಾಗ ಗಾಬರಿಯಾಗಿ ಅಮ್ಮಿ ಎಚ್ಚರಗೊಳ್ಳುತ್ತಿದ್ದಳು...ಆಮೇಲೆ ನಿದ್ದೆ ಬರುತ್ತಿರಲಿಲ್ಲ.

ಆಕೆಯ ತೋಳಿನ ತಲೆದಿಂಬು ಪ್ರತಿ ರಾತ್ರೆಯೂ ತೋಯ್ದು ಹೋಗುತ್ತಿತ್ತು. ಆ ದಿಂಬಿಗೆ ತಲೆ ತಗಲಿದಾಗ ದೇಹದ ಅಂಗಾಂಗಗಳೆಲ್ಲ ಎಚ್ಚರಗೊಂಡು ಚಡಪಡಿಸುತ್ತಿದ್ದುವು. ತನ್ನ ಮುಂಗುರುಳನ್ನು ನಾರಾಯಣರಾಯರ ಕೈ ತೀಡಿದ ಹಾಗಾಗುತ್ತಿತ್ತು. ಅದೇ ಕೈ ತನ್ನ ಮೈದಡವಿದ ಹಾಗೆಯೂ ಭಾಸವಾಗುತ್ತಿತ್ತು. ಅಮ್ಮಿ ಸೆರಗನ್ನು ಬಾಯಿಗೆ ತುರುಕಿ ಹಲ್ಲುಕಚ್ಚಿ ಅತ್ತಿದಿಂತ್ತ ಹೊರಳಿ ಆಗ ಸಂಕಟಪಡುತ್ತಿದ್ದಳು.

ಆ ರಾತ್ರೆ ದೀಪವಾರಿಸಿ ಬಹಳ ಹೊತ್ತಾಗಿತ್ತು. ಆದರೂ ಶಾಸ್ತ್ರಿದಂಪತಿ ಎಚ್ಚರ ವಾಗಿಯೇ ಇದ್ದರು. ಪಿಸು ಮಾತುಕತೆ ನಡೆಯುತ್ತಿತ್ತು. ತನ್ನದಲ್ಲದ ಆ ಪ್ರಪಂಚದ ಬಗೆಗೆ ಸಾಮಾನ್ಯವಾಗಿ ಅಮ್ಮಿ ಆಸಕ್ತಿ ತೋರಿಸುತ್ತಿರಲಿಲ್ಲ. ಆದರೆ ಈ ಸಾರೆ ಕತ್ತಲೆಯ ಗಾಳಿ 'ನಾರಾಯಣರಾಯ' ಎಂಬ ಪದವನ್ನು ಹೊತ್ತು ತಂದಿತ್ತು. ಅಮ್ಮಿ ಸದ್ದಿಲ್ಲದೆ ಎದ್ದು, ಗೋಡೆಯ ಬದಿಗೆ ಸರಿದು, ಉಸಿರು ಬಿಗಿಹಿಡಿದು ಕುಳಿತಳು.

"ನನಗೆ ಆಶ್ಚರ್ಯವಾಯ್ತು. ಖಂಡಿತ ಸುಳ್ಳು ಅಂತ ರೇಗಾಡ್ದೆ."

"ಅಲ್ಲ, ನನಗೇನೂ ಹೇಳೇ ಇಲ್ವಲ್ಲಾ ಆಕೆ. ನನ್ನಿಂದ ಏನೂ ಬಚ್ಚಿಡೋದೂಂತ್ಲೇ ಇಲ್ಲಾಂದ್ರೆ."

"ಆದರೆ ಈ ವಿಷಯ ಹೇಳೋದಾದ್ರೂ ಏನೂಂತ ?"

"ಎಂಥ ಗ್ರಹಚಾರ ಬಂತಪ್ಪ !"

"ನದಿಗಂತೂ ಆಕೆ ನಸುಕ್ನಲ್ಲೇ ಹೋಗ್ತಿದ್ಲು."

"ಹೌದೂಂದ್ರೆ."

"ಆ ನಾರಾಯಣರಾಯ—"

ಕೇಳುತ್ತಲಿದ್ದ ಅಮ್ಮಿಯ ಶರೀರದ ಸಮಸ್ತ ವ್ಯಾಪಾರಗಳೂ ಸ್ತಬ್ಧವಾದುವು ಕ್ಷಣ ಹೊತ್ತು.

"ಅಷ್ಟು ಕೆಟ್ಟವ್ನೇನು ಆತ ?"

"ಹಾಗೇನೂ ಇಲ್ಲ. ಸ್ವಲ್ಪ ರಸಿಕಾಂತಿಟ್ಕೊ—ಒಂದು ರೀತೀಲಿ ಒಳ್ಳೇವ್ನೆ. ಅಲ್ದೆ ಎರಡು ಮೂರು ಹೆಂಡ್ತೀರ್ನ ಕಟ್ಕೊಳ್ಳೋವ್ರಿಗೇನು ಬರಗಾಲ್ವೆ ಈ ಕಾಲ್ದಲ್ಲಿ ?"

"ಆತ್ನೇನು ಬನಶಂಕರೀನ ಮದುವೆಯಾಗ್ತಾನೆ ಅಂತ್ಲೆ ನೀವು ಹೇಳೋದು ?"

ಉತ್ತರ ಕೊಡಲು ರಾಮಶಾಸ್ತ್ರಿ ಯುಗಯುಗಗಳಷ್ಟು ತಡಮಾಡುತ್ತಿದ್ದಂತೆ ಅಮ್ಮಿಗೆ ತೋರಿತು.

"ಮದುವೆ ಎಲ್ಬಂತು ! ಇಟ್ಕೋತಾನೆ ಅಷ್ಟೆ."

"ಅಯ್ಯೋ !"

...ಮದುವೆ—ಇಟ್ಕೋತಾನೆ. ಆಮೇಲೆ ನಿಟ್ಟುಸಿರು...

"ಈಗ್ಲೇ ಏನಾದ್ರೂ ಆಗ್ಬಿಟ್ಟಿದ್ಯೋ ಏನೋ!"

ಸುಂದರಮ್ಮನ ಆ ಮಾತಿನಲ್ಲಿ ಆಗಬಾರದು ಎನ್ನುವ ತವಕ ಇತ್ತು; ಆಗಿದ್ದರೆ ಮುಂದೇನು ಗತಿ—ಎಂಬ ಕಾತರವಿತ್ತು.

"ಯಾಕೆ ಹಾಗಂತೀಯಾ?"

"ಎಷ್ಟೊಂದು ಸೊರಗಿದಾಳೇಂತ!"

"ಇದ್ರೂ ಇದ್ದೀತು."

ಹಾಗಾದರೆ ಈಗಲೇ ಏನೋ ಆಗಿ ಬಿಟ್ಟಿದ್ಯೋ ಏನೋ—ಎಂಥ ಮಾತು! ಅದನ್ನು ಯಾರು ಆಡುತ್ತಿದ್ದುದು!...ಔಡುಗಚ್ಚಿ ಗೋಡೆಗೊರಗಿದಳು ಅಮ್ಮಿ.

"ಏನ್ಮಾಡೋದೂಂದ್ರೆ ಇನ್ನು?"

"ಏನ್ಮಾಡೋಕಾಗುತ್ತೆ? ಅವಳ ಹಣೇಲಿ ಬರೆದಿದ್ದೂಂತ ಸುಮ್ನಿದ್ಬಿಡೋದು."

"ವ್ಯಥೆಯಾಗುತ್ತೇಂದ್ರೆ..."

"ಇನ್ನೇನೆ ಮಾಡೋದು?"

"ಯಾರ್ಜತೇಲಾದ್ರೂ ಮದುವೆಯೇ ಆಗಿದ್ರೆ ಚೆನ್ನಾಗಿತ್ತು."

"ಆಗ್ಲಿಲ್ವಲ್ಲಾ. ಎಷ್ಟೊಂದಾಯಿತು ಪ್ರಯತ್ನ ಪಟ್ಟದ್ದು..."

ಮತ್ತೆ ನಿಟ್ಟುಸಿರು,...ದೀರ್ಘ ಕಾಲದ ಮೌನ...

"ಅಯ್ಯೋ ಬೇಡಿ."

"ಇಲ್ವೇ!"

"ಅಲ್ಲೇ ಮಲಗಿ."

"ಹೂನಮ್ಮಾ ಹೂಂ."

...ಆದಿ ಅಂತ್ಯಗಳಿಲ್ಲದ ಕಾಲ ಮೌನದ ಬಲೆ ನೇಯುತ್ತಿತ್ತು.

ಯೋಚಿಸಿ ಮಾತನಾಡಿದ ಹಾಗೆ ರಾಮಶಾಸ್ತ್ರಿ ಹೇಳಿದ:

"ನಂಗೇನು ತೋರುತ್ತೆ ಗೊತ್ತೆ? ಆ ಸ್ವಾಮಿ ಕೆಡಿಸಿ ಬೀದಿಗೆ ಕಳಿಸೋದಕ್ಕಿಂತ ಇದೇ ವಾಸಿ. ಸ್ಥಾನ ಮಾನ ಇರೋ ಮನುಷ್ಯ. ಒಂದೆರಡು ದಿವ್ಸ ಮಾತ್ನಾಡಿದ್ಮೇಲೆ ಜನರೂ ಮರೆತ್ಬಿಡ್ತಾರೆ. ಹ್ಯಾಗಾದ್ರೂ ಬದುಕ್ಬೇಕಲ್ಲ ಆಕೆ?"

"ಬಂಗಾರದಂಥ ಜೀವ. ಅಯ್ಯೋ!"

ಆ ಹೊಗಳಿಕೆಯ ಮಾತು ಕೇಳಿದ ಅಮ್ಮಿ, ದುಃಖ ತಡೆಯಲಾರದೆ, ಚಾಪೆಯ ಮೇಲೆ ಮತ್ತೆ ಬಿದ್ದುಕೊಂಡಳು.

ಒಳಗಿನಿಂದ ಸುಂದರಮ್ಮನ ಧ್ವನಿ ಗಟ್ಟಿಯಾಗಿಯೇ ಕೇಳಿಸಿತು:

"ಏನೋ ಸಪ್ಪಳವಾಯ್ತೂಂದ್ರೆ...ಆಕೆ ಎಚ್ಚರವಾಗಿದಾಳೋ ಏನೋ."

"ಗಾಳಿಗೆ ಬೀದೀಲೇನೊ ಸದ್ದಾಗಿರ್ಬೇಕು."

"ಇದ್ದೀತು."

"ಮಲಕೋ ಇನ್ನು. ಮಗೂಗೆ ಹಾಲು ಕುಡಿಸಿದೆಯೇನು?"

"ಹೂಂ..."

—ಆ ಸಂಭಾಷಣೆಯ ಮಾತುಗಳು ತಿರುತಿರುಗಿ ಹಲವಾರು ಬಾರಿ ಅಮ್ಮಿಯ ಕಿವಿಯ ಬಳಿ ಮೊರೆದುವು. ಅಂತೂ ಆ ಮನೆಯ ಋಣಾನುಬಂಧದ ಮುಕ್ತಾಯವಾಗಬೇಕಿನ್ನು... ಇಷ್ಟೊಂದು ದಿನ ಅವರು ರಕ್ಷಣೆ ಕೊಟ್ಟುದೇ ತನ್ನ ಪುಣ್ಯ...ತಾನು ಏನಾದರೊಂದು ತೀರ್ಮಾನಕ್ಕೆ ಆ ರಾತ್ರೆ ಬರಲೇ ಬೇಕು.

...ಇಲ್ಲ, ಈಗ ತೀರ್ಮಾನಕ್ಕೆ ಬರುವುದು ಕಷ್ಟವಾಗಿರಲಿಲ್ಲ. ಕಷ್ಟವೆನ್ನಿಸುವಂಥದೇನೂ ಇರಲಿಲ್ಲ ಆ ಸಮಸ್ಯೆಯಲ್ಲಿ...

ಮನಸಿನ ಹೊಯ್ದಾಟ ನಿಂತ ಹಾಗಾಯಿತು ಅಮ್ಮಿಗೆ.

ಮುಂಜಾವದ ಕೋಳಿ ಕೂಗಿತು.

ಬಹಳ ದಿನಗಳಿಂದ ನಿದ್ದೆಗೆಟ್ಟಿದ್ದ ಅಮ್ಮಿಯ ಕಣ್ಣುಗಳಿಗೆ ಜೊಂಪು ಹತ್ತಿತು.

ಮರುದಿನ ಅಮ್ಮಿ ಸ್ವಲ್ಪ ತಡವಾಗಿಯೇ ಎದ್ದಳು. ಎದ್ದವಳನ್ನು ಕಂಡು ಸುಂದರಮ್ಮ "ಏನೇ, ರಾತ್ರೆ ನಿದ್ದೆ ಚೆನ್ನಾಗಿ ಬಂತೇನೆ ?" ಎಂದಳು.

ಕೃಶವಾಗಿದ್ದ ಅಮ್ಮಿಯ ಮುಖದಲ್ಲಿ ತಿಳಿವಳಿಕೆಯ ಮುಗುಳು ನಗು ಮೂಡಿತು.

"ಹೂನಕ್ಕಾ."

ಎಂದಿನಂತೆ ಮನೆಗೆಲಸದತ್ತ ದೃಷ್ಟಿ ಹಾಯಿಸಿದಳು ಅಮ್ಮಿ. ಸತಿಪತಿಯರ ರಾತ್ರೆಯ ಸಂಭಾಷಣೆಯ ನೆನಪು ಮತ್ತೊಮ್ಮೆ ಆಗುತ್ತಿದ್ದಂತೆ ಸುಂದರಮ್ಮನೆಂದಳು :

"ಆಯಾಸವಾಗ್ತಿದ್ರೆ ಸುಮ್ಸುಮ್ನೆ ಓಡಾಡ್ಬೇಡ ಬನೂ."

ಬನಶಂಕರಿ ಮುಗುಳ್ನಕ್ಕಳು.

"ಏನಕ್ಕಾ ಆಗಿದೆ ನಂಗೆ ?"

ಆ ಪ್ರಶ್ನೆಗೆ ಸುಂದರಮ್ಮನಲ್ಲಿ ಉತ್ತರ ಸಿದ್ಧವಿರಲಿಲ್ಲ. ತನ್ನ ಚಿಂತೆಯ ಮುಖವನ್ನು ಮರೆಮಾಡಲೆತ್ನಿಸುತ್ತಾ ಆಕೆ ಒಳಗೆ ಹೋದಳು.

ಮನೆಗೆಲಸ ದೊಡ್ಡ ವಿಷಯವಾಗಿರಲಿಲ್ಲ. ಆದರೆ ಅಮ್ಮಿ ಮಾಡಬೇಕಾಗಿದ್ದ ಬೇರೊಂದು ಕೆಲಸವಿತ್ತು. ಕಳೆದ ಇಪ್ಪತ್ತೈದು ದಿನಗಳಿಂದ ಕೊಡಲಾಗದೇ ಇದ್ದ ಉತ್ತರವನ್ನು ನಾರಾಯಣರಾಯರಿಗೆ ಕೊಡಬೇಕು. ಬೇಗನೆ ತನ್ನನ್ನು ಕರೆದೊಯ್ಯುವಂತೆ ಅವರಿಗೆ ಹೇಳಬೇಕು...ಆದರೆ ಆ ಹಗಲಲ್ಲಿ ಅದು ಸಾಧ್ಯವಿರಲಿಲ್ಲ. ಮರುದಿನ ಮುಂಜಾವದಲ್ಲೆದ್ದು ನದಿಗೆ ಹೋದರೆ ಮಾತ್ರ ನಾರಾಯಣರಾಯರ ಭೇಟಿ ಸಾಧ್ಯ...

ಹಾಗೆಂದೇ ಆ ದಿನ, ಹೊತ್ತು ಅಮ್ಮಿಯನ್ನು ಅಣಕಿಸುತ್ತ ಎಂದಿಗಿಂತ ಹೆಚ್ಚು ನಿಧಾನವಾಗಿ ಉರುಳಿತು.

ಆ ದಿನವೆಲ್ಲ ರಾಮಶಾಸ್ತ್ರಿ—ಸುಂದರಮ್ಮ ಸಂಕೋಚಪಡುತ್ತ ಬಶನಂಕರಿಯೊಡನೆ ವರ್ತಿಸುತ್ತಿದ್ದರು. ಆದರೆ ಬನಶಂಕರಿ ರಹಸ್ಯಮಯಿಯಾಗಿಯೇ ಉಳಿದಳು.

ರಾತ್ರೆ ಮಲಗಿಕೊಳ್ಳುತ್ತಿದ್ದಾಗ ಅಮ್ಮಿ "ನದಿ ದಂಡೆಗೆ ಹೋಗದೆ ಎಷ್ಟೋ ದಿವಸವಾಯ್ತು ಅಕ್ಕ. ನಾಳೆ ಬೆಳಿಗ್ಗೆ ಒಂದಿಷ್ಟು ಹೋಗ್ಬರ್ತೀನಿ," ಎಂದಳು.

ಉತ್ತರ ಒಮ್ಮೆಲೆ ಬರಲಿಲ್ಲ. ಏನು ಉತ್ತರ ಕೊಡಬೇಕೆಂದೇ ತೋಚಲಿಲ್ಲ ಸುಂದರಮ್ಮನಿಗೆ. ಕೊನೆಗೆ ಆಕೆ "ಹೂಂ" ಎಂದಷ್ಟೇ ಅಂದಳು.

...ಬೆಳಕು ಹರಿಯುವ ಹೊತ್ತಿಗ ನಾರಾಯಣರಾಯರು ನದಿ ದಂಡೆಯ ಮೇಲೆ

ಹಲ್ಲುಜ್ಜುತ್ತ ನಿಂತಿದ್ದರು. ಅಮ್ಮಿ ಹಿಂದಿನಿಂದ ನಡೆದು ಬಂದಳು. ಆಕೆಯನ್ನು ಕಂಡ ರಾಯರು ಆಶ್ಚರ್ಯದಿಂದಲೂ ಸಂತೋಷದಿಂದಲೂ "ಓ" ಎಂದರು.

ನೀರಲ್ಲಿ ಕೈ ತೊಳೆದು, ಲೊಳ ಲೊಳ ಎಂದು ಬಾಯಿ ಮುಕ್ಕಳಿಸಿ ಅವರು ಹೇಳಿದರು :

"ನೀನಿನ್ನು ನನ್ನನ್ನು ನೋಡೋದೇ ಇಲ್ಲಾಂತಿದ್ದೆ."

ಮತ್ತೆ ಹಳೆಯ ವ್ಯಾಧಿಯಾದ ಮೂಕತನ ಅಮ್ಮಿಯನ್ನು ಬಾಧಿಸಿತು.

"ಮಾತಾಡು ಬನಶಂಕರಿ," ಎಂದರು ರಾಯರು.

ಮೌನ.

ರಸಿಕ ರಾಯರು "ಮಾ-ತಾ-ಡ-ಬಾ-ರ-ದೇನೆ," ಎಂದು ರಾಗವೆಳೆದರು.

ಆಗ, ಮುಖದ ಮೇಲೆ ನಗು ಮೂಡಿದರೂ ಅಳಲಿನ ಧ್ವನಿಯಲ್ಲಿ ಅಮ್ಮಿ ಅಂದಳು :

"ನನ್ನ ಉತ್ತರ ಹೇಳೋಣಾಂತ ಬಂದೆ. ಯಾವತ್ತು ಕರಕೊಂಡು ಹೋಗ್ತೀರಾ ?"

"ನಿಜವಾಗ್ಲೂ ?!"

"ಯಾವತ್ತು ಕರಕೊಂಡು ಹೋಗ್ತೀರಾ ?"

"ಓ! ಬನೂ, ನೀನು ಬರ್ತೀಂತ ನನಗೆ ಗೊತ್ತೇ ಇತ್ತು. ನನ್ಮಾತು ನೀನು ತೆಗೆದ್ಹಾಕೋಲ್ಲಾಂತ ನಂಬಿಕೆ ಇತ್ತು."

ರಾಯರ ಸ್ವರದ ಸುಖಕಂಪನ ಕಂಡು ಅಮ್ಮಿಯ ಹೃದಯ ಹಿಗ್ಗಿತು. ರಾಯರು ತನ್ನ ಕೈ ಹಿಡಿಯಬಹುದಿನ್ನು. ಮುಂಗುರುಳು ನೇವರಿಸಬಹುದು. ಏನು ಮಾಡುವ ಸ್ವಾತಂತ್ರ್ಯವೂ ಇದೆ ಅವರಿಗೆ...ಅಮ್ಮಿ ಕಣ್ಣು ಮುಚಿಕೊಂಡಳು. ತನಗಾಗದೆ ಇದ್ದ ಅನುಭವದ ನಿರೀಕ್ಷೆಯಲ್ಲಿ ಅವಳು ನಿಂತಳು.

ಆದರೆ ರಾಯರು ಅಮ್ಮಿಯ ಕೈ ಹಿಡಿಯಲಿಲ್ಲ.

ಬದಲು "ಕೊತ್ಕೋ" ಎನ್ನುತ್ತಾ ತಾನೊಂದು ಬಂಡೆಯ ಮೇಲೆ ಕುಳಿತರು. ಅಮ್ಮಿಯೂ ಕುಳಿತಳು ಸ್ವಲ್ಪ ದೂರದಲ್ಲೆ. ಅವರೆಂದರು :

"ಅಂತೂ ನೀನು ಒಪ್ಕೊಂಡೆ. ಇವತ್ತು ಸಂಜೀನೆ ಕರಸ್ಕೊತೀನಿ. ಮನೆ ಅವತ್ತಿಂದಾನೆ ನಿನ್ನ ಹಾದಿ ನೋಡ್ತಿದೆ. ಒಬ್ಬ ಮುದುಕ ಆಳು ಮಗನ್ನ ಅಲ್ಲಿ ಇಟ್ಟಿದೀನಿ...ಆ ಮನೆಗೆ ನೀನೇ ರಾಣಿ...ನೀನು ಬಾ ಎಂದಾಗ ಬರ್ತೀನಿ ; ಹೋಗು ಎಂದಾಗ ಹೋಗ್ತೀನಿ..."

ಆ ಭಾಷೆ ಹೊಸತಾಗಿತ್ತು ಅಮ್ಮಿಗೆ. ವಿಚಿತ್ರವಾಗಿತ್ತು. ಆದರೂ ಇಂಪಾಗಿತ್ತು.

ಮಾತು ಮುಂದುವರಿಸುತ್ತ ರಾಯರು, ತನ್ನ ಪ್ರೇಮಕ್ಕೆ ಎಂದೂ ಚ್ಯುತಿ ಇಲ್ಲವೆಂದು ದೂರ ದೂರದ ದೇವರಾಣೆ ಮಾಡಿ ಹೇಳಿದರು.

"ನಿನ್ನ ವಿಷಯ ಒಬ್ಬರು ಒಂದು ಚಕಾರ ಕೂಡಾ ಎತ್ತದ ಹಾಗೆ ಮಾಡ್ತೀನಿ. ಮಠದವರು, ಹೊರಗಿನವರು, ಯಾರೂ ನಿನ್ನ ವಿಷಯ ಒಂದು ಮಾತೂ ಅನ್ನೋದಿಲ್ಲ ಇನ್ನು. ನಿನಗೆ ಯಾವುದ್ರಲ್ಲೂ ಕಡಿಮೆ ಆಗದ ಹಾಗೆ ನೋಡ್ಕೋತೀನಿ."

ತೀರ ಹಸಿದವರು ತಿನಿಸಿಗೆ ಕೈಯೊಡ್ಡುವ ಹಾಗೆ ಅಮ್ಮಿ ರಾಯರ ಆಶ್ವಾಸನೆಯ ಒಂದೊಂದು ಪದವನ್ನೂ ಆತುರ ಆತುರವಾಗಿ ನುಂಗಿದಳು.

...ತಂದಿದ್ದ ಎರಡು ಬಟ್ಟೆ ಹಿಂಡಿಕೊಂಡು ಅಮ್ಮಿ ಹಗುರ ಹೆಜ್ಜೆಗಳನ್ನಿಡುತ್ತಾ ಮನೆಗೆ ಬೇಗಬೇಗನೆ ನಡೆದು ಹೋದಳು.

ಅಲ್ಲಿ ರಾಮಶಾಸ್ತ್ರಿ ಸ್ನಾನದ ಮನೆಗೆ ಹೊರಟು ನಿಂತಿದ್ದ. ಅಮ್ಮಿ ಬಟ್ಟೆಗಳನ್ನು ಅಲ್ಲೆ ಹಗ್ಗದ ಮೇಲಿರಿಸಿ, ಆತನ ಪಾದ ಮುಟ್ಟಿ ನಮಸ್ಕಾರ ಮಾಡಿದಳು. ಆ ಪ್ರಣಾಮವಾಗಲೀ ಮುಂದಿನ ಮಾತಾಗಲೀ ಆತನಿಗೆ ಅನಿರೀಕ್ಷಿತವಾಗಿರಲಿಲ್ಲ.

ಗದ್ಗದ ಕಂಠದಿಂದ ಅಮ್ಮಿ ಅಂದಳು :

"ನನ್ನಣ್ಣನ ಹಾಗೆ ನೀವು ನನ್ನನ್ನು ಕಾಪಾಡಿದ್ರಿ. ಇವತ್ತು ಹೊರಡ್ತೀನಿ. ಆಶೀರ್ವದಿಸ್ಬೇಕು."

ರಾಮಶಾಸ್ತ್ರಿ ನಿರುತ್ತರನಾದ. ಅವನ ಕಣ್ಣುಗಳು ಮಂಜಾದುವು. ಆ ದೃಶ್ಯವನ್ನು ನೋಡುತ್ತ ಅಡುಗೆಮನೆಯಿಂದ ಹೊರಬಂದ ಸುಂದರಮ್ಮನ ಪಾದ ಮುಟ್ಟಲು ಅಮ್ಮಿ ಮುಂದಾದಳು.

"ಇದೇನ್ಮಾಡ್ತಿದೀಯಾ ?" ಎಂದು ಪ್ರತಿಭಟಿಸಿದಳು ಸುಂದರಮ್ಮ. ಅಮ್ಮಿಯನ್ನು ಎರಡೂ ಕೈಗಳಿಂದೆತ್ತಿ ಆಕೆ ಎದೆಗೆ ಅವಚಿಕೊಂಡಳು.

ಅವರನ್ನು ಅಲ್ಲೇ ಬಿಟ್ಟು ರಾಮಶಾಸ್ತ್ರಿ ಸ್ನಾನದ ಮನೆಗೆ ಹೋದ. ಪ್ರಯಾಸಪಡುತ್ತ ಅಮ್ಮಿ ಮಾತನಾಡಿದಳು :

"ಅವರು ಬಾ ಅಂದಿದಾರೆ : ಹೊರಟ್ಹೋಗ್ತೀನಕ್ಕ. ಹೀಗೆಯೇ ಇರೋದ್ಕಾಗುತ್ತಾ ? ಸಾಯೋದು ತಪ್ಪೂಂತ ಯಾವಾಗ಼್ಲೂ ನೀನು ಹೇಳ್ತಿದ್ದೆ. ಹಾಗಾದ್ರೆ ಬದುಕ್ಬೇಕು. ಬದುಕ್ಬೇಕಾದ್ರೆ ಬೇರೆ ಹಾದೀನೇ ಇಲ್ಲ. ಒಳ್ಳೇದೊ ಕೆಟ್ಟದ್ದೊ, ಧರ್ಮವೊ ಅಧರ್ಮವೊ ನನಗೆ ಗೊತ್ತಿಲ್ಲ ಅಕ್ಕ. ಬಾ ಅಂತ ಕರೆದಿದಾರೆ. ಹೋಗ್ತೀನಿ...ಇಷ್ಟು ದಿವ್ಸ ನಿನ್ನಿಂದಾಗಿ ಜೀವ ಹಿಡಿದಿದ್ದೆ ಅಕ್ಕ. ಈ ಋಣ ಈ ಜನ್ಮದಲ್ಲಿ ತೀರ್ಸೋಕಾಗಲ್ಲ...ನನ್ನನ್ನು ಮರಿಬೇಡ ಅಕ್ಕ... ಆಗಾಗ್ಗೆ ಸಿಗ್ತಿರು ಅಕ್ಕ...ನನ್ನನ್ನು ಕ್ಷಮಿಸು ಅಕ್ಕ...

"ನೀನು ಕ್ಷಮಿಸ್ಬೇಕಾದ್ದು ನಮ್ಮನ್ನ ತಾಯಿ," ಎಂದಳು ಸುಂದರಮ್ಮ. "ತಪ್ಪು ಮಾಡಿರೋರು ನಾವು. ಕಟ್ಟಳೆ ಶಾಸನ ಅಂತ ಬಡ್ಕೋತಾ ಇದೀವಲ್ಲ-ನಮ್ಮದು ತಪ್ಪು..."

—ಆ ದಿನ ಅಮ್ಮಿಯ ಅಳಲಿನ ಒರತೆ ಒಣಗಲಿಲ್ಲ. ಹೊಸ ಅಧ್ಯಾಯಕ್ಕೆ ಅದರ ಅಗತ್ಯವಿಲ್ಲವೆಂದೋ ಏನೋ, ಕಣ್ಣೀರಿನ ಕಡಲನ್ನು ಅಲ್ಲೇ ಬತ್ತಿಸಿ ಹೋಗಲು ಆಕೆ ಸಿದ್ಧವಾಗಿದ್ದಳು.

ಹಗಲು ಹತ್ತು ಕೆಲಸಗಳ ನಡುವೆ ಸಮಯ ಕಳೆಯಲೆಂದು ಹತ್ತು ಮಾತುಗಳು ಹೊರಟುವು.

"ಮೊನ್ನೆ ರಾತ್ರೆ ನೀವು ಮಾತಾಡ್ಕೊಂಡಿದ್ದೆಲ್ಲಾ ಕೇಳಿಸ್ತು ಅಕ್ಕಾ...ನಂಗೆ ನಿದ್ದೆ ಬಂದಿರ್ಲಿಲ್ಲ ?

"ನಾನೂ ಹಾಗೇ ಅಂದ್ಕೊಂಡೆ ಬಿಸೂ...ಏನೋ ಮಾತಾಡಿದ್ವಿ. ಮನಸ್ನಲ್ಲಿ ಇಟ್ಕೋಬೇಡವಮ್ಮಾ..."

"ಅಂಥಾದ್ದೇನೂ ನೀವು ಹೇಳಿಲ್ಲ ಅಕ್ಕ. ತಪ್ಪೇನಿತ್ತು ಅದರಲ್ಲಿ ?"

"ಏನೋ ಗಾಬರಿಯಾಗಿ ಹಾಗೆ ಮಾತಾಡ್ದೆ."

"ಆದರೆ ಒಂದು ವಿಷಯ ಅಕ್ಕ. ನಾನು ಎಳೇಮಗು ಆಗಿದ್ದಾಗ ಹ್ಯಾಗಿದ್ನೋ ಹಾಗೇ ಇದೀನಿ ಇನ್ನೂ."

ಅಮ್ಮಿಯ ಮುಖ ನೋಡುವ ಧೈರ್ಯವಾಗಲಿಲ್ಲ ಸುಂದರಮ್ಮನಿಗೆ. ಅಮ್ಮಿ ಮುಖ ವೆತ್ತಲೂ ಇಲ್ಲ.

ಮಧ್ಯಾಹ್ನ ಊಟ ಮುಗಿಸಿ ಹೊರಬಿದ್ದಾಗ ರಾಮಶಾಸ್ತ್ರಿ ಹೇಳಿದ :

" ಸಂಜೆ ನಾನು ಬೇಗ್ನೆ ಬರ್ತೀನೊ ಇಲ್ವೊ ? "

ಬರುವ ಇಷ್ಟವೂ ಇರಲಿಲ್ಲ ಅವನಿಗೆ. ಕತ್ತಲಾದ ಮೇಲೆ ಹೊರಡಬೇಕಾಗಿದ್ದ ಅಮ್ಮಿ ಯನ್ನು ಬೀಳ್ಕೊಡುವ ಪ್ರಸಂಗದಿಂದ ತಪ್ಪಿಸಿಕೊಳ್ಳಬೇಕೆಂದೇ ಆತ ನಿರ್ಧರಿಸಿದ್ದ.

" ಇವತ್ತೇ ಹೊರಡ್ತೀಯಾ ಬನಶಂಕರಿ ? ...ಆಗಲಮ್ಮಾ... ನಿನಗೆ ಕಲ್ಯಾಣವಾಗಲಿ. ನಮ್ಮನ್ನು ಮರೀಬೇಡವಮ್ಮ. ಬರ್‍ತಾ ಇರು ಆಗಾಗ್ಗೆ..."

ಅಮ್ಮಿಯ ಒಣಗಿದ್ದ ತುಟಿಗಳೆಡೆಯಿಂದ ಕ್ಷೀಣ ಸ್ವರ ಹೊರಟಿತು :

" ಆಗಲಿ ಅಣ್ಣಾ."

ಬನಶಂಕರಿ ಅವರ ದೊಡ್ಡ ಮಗುವನ್ನೆತ್ತಿಕೊಂಡು ಮುದ್ದಾಡಿದಳು. ಮಗುವಿನ ತೊದಲು ಮಾತುಗಳನ್ನು ಕೇಳುತ್ತ ಕೇಳುತ್ತ ' ಇನ್ನು ಈ ಸುಖ ನನಗಿಲ್ವಲ್ಲಾ ' ಎಂದು ದುಃಖಪಟ್ಟಳು.

" ಅಲ್ಲಿ ನನ್ಗಿನ್ನು ಬೇಸರವಾಗುತ್ತಕ್ಕಾ."

" ಏನೋ ನಾಲ್ಕು ದಿನ. ಆಮೇಲೆ ಸರ್ಹೋಗುತ್ತೆ."

" ಈ ಮಗೂನ ಕರಕೊಂಡು ಹೋಗ್ಲೆ ?"

" ಹೋಗು ಬೇಕಾದ್ರೆ...!"

ಸುಂದರಮ್ಮ ನಕ್ಕಳು. ನಾಳೆಯ ಬದುಕಿನಲ್ಲಿ ಮೊದಮೊದಲು ಮಗುವನ್ನಾಡಿಸುವ ತೊಂದರೆ ಇರಕೂಡದು ; ಆಮೇಲೆ ಆ ತೊಂದರೆಯೇ ಪರಮ ಸುಖ. ಹಾಗೆಂದು ಬನಶಂಕ ರಿಗೆ ಹೇಳಬೇಕೆನಿಸಿತು. ಆ ಮಾತು ನಾಲಿಗೆಯ ತುದಿಯ ವರೆಗೂ ಬಂತು. ಆದರೆ, ಅದು ಕಾಲೋಚಿತವಲ್ಲ ಎಂದಿತು ವಿವೇಕ. ಸುಂದರಮ್ಮ ನಾಲಿಗೆಯನ್ನು ಬಿಗಿಹಿಡಿದಳು...ಬನಶಂಕರಿ ಗಂಡನ ಮನೆಗೆ ಹೊರಟು ನಿಂತಿದ್ದರೆ, ಹಾಂಗೆದು ಸಮಾಜದ ಮುಂದೆ ಜಾಹೀರಾಗಿದ್ದರೆ, ಅಂಥ ಮಾತನ್ನು ಆಡಬಹುದಿತ್ತು. ಆಗ ಅದು ಸಮಯೋಚಿತವಾಗುತ್ತಿತ್ತು. ವಧುವಿನ ಲಜ್ಜೆಗೊಂಡ ಮುಖದ ನಸುಗೆಂಪನ್ನು ಕಂಡು ಲೇವಡಿಮಾಡಬಹುದಿತ್ತು...ಆದರೆ ಬನಶಂಕ ರಿಯ ವಿಷಯದಲ್ಲಿ ಹಾಗೆ ಮಾಡುವುದು ಸಾಧ್ಯವಿರಲಿಲ್ಲ.

' ನನ್ಚಿನ್ನಾ ' ಎಂದು ಮಗುವಿನ ಮೇಲೆ ಮುತ್ತಿನ ಮಳೆಗರೆಯುತ್ತ ಬನಶಂಕರಿ " ಬೇಡವಪ್ಪಾ ಬೇಡ. ಅಮ್ನತ್ರಾನೇ ಇರ್‍ಲಿ ನನ್ಚಿನ್ನ " ಎಂದಳು.

ಸುಂದರಮ್ಮ ತೊಟ್ಟಿಲಿನಿಂದ ಎದೆಗೂಸನ್ನು ಎತ್ತಿ ತಂದಳು.

' ಬನಶಂಕರಿ ' ಎಂದು ಹೆಸರು ತಳೆದಿದ್ದ ಮಗು,

" ಒಂದು ಮಾತು ನಡಸ್ಕೊಡು ಅಕ್ಕ...ದಯವಿಟ್ಟು ಮಗೂಗೆ ಬೇರೆ ಒಳ್ಳೇ ಹೆಸರಿಡು."

" ಮುಂದೆ ಆಕೆಯ ಗಂಡ ಇಡ್ತಾನೆ."

" ಹಾಗಲ್ಲ—"

" ಅದೂ ಏನೂಂತ ಗೊತ್ತೆ ?"

"..........."

"ಅಮ್ಮೀ—ಅಂತ !"

"ಹೋಗಕ್ಕ..."

"ಯಾವ ಮೂಲೇಲಿ ಮನೆಮಾಡಿದಾರೋ ನಾರಾಯಣರಾಯರು ?"

"ಗೊತ್ತಿಲ್ಲ ಅಕ್ಕ."

"ಅಂತೂ ಹುಷಾರಾಗಿರ್‍ಬೇಕಮ್ಮ."

"ಹೇಗೆ ಹುಷಾರಾಗಿ ಇರ್‍ಬೇಕೂಂತ ಇಷ್ಟು ವರ್ಷ ನೀನೇ ಅಲ್ವ ಅಕ್ಕ ತರಬೇತಿ ಕೊಟ್ಟಿರೋದು ?"

"...ಇದೇ ಊರಲ್ಲೇ ಇರ್‍ತೀಯಲ್ಲ. ಅದೇ ಸಮಾಧಾನ."

ಕತ್ತಲಾಯಿತು. ದೇವಸ್ಥಾನಕ್ಕೆ ಸೇರಿದ್ದ ಗಾಡಿಯೊಂದು ಬಂದು ರಾಮಶಾಸ್ತ್ರಿಯ ಮನೆಯ ಮುಂದೆ ಬೀಡುಬಿಟ್ಟಿತು. ಎತ್ತರದ ಕಮಾನಿತ್ತು ಗಾಡಿಗೆ. ಅದೇ ವರ್ಷ ಹಾಸನದ ಜಾತ್ರೆಯಿಂದ ಹೊಸತಾಗಿ ಕೊಂಡು ತಂದಿದ್ದ ಸೊಗಸಾದ ಹೋರಿಗಳು. ಅಲ್ಲಿ ಬಾಲ ಬೀಸಿಕೊಂಡು ಒಣಹುಲ್ಲು ಮೇಯುತ್ತಾ, ಅವು ನಿಂತಿದ್ದರೆ, ಅವುಗಳ ಕೊರಳ ಹಾರ ವಾಗಿದ್ದ ಸಾಲುಘಂಟೆಗಳ ಟಿಣ್ ಟಿಣ್‌ನಾದ ಸಂಗೀತದ ಅಲೆಗಳ ಹಾಗೆ ಕಿವಿಯ ದಂಡೆ ಯನ್ನುಪ್ಪುತ್ತಿತ್ತು.

ನಾರಾಯಣರಾಯರು ಬಂದರು. ಅವಸರ ದುಗುಡ ತವಕಗಳನ್ನೆಲ್ಲ ಬದಿಗಿರಿಸಿ ಶಾಂತವಾದ ಸ್ವರದಲ್ಲಿ, ರಾಮಶಾಸ್ತ್ರಿಯ ಪತ್ನಿಯನ್ನುದ್ದೇಶಿಸಿ, "ಚೆನ್ನಾಗಿದ್ದೀರಾ ?" ಎಂದರು ; "ರಾಮಶಾಸ್ತ್ರಿ ಎಲ್ಲಿ ?" ಎಂದು ಕೇಳಿದರು.

"ಯಾರೋ ಸ್ನೇಹಿತರನ್ನ ನೋಡ್ಬೇಕೂಂತ ಮಧ್ಯಾಹ್ನವೇ ಹೋದ್ರು...ನಾನು ಚೆನ್ನಾಗಿದೀನಿ."

ಸುಖವೊ ದುಃಖವೊ ಎನ್ನಲಾರದೊಂದು ಭಾವನೆಯ ಗುಂಗಿನಲ್ಲಿ ಬಾಗಿಲ ಮರೆಯಲ್ಲಿ ಅಮ್ಮಿ ನಿಂತಿದ್ದಳು. ರಾಯರ ದೃಷ್ಟಿಗೆ ಆಕೆ ಬೀಳದಿರಲಿಲ್ಲ.

ನಿರ್ದಿಷ್ಟವಾಗಿ ಯಾರನ್ನೂ ಉದ್ದೇಶಿಸದೆ ಅವರೆಂದರು :

"ಇನ್ನೊಂದು ಘಂಟೆಯೊಳಗಾಗಿ ಗಾಡಿ ಕಟ್ತಾನೆ. ನಾನು ಮೊದ್ಲೇ ಹೋಗಿರ್‍ತೀನಿ ಬರ್‍ಲಾ ನಾನು ?"

ಉತ್ತರಕ್ಕೆ ಅವಕಾಶವಿಲ್ಲದ ಹಾಗೆ ಬೀದಿಗಿಳಿದು ಅವರು ನಡೆದೇಬಿಟ್ಟರು.

ಅಮ್ಮಿ ತನ್ನ ಸಣ್ಣ ಪುಟ್ಟ ಸಾಮಾನುಗಳ ಗಂಟು ಕಟ್ಟಿದಳು...ಜೀವನಹಳ್ಳಿಯಿಂದ ಹೊರಟುಬಂದ ಆ ದಿನ...ಕಾವೇರಿ...ಧರ್ಮಾವರ ಸೀರೆ—

ಇನ್ನೂ ಉಳಿದಿತ್ತು ಆ ಸೀರೆ. ಚಳಿಗಾಲದಲ್ಲಿ ಕಂಬಳಿಯ ಜತೆಯಲ್ಲಿ ಹೊದ್ದುಕೊಳ್ಳಲು ಅಮ್ಮಿ ಅದನ್ನೇ ಉಪಯೋಗಿಸುತ್ತಿದ್ದಳು...

ಕೊನೆಯ ಅಳು. ಬೀಳ್ಕೊಡುಗೆ.

ಇಲ್ಲಿ ಮಂಗಳವಾದ್ಯವಿರಲಿಲ್ಲ. ಸಿಂಗರಿಸಿರಲಿಲ್ಲ, ಗಾಡಿ-ಎತ್ತುಗಳನ್ನು. ಕೈ ಹಿಡಿ ದವಳ ಕಡೆಗೆ ಕಳ್ಳನೋಟ ಬೀರುವ ಪತಿರಾಯನಿರಲಿಲ್ಲ. ಮದುವಣಗಿತ್ತಿಯಾಗಿ ಹೋಗು ತ್ತಿರಲಿಲ್ಲ ಬನಶಂಕರಿ.

ಆದರೆ ಇಷ್ಟು ನಿಜ. ಅದರ ಬಾಗಿಲುಗಳಿಗೆ ಕರಿಯ ಪರದೆಯನ್ನು ಇಳಿಬಿಟ್ಟಿರಲಿಲ್ಲ. ಒಳಗಿದ್ದ ಜೀವ ಉಸಿರಾಡುತ್ತಿತ್ತು.

ಗಾಡಿ ಎಡಕ್ಕೊಮ್ಮೆ ಬಲಕ್ಕೊಮ್ಮೆ ಗಡಕ್ ಗಡಕ್ ಎಂದ ಹಾಗೆ, ಸರಿ ತಪ್ಪುಗಳ ಯೋಚನೆ ಅಮ್ಮಿಯನ್ನು ಮತ್ತೊಮ್ಮೆ ಕಾಡಿತು.

ಪ್ರಯತ್ನಪೂರ್ವಕವಾಗಿ ಅಮ್ಮಿ ಆ ಯೋಚನೆಗಳನ್ನೆಲ್ಲ ಬದಿಗೆ ಸರಿಸಿದಳು.

' ಇದು ಬದುಕು ' ಎಂದುಕೊಂಡಳಾಕೆ.

## ೧೧

ಊರಿನ ಇನ್ನೊಂದು ಮೂಲೆಯಲ್ಲಿ, ಅಷ್ಟೇನೂ ಜನವಸತಿ ಇರದಿದ್ದ ಜಾಗದಲ್ಲಿ, ಆ ಮನೆ ಇತ್ತು. ಗೋಡೆಗಳು ಎತ್ತರವಾಗಿದ್ದು ಗಾಳಿ ಓಡಾಡಲು ಅವಕಾಶವಿದ್ದ ಮನೆ. ಛಾವಣಿಗೆ ಕರಿಹೆಂಚು ಹೊದಿಸಿದ್ದರು. ಒಳಗೆ ನಡುಮನೆಯಲ್ಲಿ ದೀಪ ಉರಿಯುತ್ತಿತ್ತು. ಅದಕ್ಕೆ ಬೆನ್ನು ಮಾಡಿ ನಾರಾಯಣರಾಯರು ಹೊರಕ್ಕೆ ನೋಡುತ್ತಿದ್ದರು.

ಬೀದಿಯ ಕತ್ತಲೆಯಲ್ಲಿ ಗಾಡಿ ಬಂದು ನಿಂತಿತು. ನಾರಾಯಣರಾಯರು ಮುಂದು ವರಿದು ಗಾಡಿಯ ಸಮೀಪಕ್ಕೆ ಬಂದರು. ಸ್ವಲ್ಪ ದೂರದಲ್ಲಿ ಎದುರು ಸಾಲಿನ ಮನೆಗಳವರು ಯಾರೋ ಕದ ತೆರೆದು ಒಂದು ನಿಮಿಷ ಹೊರಗೆ ಇಣಿಕಿದಂತಾಯಿತು. ಕತ್ತಲೆಯಲ್ಲಿ ಸರಿ ಯಾಗಿ ಕಾಣಿಸುವುದಿಲ್ಲವೆಂದು ಅವರು ಬಾಗಿಲು ಮುಚ್ಚಿಕೊಂಡರು. ಗಾಡಿಯ ಕತ್ತರಿ ನೆಲಕ್ಕೆ ತಗಲಿದಾಗ ಅಮ್ಮಿ ಇಳಿಯುವ ಸಿದ್ಧತೆ ಮಾಡಿದಳು.

" ಮೆತ್ತಗೆ ಇಳಿ " ಎಂದರು ರಾಯರು.

ಅಮ್ಮಿಯ ಹೃದಯ ಉದ್ವೇಗದಿಂದ ತುಡಿದುಕೊಳ್ಳುತ್ತಿದ್ದಷ್ಟೂ ರಾಯರ ಸ್ವರ ಶಾಂತವಾಗಿತ್ತು.

ಸಾರಿಸಿ ಸ್ವಚ್ಛವಾಗಿತ್ತು ಮನೆ.

" ಮೂಟೇನ ಆಳು ಎತ್ಕೊಳ್ಳೊ ? ನೀನೇ ತಗೋತಿಯೋ ? "

" ನಾನೇ ತಗೋತೀನಿ " ಎಂದಳು ಅಮ್ಮಿ.

ಅವರ ಹಿಂದೊಬ್ಬ ವಯಸ್ಸಾದ ಆಳು, ಅಮ್ಮಿಯನ್ನು ಕುತೂಹಲದಿಂದ ನೋಡುತ್ತ, ಓಡಾಡುತ್ತಿದ್ದ :

ಮನೆಯೊಳಗೆ ಅಮ್ಮಿ ಬಂದಳು. ಆರತಿ ಎತ್ತಿ ನೀರು ಚೆಲ್ಲಿರಲಿಲ್ಲ ಯಾರೂ. ಯಾವ ಕಾಲನ್ನು ಮೊದಲು ಒಳಗಿರಿಸಬೇಕೆಂಬ ಯೋಚನೆ ಇರಲಿಲ್ಲ.

ಸಂಕೋಚಪಡುತ್ತ ಅಲ್ಲಿ ನಿಂತಾಗ, " ಬಂದುದೇ ತಪ್ಪಾಯಿತೇನೋ " ಎಂಬ ಶಂಕೆ ಅವಳನ್ನು ಹಿಂಸಿಸಿತು. ಆದರೆ ಹಾಗಾದುದು ಕ್ಷಣ ಕಾಲ. ಆ ಯೋಚನೆಗಳೆಲ್ಲವೂ ಅಂದಿಗೆ ಮುಕ್ತಾಯವಾದುವೆಂಬಂತೆ ಅಮ್ಮಿ ನೀಳವಾಗಿ ನಿಟ್ಟುಸಿರುಬಿಟ್ಟಳು.

" ಐತಾಳ ಅಂತ ಘಟ್ಟದ ಕೆಳಗಿನೋನು ಇಲ್ಲಿದ್ದ. ಅತ ಬಿಟ್ಹೋದ್ಮೇಲೆ ನಾನು ಈ ಮನೆ ಕೊಂಡ್ಕೊಂಡೆ," ಎಂದರು ನಾರಾಯಣರಾಯರು, ಅಲ್ಲೇ ಇದ್ದ ಮಂಚದ ಮೇಲೆ

ಕುಳಿತುಕೊಳ್ಳುತ್ತ.

ಅಮ್ಮಿ ಏನೂ ಉತ್ತರ ಕೊಡಲಿಲ್ಲ.

ರಾಯರು ನಶ್ಯದ ಡಬ್ಬ ಹೊರ ತೆಗೆದು ಶೀಪಿಯಿಂದ ಮೂಗಿಗೆ ಒಂದು ಚಿಟಿಕೆ ನಶ್ಯ ವೇರಿಸಿದರು. ಅನುಭವಿಯಾದ ಅವರು 'ಆಕ್ಷಿ' ಎನ್ನಲಿಲ್ಲ.

"ನಶ್ಯದ್ದೊಂದು ಚಟ ನನಗೆ" ಎಂದರು ರಾಯರು ನಗುತ್ತ, ತನ್ನ ಸ್ವಭಾವ ಪರಿಚಯ ಮಾಡಿಕೊಡುತ್ತ.

ಗಾಡಿ ದೇವಸ್ಥಾನದತ್ತ ಹೊರಟುಹೋಯಿತು.

"ತಿಮ್ಮಪ್ಪಾ" ಎಂದು ರಾಯರು ಆಳುಮಗನನ್ನು ಕರೆದು ಒಂದು ರೂಪಾಯಿ ನಾಣ್ಯ ಆತನ ಕೈಗಿತ್ತು, "ಒಂದ್ಸೇರು ಅವಲಕ್ಕೀನೂ ಒಂದ್ಹತ್ತು ರಸಬಾಳೆ ಹಣ್ಣೂ ತಗೊಂಡು ಬಾರೋ," ಎಂದರು.

ಆಳು ಹೊರಟುಹೋದಾಗ, ತಾವಿಬ್ಬರೇ ಉಳಿದೆವಲ್ಲಾ ಎನ್ನಿಸಿತು ಅಮ್ಮಿಗೆ.

"ಯಾಕೆ ಶಂಕರಿ ಸಂಕೋಚ ?"

'ಶಂಕರಿ'—ಹೊಸ ಹೆಸರು—ತಮಾಷೆಯಾಗಿ ತೋರಿತು. ಆದರೆ ಆ ಹೊಸ ಅಧ್ಯಾಯಕ್ಕೆ ಅದೇ ಮೇಲಾಗಿತ್ತೇನೊ !

"ನಿಂತ್ಕೊಂಡೇ ಇದೀಯಲ್ಲಾ ?"

"ಅಮ್ಮಿ ಅಲ್ಲೆ ಗೋಡೆಗೊರಗಿ ಕುಳಿತುಕೊಂಡಳು.

"ಅಡುಗೆ ಮಾಡ್ತೀಯೇನು ?"

ನಾರಾಯಣರಾಯರಿಗಾಗಿಯೂ ತಾನು ಅಡುಗೆ ಮಾಡಬೇಕೆ ಏನೆಂಬುದು ಅಮ್ಮಿಗೆ ಸ್ಪಷ್ಟವಾಗಲಿಲ್ಲ. ಆಕೆಯ ಯೋಚನೆಯನ್ನು ಊಹಿಸಿಕೊಂಡವರಂತೆ ಅವರೆಂದರು :

"ನಾನು ಮನೆಗೆ ಹೋಗ್ತೀನಿ ಊಟಕ್ಕೆ. ನಿನಗಾಗಿ ಮಾಡಿಕೋ."

"ನನಗೇನೂ ಬೇಡಿ. ಹೊರಡೋಕ್ಮುಂಚೆ ಸುಂದರಮ್ಮ ಹೊಟ್ಟೆ ತುಂಬ ತಿನಿಸಿದ್ರು."

"ಹಾಗಾದ್ರೆ ಒಂದಿಷ್ಟು ಏನಾದ್ರೂ ಫಳಾರ ಮಾಡು. ಆಳು ಬಂದ್ಮೇಲೆ ನಾನು ಹೋಗ್ತೀನಿ."

ಇರಿ, ಎನ್ನಬೇಕೆ ?—ಎಂಬುದು ಅಮ್ಮಿಗೆ ಸ್ಪಷ್ಟವಾಗಲಿಲ್ಲ.

"ದೇವಸ್ಥಾನದಲ್ಲಿನ್ನೂ ಕೆಲ್ಸ ಇದೆ. ಲೆಕ್ಕ ಗಿಕ್ಕ ಬರಿಯೋದು...ನಾಳೆ ಪುರಸೊತ್ತು ಮಾಡ್ಕೊಂಡು ಬರ್ತೀನಿ."

ತನ್ನನ್ನೊಬ್ಬಳನ್ನೇ ಆ ರಾತ್ರೆ ಇರಗೊಡಲು ರಾಯರು ನಿರ್ಧರಿಸಿದ್ದನ್ನು ಕಂಡು ಅಮ್ಮಿಗೆ ಸಮಾಧಾನವೆನಿಸಿತು. ಆಕೆ ಕೃತಜ್ಞಳಾದಳು.

ನಾಳೆಯ ಯೋಚನೆ ಬಂದು ಆಕೆಯೊಂದು ಪ್ರಶ್ನೆ ಕೇಳಿದಳು :

"ಅಕ್ಕಪಕ್ದೋರು ಯಾರಾದ್ರೂ ಕೇಳಿದ್ರೆ ಏನೂಂತ ಹೇಳ್ಲಿ ?"

"ಏನ್ಹೇಳ್ತೀಯ ?"

"ನಂಗ್ಗೊತ್ತಿಲ್ಲ."

"ಮೊದಲ್ನೇದಾಗಿ ಯಾರೂ ಕೇಳಕ್ಕೆ ಬರಲ್ಲ. ಎರಡ್ನೇದಾಗಿ, ಕೇಳಿದ್ರೆ, ನೀನು ನನಗೆ ಸಂಬಂಧ ಅಂತ ಅಂದ್ಬಿಡು."

"ಹೂಂ."

"ಕಾಳು ಬೇಳೆ ಎಲ್ಲಾ ತಂದಿದೆ. ನಾಳೆ ಒಂದು ಬುಟ್ಟಿ ತರಕಾರೀನೂ ಕಳಿಸ್ತೀನಿ."

"ಅಯ್ಯೋ, ಯಾಕೆ ಅಷ್ಟೆಲ್ಲ ಸಂಭ್ರಮ ?"

"ಸಂಭ್ರಮ ಏನ್ಬಂತು ? ದೇವಸ್ಥಾನದ ತೋಟದಲ್ಲಿ ರಾಶಿ ರಾಶಿಯಾಗಿ ಬೆಳೀತದೆ ತರಕಾರಿ."

"ಯಾರೂ ಏನೂ ಅನ್ನೋಲ್ವೆ !"

"ದೇವಸ್ಥಾನದಿಂದ ಕಳಿಸ್ದೆ ಅಂತ್ಲೆ ?"

"ಹೂಂ........."

ರಾಯರು ನಕ್ಕರು.

"ಹುಚ್ಚಿ ! ನಾರಾಯಣರಾಯ ಏನು ಮಾಡಿದ್ರೂ ಕೇಳೋವರಿಲ್ಲ."

ಆತ್ಮ ವಿಶ್ವಾಸವೊ ಜಂಭವೊ, ಅಂತೂ ಗಂಡಿನ ಆ ಮಾತು ಕೇಳಿ ತೃಪ್ತಿಯಾಯಿತು ಅಮ್ಮಿಗೆ.

ರಾಯರು, ಅಮ್ಮಿಯನ್ನು ಕರೆದೊಯ್ದು ಹಿತ್ತಿಲಲ್ಲಿದ್ದ ಬಾವಿ ತೋರಿಸಿದರು. ಹೊಸ ತಾದ ಹುರಿ ಹಗ್ಗ ರಾಟೆಯ ಕೊರಳಿಗೆ ಆತುಕೊಂಡಿತ್ತು. ಮನೆಯ ಹಿಂಬಂದಿಯಿಂದಲೆ ಬಹಿರ್ದೆಶೆಗೆ ಹೋಗುವ ಜಾಗ...ಹಿತ್ತಿಲಲ್ಲೆ ಬಚ್ಚಲುಮನೆ...ವಾಪಸು ಬರುತ್ತಿದ್ದಂತೆ ಒಳ ಮನೆಯಲ್ಲಿ ರಾಯರ ಕೈ ಅಮ್ಮಿಗೆ ಸೋಂಕಿತು. ಒಂದು ಕ್ಷಣ ದಿಗಿಲಾಯಿತು ಅಮ್ಮಿಗೆ. ಆಕೆಯ ಕೈಹಿಡಿದುಕೊಂಡು ರಾಯರೆಂದರು :

"ಹುಷಾರಿ. ಮೆತ್ತಗೆ ಬಾ. ಮೆಟ್ಟುಕಲ್ಲಿದೆ ಎದುರಿಗೆ. ಕಾಣ್ಸೋಲ್ಲ. ಎಡವಿ ಬಿದ್ದೀಯೆ."

ಅಷ್ಟೆ. ಒಳಮನೆಯನ್ನು ದಾಟಿದೊಡನೆ ರಾಯರು ಅಮ್ಮಿಯ ಕೈಬಿಟ್ಟರು.

'ಬದುಕಿದೆ' ಎಂದುಕೊಂಡಳು ಅಮ್ಮಿ. ಆದರೆ ಮರುಕ್ಷಣವೆ ಯಾಕೊ ಅಸಮಾಧಾನವಾಯಿತು.

ತಿಮ್ಮಪ್ಪ ಬಂದ ಮೇಲೆ ನಾರಾಯಣರಾಯರು ಹೊರಟು ನಿಂತರು.

"ನಾನು ಹೊರಡ್ತೀನಿ ಶಂಕರಿ. ತಿಮ್ಮಪ್ಪ ಇಲ್ಲೇ ಹೊರಗೆ ಮಲಕೋತಾನೆ...ಯಾವ ಹೆದರ್ಕೇನೂ ಇಲ್ಲ...ಬರ್‍ಲಾ ನಾನು ?"

"ಹೂಂ..." ಎಂದಳು ಅಮ್ಮಿ.

"ನಾಳೆ ಬರ್ತೀನಿ."

"ಹೂಂ..."

ಅಮ್ಮಿ ಒಂದು ಕೊಡ ನೀರು ಸೇದಿ ತಂದಳು, ಎರಡು ಬಾಳೆ ಹಣ್ಣು ತಿಂದು ನಾಲ್ಕು ಗುಟುಕು ನೀರು ಕುಡಿದಳು. ತಿಮ್ಮಪ್ಪನನ್ನು ಕರೆದು. ಆತ "ಬ್ಯಾಡಿ ಅಮ್ಮ" ಎಂದರೂ ಕೇಳದೆ, ಅವನಿಗೆ ನಾಲ್ಕು ಹಣ್ಣು ಕೊಟ್ಟಳು.

ಎದುರು ಅಂಗಳದ ಮೂಲೆಯಲ್ಲಿ ತಿಮ್ಮಪ್ಪನ ಹಟ್ಟಿ ಇತ್ತು.

"ಒಬ್ನೇ ಇದೀಯೇನಪ್ಪ ?"

"ಹೂ ಕಣವ್ವ...ಮಗ ಓಡೋಗ್ಬುಟ್ಟ. ಹೆಣ್ಣುಮಗ ಒಂದು ಅಳಿಯನ್ಜತೇಲಿ

ಹೊಲ್ದಾಗವ್ಳೆ. ನನ್ಹೆಣ್ತಿ ತೀರ್ಕೊಂಡು ಆಗ್ಲೆ ಆರು ವರ್ಷಆಯ್ತು."

"ಸ್ವಂತ ಹೊಲ ಇದೆಯೇನು ಅಳಿಯ್ನಿಗೆ ?"

"ಸ್ವಂತದ್ದೆಲ್ಲಂತು ? ಎಲ್ಲಾ ದೇವಸ್ಥಾನ್ದ ಹೊಲಾನೇ."

...ತಿಮ್ಮಪ್ಪ ಗುಡಿಸಲು ಸೇರಿದ. ಅಲ್ಲಿಯೆ ಸುರುಳಿಯಾಗಿ ಬಿದ್ದಿದ್ದ ಇನ್ನೊಂದು ಚಾಪೆಯನ್ನೆತ್ತಿಕೊಂಡು ಅಮ್ಮಿ ಒಳಮನೆಯಲ್ಲಿ ಹಾಸಿದಳು. ಲಾಟೀನನ್ನು ಆರಿಸಲು ಇಚ್ಛೆಯಾಗದೆ, ಬತ್ತಿ ಕಿರಿದುಗೊಳಿಸಿ ಮರೆಯಾಗಿ ಇರಿಸಿದಳು. ಬೀಸುತ್ತಿದ್ದ ಛಳಿಗಾಳಿಯಿಂದ ರಕ್ಷಣೆಗೆಂದು ಕಂಬಳಿಯನ್ನು ಹೊದ್ದುಕೊಂಡಳು.

ನಿದ್ದೆ ಬರಲಿಲ್ಲ ಬಹಳ ಹೊತ್ತು. ಗಾಢವಾದ ಕತ್ತಲೆಯೊಡನೆ ಮಂದ ಬೆಳಕು ಬೆರೆತಿತ್ತು. ಛಾವಣಿ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಆದರೂ ಆ ಶೂನ್ಯದಲ್ಲಿ ಅಮ್ಮಿ ಏಕಾಕಿಯಾಗಿರಲಿಲ್ಲ. ಅವಳ ಜೊತೆಯಲ್ಲಿ ನೂರು ನೆನಪುಗಳಿದ್ದುವು.

...ವಿಧವೆಯಾಗಿ ಜೀವನಹಳ್ಳಿಗೆ ಬಂದ ಬಳಿಕ, ಅಣ್ಣನನ್ನೂ ಕಳೆದುಕೊಂಡ ಮೇಲೆ, ಲೋಕ ವ್ಯಾಪಾರವೆಲ್ಲ ತನ್ನ ಪಾಲಿಗೆ ಸ್ತಬ್ಧವಾಯಿತೇನೋ ಎಂಬಂತೆ ದೀರ್ಘಕಾಲ ಅಮ್ಮಿ ಮಲಗಿದ್ದಳು. ಎಷ್ಟು ಕ್ರೂರವಾದ ಯಾತನೆ! ಹತ್ತು ಹನ್ನೊಂದು ವರ್ಷಗಳಾಗಿವೆ ಅಂದಿನಿಂದ ಇಂದಿಗೆ. ಎಷ್ಟೊಂದು ವಕ್ರ ವಕ್ರವಾಗಿ ಹರಿದಿತ್ತು ಜೀವನದಿ !

...ಅಂತೂ, ಎತ್ತ ಏನು ಎಂದು ತಿಳಿಯದೆ ಓಲಾಡುತ್ತಿದ್ದ ಜೀವ ಈಗ ಒಂದು ಸ್ಥಿತಿಗೆ ಬಂದು ಮುಟ್ಟಿದಂತಾಯಿತಲ್ಲ? ಬೆಟ್ಟ ಕಣಿವೆಗಳನ್ನು ದಾಟಿ ನದಿ ಬಯಲು ಭೂಮಿಗೆ ಇಳಿದಂತಾಯಿತಲ್ಲ ?

ಎಂತಹ ವ್ಯಕ್ತಿ ಈ ನಾರಾಯಣರಾಯರು ! ಎಷ್ಟೊಂದು ಮಿತವಾದುದು ಅವರ ಮಾತು ! ಪರಿಚಯವಿಲ್ಲದ ಗಂಡಸಿನೊಡನೆ ಬಾಳ್ವೆ ನಡೆಸುವ ಯೋಚನೆ ಬಂದಾಗ ಮೊದ ಮೊದಲು ಆಕೆಗೆ ಭಯವಾಗಿತ್ತು. ಆ ಜೀವನ ಹೇಗಿರುತ್ತದೆಂಬುದು ಆಕೆಗೆ ಗೊತ್ತಿರಲಿಲ್ಲ; ಹೇಗಿರಬೇಕೆಂಬುದು ತಿಳಿದಿರಲಿಲ್ಲ. ...ಆದರೂ ಆಕೆ ಧೈರ್ಯ ತಳೆದಿದ್ದಳು. ಹೆಣ್ಣು ಗಿಡಕ್ಕಂಟಿಕೊಂಡ ಬಳ್ಳಿಯ ಹಾಗೆ; ಗಂಡಸಿನ ಆಸರೆಯಿಲ್ಲದೆ ಬದುಕುವುದು ಹೇಗೆ ಸಾಧ್ಯ ?—ಎಂದು ತನ್ನೊಳಗೆ ತಾನೇ ತರ್ಕಿಸಿದ್ದಳು.

ಸುಂದರಮ್ಮ ಅಂದಿದ್ದಳು ಒಂದು ದಿನ :

"ಬೇರೆ ದೇಶ್ದಲ್ಲೆಲ್ಲಾ ಹೆಂಗಸ್ರು ಗಂಡಸ್ರಂತೆ ಸಂಪಾದಿಸ್ತಾರೆ ಗೊತ್ತೆ ?"

"ನಿಜವಾಗ಼್ಲೂ ?"

"ಹೆಂಗಸ್ರು ಶಾಲೆಗ್ಳಲ್ಲಿ ಪಾಠ ಹೇಳ್ಕೊಡ್ತಾರಂತೆ..."

ಬಾಯಿ ತೆರೆದು, ಬೆರಗುನೋಟ ಬೀರುತ್ತ, ಸುಂದರಮ್ಮನ ಮಾತುಗಳನ್ನು ಬನಶಂಕರಿ ಕೇಳಿದ್ದಳು.

"ಹೆಂಗಸ್ರು ಔಷ್ಧಿ ಕೊಡೋ ಡಾಕ್ಟರುಗಳಾಗ್ತಾರಂತೆ..."

"ಹೌದೆ ! ?"

"ಹೂಂ...ನಮ್ಮನ್ನ ಆಳ್ತಾ ಇದ್ದದ್ದು ಯಾರೂಂತೀಯಾ ? ರಾಣಿ, ವಿಕ್ಟೋರಿಯಾ ರಾಣೀಂತ...ಗೊತ್ತಾ ನಿಂಗೆ ?"

ನಿರಾಶೆಯಿಂದ ಮಾತು ಬಂದಿತ್ತು :

" ಆವರೆಲ್ಲಮ್ಮ—ನಾವೆಲ್ಲಿ ? "

ಆಗ ಒಂದು ಕ್ಷಣ ಸುಮ್ಮನಾಗಿ ಸುಂದರಮ್ಮನೆಂದಿದ್ದಳು :

" ನಮ್ಗೂ ವಿದ್ಯಾಭ್ಯಾಸ ಇದ್ದಿದ್ರೆ ? ನಾವೂ ಸಂಪಾದ್ನೆ ಮಾಡಿ ಯಾರ ಹಂಗೂ ಇಲ್ದೆ ಇರೋ ಸ್ಥಿತಿ ಇದ್ದಿದ್ರೆ ?—"

ವಿಷಯದ ಗಂಭೀರತೆಯನ್ನು ಲಘುಗೊಳಿಸಲೆಂದು ಅಮ್ಮಿ ಹೇಳಿದ್ದಳು :

" ಹೋಗಕ್ಕ. ನಿನಗೇನಂತೆ ಈಗ ಕಡಮೆಯಾಗಿರೋದು ? ತಾಳು, ಹೇಳ್ತೀನಿ ನಿಮ್ಮವ್ರಿಗೆ ! "

" ಓ ಹೇಳು. ಅವ್ರೇ ಇಷ್ಟೆಲ್ಲಾ ನಂಗೆ ಹೇಳ್ಕೊಟ್ಟಿರೋರು. ನಮ್ವಿಷಯ ಬೇರೆ. ಯಾವ ಭಾಗ್ಯದಿಂದ್ಲೋ ನಾವಿಷ್ಟು ಚೆನ್ನಾಗಿದೀವಿ. ಅನ್ಯೋನ್ಯವಾಗಿದೀವಿ. ಆದರೆ ನೀನು... ? "

" ಸಾಕಕ್ಕ, ಬೇಡ ಆ ಮಾತು."

" ನೀನೀಗ ವಿದ್ಯಾವಂತೆಯಾಗಿದ್ರೆ ಯಾರ ಹಂಗ್ನಲ್ಲಾದ್ರೂ ಇರ್ಬೇಕಾಗಿತ್ತೆ ? "

" ಆದರೆ ಹೆಂಗ್ಸು ಎಷ್ಟೆಂದ್ರೂ ಹೆಂಗ್ಸೇ ಅಲ್ವೆ ಅಕ್ಕ ? "

" ಹೆಂಗ್ಸು ಗಂಡಸಿಗಿಂತಲೂ ಮೇಲು. ಆಕೆಯ ಜವಾಬ್ದಾರಿ ಗಂಡಸಿಗಿಂತಲೂ ಹೆಚ್ಚು. ಹೊತ್ತು ಹೆತ್ತು ಸಂತಾನನ ಕಾಪಾಡೋರು ಯಾರು ? "

" . . . . . . . . "

" ನಿನ್ನ ವಿಷಯ್ವೇ ತಗೋ. ಪುಟ್ಟ ಹುಡುಗಿಗೊಂದು ತಾಳಿ ಕಟ್ಟಿ, ನೀನು ಹೆಂಡ್ತಿ ಯಾದೇಂತಂದ್ರು. ಸ್ವಲ್ಪ ದಿವಸ್ದಲ್ಲೆ, ಗಂಡ ಸತ್ತಾಂತ ತಾಳಿ ಬಿಚ್ಚಿ, ನೀನು ಮುಂಡೆ ಯಾದೇಂತಂದ್ರು..."

" ಅಕ್ಕಾ— ! "

" ನೀನು ಏನ್ಬೇಕಾದ್ರೂ ಅಂದ್ಕೋ ಬನೂ. ಈ ಶಾಸ್ತ್ರಕ್ಕೊಂದೂ ಅರ್ಥವಿಲ್ಲ, ಇದು ಧರ್ಮವಲ್ಲ, ನ್ಯಾಯವಲ್ಲ ! "

ಅಲ್ಲಿಗೆ ಆ ಮಾತು ನಿಂತಿತ್ತು.

ಆಮೇಲೆ ಎರಡನೆ ಮದುವೆಯ ಪ್ರಸ್ತಾಪ. ಆ ಎರಡನೆಯ ಮದುವೆ ಅಮ್ಮಿಗೆ ಆಗಲಿಲ್ಲ.

ಆಗಿನ ಆ ಅಸಹಾಯ ಸ್ಥಿತಿಯಿಂದ ಈಗಿನ ಬಾಳ್ವೆಗೆ...

ಇದು ಧರ್ಮವಾಗಿತ್ತೆ ಹಾಗಾದರೆ ? ನ್ಯಾಯವಾಗಿತ್ತೆ ? ತನ್ನನ್ನು ಜನರಿನ್ನು ಕೆಟ್ಟ ಹೆಸರುಗಳಿಂದ ಕುಟುಕು ಮಾತುಗಳಿಂದ ಕರೆಯಬಹುದಲ್ಲವೆ ?

ಹಾಗೆ ಆಡುವವರ ನಾಲಗೆಗೆ ಕೊಳ್ಳಿ ಇಕ್ಕಿತು.

ತಾನು ತನ್ನ ಮನಸ್ಸಾಕ್ಷಿಗೆ ಅನುಗುಣವಾಗಿ ಮಾತ್ರ ನಡೆದರಾಯಿತು...

...ಹೀಗೆ ಯೋಚಿಸುತ್ತ ಅಮ್ಮಿ ಅಪರಿಚಿತವಾದ ಆ ವಾತಾವರಣದಲ್ಲಿ ಬಹಳ ಹೊತ್ತು ಎಚ್ಚರವಿದ್ದಳು. ಯೋಚಿಸಿ ಯೋಚಿಸಿ ಮಿದುಳು ದಣಿದ ಮೇಲೆ ಮೆಲ್ಲನೆ ನಿದ್ದೆ ಬಂತು.

ಮರುದಿನ ಬೆಳಿಗ್ಗೆ ಅಮ್ಮಿ ಎದ್ದಾಗ ಹೊತ್ತು ಏರಿತ್ತು. ಆಕೆಗೆ ಎಂದಿನಂತೆ ಬೆಳಗು ಮುಂಜಾನೆ ಬೇಗನೆ ಎಚ್ಚರವಾಗಿರಲೇ ಇಲ್ಲ. ಎದ್ದು ಕುಳಿತವಳು ಮತ್ತೂ ಸ್ವಲ್ಪ ಹೊತ್ತು

ಗೋಡೆಗೊರಗಿ ಕಾಲ ಕಳೆದಳು.

ಎಚ್ಚರಗೊಂಡ ತಾನಿನ್ನು ಈ ದಿನದಿಂದ ಬಾಳುವೆಯ ಹೊಸ ಅಧ್ಯಾಯದ ಮೊದಲ ಸಾಲುಗಳನ್ನು ಬರೆಯಬೇಕು. ಕುಳಿತಲ್ಲಿಂದಲೇ ಅಮ್ಮಿ ಮನೆಯ ಒಳಗೆಲ್ಲ ದೃಷ್ಟಿಯೋಡಿಸಿದಳು. ಎಲ್ಲಿಂದ ಆರಂಭಿಸಬೇಕು ? ಹೇಗೆ ಆರಂಭಿಸಬೇಕು ?

ಹೊರಗೆ ಹಟ್ಟಿಯಲ್ಲಿ ತಿಮ್ಮಪ್ಪ ಅಡಿಕೆ ಜಜ್ಜುತ್ತ ಕುಳಿತಿದ್ದ. ಕಲ್ಲುಗಳ ಟೊಕ್ ಟೊಕ್ ಸದ್ದು ಅಮ್ಮಿಗೆ ಕೇಳಿಸುತ್ತಿತ್ತು...

ಇಷ್ಟು ಹೊತ್ತಿಗಾಗಲೆ ಅವರು ಸ್ನಾನ ಮುಗಿಸಿ ವಾಪಸು ಬಂದಿರಬಹುದಲ್ಲ ? ಬೆಳಿಗ್ಗೆ ಇಲ್ಲಿಗೆ ಬರುವರೊ ಇಲ್ಲವೊ ? ಸಂಜೆ ? ಅವರು ಬಂದಾಗ ತಾನು ಏನೆಂದು ಮಾತನಾಡಿಸಬೇಕು ? ಹೇಗೆ ವರ್ತಿಸಬೇಕು ? ಈವರೆಗೆ ಹ್ಞಾ ಹ್ಞೂ ಎಂದಷ್ಟೆ ಹೇಳುತ್ತ ಮೌನದಿಂದಿರುತ್ತಿದ್ದ ತನ್ನ ಬಗ್ಗೆ ಅವರು ಏನೆಂದುಕೊಂಡಿರುವರೋ ಏನೋ...

ತಿಮ್ಮಪ್ಪ "ಎದ್ದಿರಾ ಅವ್ವ ?" ಎಂದು ಪ್ರಶ್ನಿಸಿ, ಕುಳಿತಿದ್ದಲ್ಲಿಂದ ಆಕೆ ಏಳುವಂತೆ ಮಾಡಿ, "ಹಾಲು ತಗಂಬರ್‍ತೀನಿ" ಎಂದು, ಒಂದು ಪಾತ್ರೆಯೊಡನೆ ಹೊರಟು ಹೋದ.

ಅಮ್ಮಿ ಬಚ್ಚಲೊಲೆಗೆ ಉರಿಹಾಕಿದಳು. ಬಿಸಿನೀರು ಕಾಯಿಸಿ ಸ್ನಾನ ಮಾಡಿದಳು. ತಾನು ತಂದಿದ್ದ ದೇವರ ಪಟವನ್ನು ಗೋಡೆಗೆ ಒರಗಿಸಿಟ್ಟು ಅದರೆದುರು ತಲೆಬಾಗಿ ಕೈಜೋಡಿಸಿ ಬಹಳ ಹೊತ್ತು ಕುಳಿತಳು.

ಹಾಲು ಬಂತು. ತರಕಾರಿ ಬಂತು. ಅಮ್ಮಿ ಒಳಗೆ ಒಲೆ ಹಚ್ಚಿದಳು. ಅಡುಗೆ. ಊಟ.

ಮುಚ್ಚಂಜೆಯ ಹೊತ್ತಿಗೆ ನಾರಾಯಣರಾಯರು ಬಂದರು. ಮನೆಯಲ್ಲಿ ಆಗಲೆ ಇದ್ದುದಕ್ಕೆ ಎರಡರಷ್ಟು ಪಾತ್ರೆ ಸರಂಜಾಮುಗಳು, ದೊಡ್ಡದೊಂದು ನಿಲುವುಗನ್ನಡಿ, ಒಂದು ಸೀರೆ, ರವಕೆ ಕಣ...ಇಷ್ಟನ್ನು ತಂದರು.

ಯಾವ ಮುಖಭಾವವೂ ಇಲ್ಲದೆ ಆ ಸಾಮಾನುಗಳನ್ನು ನೋಡುತ್ತಲಿದ್ದ ಅಮ್ಮಿಯನ್ನು ಉದ್ದೇಶಿಸಿ ರಾಯರೆಂದರು :

"ಯಾಕೆ—ಇವನ್ನೆಲ್ಲ ತರ್ಬ್ಯಾರ್‍ದಾಗಿತ್ತಾ ?"

ಅಮ್ಮಿ ಮುಗುಳು ನಕ್ಕಳು.

"ತಪ್ಪೇನು ಅದರಲ್ಲಿ ? ನಿಮ್ಮದೇ ಅಲ್ವಾ ಇದೆಲ್ಲ ?"

"ನನ್ನದು ? ಇಲ್ಲವಪ್ಪ...ಇದೆಲ್ಲಾ ನಿನ್ದೇನೆ..."

"ಹೋಗಲಿ ಬಿಡಿ. ಯಾಕೆ ಜಗಳ ? ಯಾರದಾದರೇನು ?"

ರಾಯರು ಮೋಹಕವಾಗಿ ಅಮ್ಮಿಯನ್ನು ನೋಡಿದರು.

"ಜಗಳ ಆಡೊಕ್ಕೂ ಬರತ್ತೇನು ನಿಂಗೆ ?"

ಅಮ್ಮಿ ಲಜ್ಜೆಯಿಂದ ತಲೆಬಾಗಿದಳು.

"ನಾನೀಗ ಹೋಗ್ತೀನಿ. ಸ್ವಲ್ಪ ಕೆಲಸ್ವಿದೆ," ಎಂದು ರಾಯರು ಎದ್ದು ನಿಂತರು.

ತನ್ನ ಮೇಲೆ ಅವರು ಸಿಟ್ಟಾದರೇನೊ ಎಂದು ಗಾಬರಿಯಾಯಿತು ಅಮ್ಮಿಗೆ. ಮುಖ ಬಾಡಿತು.

"ತಾಳಿ, ಏನಾದರೂ ಮಾಡ್ಕೊಡ್ತೀನಿ..."

" ಏನ್ಕೊಡ್ತೀಯಾ ? "

" ಹಾಲಿದೆ, ಕೊಡ್ತೀನಿ."

" ಇಷ್ಟೇನೆ ? "

ಮತ್ತೆ ರಾಯರ ನಗು. ಅಮ್ಮಿಗೆ ಅರ್ಥವಾಗಲು ಒಂದು ಕ್ಷಣ ಬೇಕಾಯಿತು. ಅಮ್ಮಿ ನಾಚಿ ಕೆಂಪೇರಿದಳು.

" ಒಳ್ಳೇ ನಾಚಿಕೆಮುಳ್ಳು ! ಅದೋ—ಮುಟ್ಟಿದರೆ ಮುದುಡುತ್ತೆ. ಇಲ್ಲಿ ಬರೇ ನೋಡಿದರೆ ಸಾಕು ! "

ಅಂತಹ ಮಾತು ಕೇಳಿ ಅಮ್ಮಿಗೆ ಸಂತೋಷವಾಯಿತು. ರಾಯರು ಮುಂದೇನು ಮಾಡುವರೋ ಎಂಬ ಗಾಬರಿಯಿಂದ ಆಕೆ ತಲೆಯೆತ್ತಲೇ ಇಲ್ಲ.

" ಕೊಡು ಹಾಗಾದರೆ. ಹಾಲಾದರೆ ಹಾಲು. ನೀನು ಎಷ್ಟು ಕೊಡ್ತೀಯೋ ಅಷ್ಟೇ ಸಾಕು. ಅದೇ ಅಮೃತ."

ಅಮ್ಮಿ ಅಡುಗೆಮನೆಯೊಳಕ್ಕೆ ಧಾವಿಸಿದಳು. ಅವರೂ ತನ್ನನ್ನು ಹಿಂಬಾಲಿಸಿ ಬರ ಬಹುದೆಂದು ನಿರೀಕ್ಷಿಸಿದ್ದಳಾಕೆ. ಆದರೆ ಅವರು ಬರಲಿಲ್ಲ.

ಹಾಲನ್ನು ಹದವಾಗಿ ಅಮ್ಮಿ ಬಿಸಿಗೊಳಿಸಿದಳು. ಹೌದೋ ಅಲ್ಲವೋ ಎನ್ನುವಷ್ಟು—ಒಂದು ಚೂರು—ಸಕ್ಕರೆಯನ್ನಾಕೆ ಅದಕ್ಕೆ ಬೆರೆಸಿದಳು.

ಆಕೆಯ ಕೈಯಿಂದ ಇಸಕೊಂಡು ಅದನ್ನು ಕುಡಿಯುತ್ತ, " ಆಹಾ ! ರುಚಿಯಾಗಿದೆ ! " ಎಂದರು ರಾಯರು.

" ಒಳ್ಳೇ ಹಾಲು. ರುಚಿಯಾಗಿರದೆ ಮತ್ತೆ ಹ್ಯಾಗಿರುತ್ತೆ ? "

ಲೋಟ ವಾಪಸು ಕೊಡುವಾಗ ರಾಯರು ತನ್ನ ಕೈ ಮುಟ್ಟಬಹುದೆಂದು ಅಮ್ಮಿ ಭಾವಿಸಿದಳು. ಅದೂ ಆಗಲಿಲ್ಲ.

" ನಾಳೆ ಬರ್ತೀನಿ," ಎನ್ನುತ್ತ ರಾಯರು ಹೊರಟುಹೋದಾಗ, " ಈ ದಿನವೂ ಪಾರಾದೆ " ಎಂದುಕೊಂಡಳು ಅಮ್ಮಿ. ಆದರೆ ಆ ಸಮಾಧಾನದ ಜತೆಯಲ್ಲೆ ಆಕೆಗೆ ಬಲು ಬೇಸರವೂ ಆಯಿತು.

ಮರುದಿನ ಅಕ್ಕಪಕ್ಕದ ಒಬ್ಬಿಬ್ಬರು ಹೆಂಗಸರು ಬಂದು ಹೋದರು. ಅವರು ಬಡವರು. ನಾರಾಯಣರಾಯರ ಸಂಬಂಧಿಕಳೆಂದಾಗ, ಅಮ್ಮಿಯೊಡನೆ ಬಲು ವಿನಯದಿಂದ ಗೌರವ ತೋರುತ್ತ ಅವರು ವರ್ತಿಸಿದರು. ಆ ವರ್ತನೆಗೆ ಕಾರಣ, ಎತ್ತರದ ಗೋಡೆಗಳಿದ್ದ ಹೆಂಚು ಹೊದಿಸಿದ ಆ ಮನೆಯೇ ಎಂಬುದರಲ್ಲಿ ಅಮ್ಮಿಗೆ ಸಂದೇಹವಿರಲಿಲ್ಲ.

ಆ ಸಂಜೆ ಆಳೊಬ್ಬ ದೊಡ್ಡ ಹಾಸಿಗೆ ದಿಂಬುಗಳನ್ನು ಹೊತ್ತು ತಂದ. ಆ ಹಾಸಿಗೆ ಯನ್ನು ನೋಡಿದಾಗ ಅಮ್ಮಿಗೆ ದಿಗಿಲಾಯಿತು. ಈ ದಿನ ತನ್ನ ಪರೀಕ್ಷೆಯೇನೋ ಎಂದು ಕೊಂಡಳು.

ಆದರೆ ಆ ರಾತ್ರೆಯೂ ರಾಯರು ಬಹಳ ಹೊತ್ತು ಅಲ್ಲಿ ನಿಲ್ಲಲಿಲ್ಲ.

ಮೂರನೆಯ ಸಂಜೆ ಅವರು ಮಲ್ಲಿಗೆ ಹೂವಿನ ದಂಡೆಗಳನ್ನು ತಂದರು.

ಅದನ್ನು ಅವರು ತನಗೆ ಮುಡಿಸಬಹುದೇನೋ ಎಂಬ ಗಾಬರಿಯಿಂದ ಸರಿಯಾಗಿ ಉಸಿರಾಡುವುದೂ ಅಮ್ಮಿಗೆ ಸಾಧ್ಯವಾಗಲಿಲ್ಲ. ಅವರು ರಾತ್ರೆಯೂ " ಬೇರೇನಾದರೂ

ಬೇಕೆ ? " ಎಂದು ಕೇಳಿ ಹೊರಟು ಹೋದರು. ತಾನೊಬ್ಬಳೆ ಉಳಿದಾಗ ಅಮ್ಮಿ ಆ ಹೂವಿನ ದಂಡೆಯನ್ನು ಕಣ್ಣಿಗೊತ್ತಿಕೊಂಡಳು. ಅದು ತಪ್ಪಾಯಿತೇನೊ ಎಂಬಂತೆ ಚಡಿಪಡಿಸುತ್ತ ದೇವರ ಪಟದೆದುರು ನಿಂತು, ಅದನ್ನು ತೂಗ ಹಾಕಿದ್ದ ಮೊಳೆಗೆ ಹೂವನ್ನು ಸಿಕ್ಕಿಸಿ, ತಾನು ದೇವರೆದುರಲ್ಲಿ ಮಂಡಿಯೂರಿ ಸ್ವಲ್ಪ ಹೊತ್ತು ಕುಳಿತಳು.

ಆದರೆ ಹೀಗೆಯೇ ಪ್ರತಿ ದಿನವೂ ಆಗುವುದು ಸಾಧ್ಯವೆ ? ತಾನು ಭೀತಿಗೊಂಡಿದ್ದ ಕಾತರಳಾಗಿದ್ದ ಅಂಶವೂ ಒಮ್ಮೆ ಆಗಿಹೋಗಬಾರದೆ ?—ಎಂದುಕೊಂಡಳು ಅಮ್ಮಿ .

...ರಾಯರಿಗೂ ಕೇವಲ ಮಾತುಕತೆ ದುಸ್ಸಹವಾಗಿತ್ತೆಂಬುದು ಆಕೆಗೆ ಆಗ ಅರ್ಥವಾಗಿರಲಿಲ್ಲ. ಅದು ತಿಳಿದುದು, ಆ ಮನೆಗೆ ಬಂದ ಒಂದು ವಾರದ ಬಳಿಕ—ಒಂದು ಸಂಜೆ.

" ಯಾಕೋ ಹಸಿವು ಇವತ್ತು. ಅಡುಗೆ ಮಾಡಿ ಬಡಿಸ್ತೀಯೇನೆ ? "

ಅಮ್ಮಿಗೆ ಸಂತೋಷವಾಯಿತು.

" ಏನೇನು ಮಾಡ್ಲಿ ? "

" ಅಂಥಾದೇನೂ ಬೇಡ. ನೀನು ರಾತ್ರಿಯೆಲ್ಲಾ ನನ್ನನ್ನು ಇಲ್ಲಿ ಕೊಳೆ ಹಾಕಿ ಒಲೆ ಮುಂದೆ ಕೂತುಬಿಟ್ಟೀಯಾ ! ಒಂದಿಷ್ಟು ಅನ್ನ, ಒಂದು ಪಲ್ಯ—ಸಾರು. ಮಜ್ಜಿಗೆ ಇದೆ ತಾನೆ ? "

" ಓ ಇದೆ."

" ಅಷ್ಟು ಸಾಕು."

ಅಮ್ಮಿ ಒಳಹೋಗಿ ಒಲೆಗೆ ಮುಖ ಮಾಡಿದಳು.

ಆಕೆ ನಿರೀಕ್ಷಿಸುವುದಕ್ಕೂ ಅವಕಾಶವಿಲ್ಲದ ಹಾಗೆ ರಾಯರು ಕಳ್ಳ ಹೆಜ್ಜೆಯಿಂದ ಬಂದು, ಆಕೆಯ ತುರುಬು ಹಿಡಿದರು.

" ಅಯ್ಯೋ."

ಘಮ ಘಮ ಎಂದಿತು ಸುವಾಸನೆ. ರಾಯರು ಅಮ್ಮಿಗೆ ಹೂ ಮುಡಿಸಿದರು.

" ಅಯ್ಯೋ ! ಬೇಡಿ ! "

" ನೀನು ಪ್ರತಿ ದಿವಸ್ಲೂ ಹೂನ ದೇವರಿಗೆ ಇಡ್ತಿದ್ದೆ ಅಲ್ಲ ? "

" ............"

" ಈ ದಿನ ನಾನಿಟ್ಟಿದ್ದೀನಿ, ನನ್ನ ದೇವರಿಗೆ."

ಅಷ್ಟು ಹೇಳಿ ರಾಯರು ಆಕೆಯನ್ನು ಹಿಡಿದು ನಿಲ್ಲಿಸಿ ಎರಡು ತೋಳುಗಳಿಂದ ಬಲವಾಗಿ ತಬ್ಬಿಕೊಂಡರು. ಅಮ್ಮಿಗೆ ಬವಳಿ ಬಂದಹಾಗಾಯಿತು. ಆದರೂ, ರಾಯರ ಮುಖ ಆಕೆಯ ಮುಖವನ್ನು ಮುದ್ದಿಡುತ್ತಿದ್ದಾಗಲೇ, ಅಮ್ಮಿಯ ಕೈಗಳು ರಾಯರ ಕೊರಳನ್ನು ಸುತ್ತುವರಿದುವು.

ಅದು ಅಮ್ಮಿಗೆ ಅಪೂರ್ವ ಅನುಭವ. ಪೂರ್ಣ ಕಸುವಿನಿಂದ ಆಕೆ ಆ ಗಂಡಿನ ದೇಹವನ್ನು ತನ್ನೆದೆಗೆ ಎಳೆದುಕೊಂಡಳು...ಅದೆಷ್ಟು ನಿಮಿಷಗಳೊ...ಮತ್ತೆ ಮತ್ತೆ ಅಪ್ಪುಗೆ ...ಬರಬರುತ್ತ ಅಮ್ಮಿಯ ಶಕ್ತಿ ಕುಂದಿತು. ದೇಹ ಬಳುಕಿತು. ಕಾಲುಗಳು ತಡವರಿಸಿದುವು. ಅಲ್ಲೆ ಕುಸಿಬೀಳುವಂತಾದಾಗ ರಾಯರು ಆಕೆಯನ್ನೆತ್ತಿ ಹಿಡಿದರು. ಅವರ ಎಡಗೈ ನಡುವನ್ನು ಬಳಸಿ ಆಧಾರವಾಗಿ ಬಲ ನೀಡಿತು.

ಅಮ್ಮಿ ರಾಯರ ಎದೆಯ ಮೇಲೆ ಮುಖವಿಟ್ಟು ಒಮ್ಮೆಲೆ ಅಳತೊಡಗಿದಳು.

"ಇದೇನೆ ? ಯಾಕೆ ಅಳೋದು ?"

ಅಮ್ಮಿ ಚೇತರಿಸಿಕೊಳ್ಳುತ್ತ ಸೆರಗಿನಿಂದ ಕಣ್ಣೊರೆಸಿಕೊಂಡಳು.

"ಸಂತೋಷದಿಂದ ಅಳೋಣ ಅನ್ನಿಸ್ತು..."

"ಹುಚ್ಚು ಹುಡುಗಿ !"

ಅಮ್ಮಿ ತಲೆಯೆತ್ತಿ ರಾಯರ ಮುಖ ನೋಡಿದಳು. ಅವರು ಸುಂದರರಾಗಿ ತೋರಿದರು. ಆಕೆಯ ಆ ರೂಪರಾಶಿಯೊ ! ಇಂತಹ ಹೆಣ್ಣು ತನ್ನನ್ನೊಲಿದುದು ಪರಮ ಭಾಗ್ಯ ಎಂದುಕೊಂಡರು ರಾಯರು. ಆ ರೂಪ ಅವರದಾಗಿತ್ತು. ಆ ಹೃದಯ ಕೂಡಾ. ತನ್ನನ್ನು ನಂಬಿ ಬಂದಿದ್ದ ಆ ಜೀವವನ್ನು ಆತ್ಮೀಯ ಸ್ನೇಹದಿಂದ ನೋಡುತ್ತ ರಾಯರು ಕುಂಕುಮವಿಲ್ಲದ ಆ ಹಣೆಯನ್ನು ಚುಂಬಿಸಿದರು.

"ಶಂಕರಿ—"

"........."

"ನಿನ್ನನ್ನು ಶಂಕರೀಂತ ಕೂಗ್ಲಾ ? ಅಥವಾ—"

"ನಿಮ್ಮಿಷ್ಟ."

"ಈ ರಾತ್ರೆ ಇಲ್ಲೇ ಇರ್‍ಲಾ ಶಂಕರಿ ?"

"........"

"ನೀನು ಸುಮ್ನಿದ್ದೀಯಾ....ನಿನಗೆ ಒಪ್ಪಿಗೆಯಿಲ್ಲ ಅಂತಾನೋ !"

ಅಮ್ಮಿ ತನ್ನ ಬಲ ಅಂಗೈಯನ್ನು ರಾಯರ ವಿಸ್ತಾರವಾದ ಎದೆಯ ಮೇಲೆ ತೀಡಿದಳು. ಅದನ್ನೆ ಗೋಡೆಯಾಗಿ ಮಾಡಿ ತಲೆಯೊರಗಿಸಿ ಅಲ್ಲೆ ನಿಲ್ಲಬೇಕೆಂಬ ಬಯಕೆಯಾಯಿತು ಅವಳಿಗೆ.

ಅಮ್ಮಿ, ರಾಯರ ಪ್ರಶ್ನೆಗೂ ಸಂದೇಹಕ್ಕೂ ಉತ್ತರ ಕೊಟ್ಟಿರಲಿಲ್ಲ.

"ಹೋಗ್ಲಾ ಹಾಗಾದರೆ ?"

ಅವರು ಹೊರಟೇ ಹೋಗಬಹುದೆಂದು ಅಮ್ಮಿಗೆ ಭಯವಾಯಿತು. 'ಬೇಡಿ' ಎನ್ನುವಂತೆ ಆಕೆ ತಲೆಯಲ್ಲಾಡಿಸಿದಳು—ಆದರೆ ಒಡನೆಯೇ ಅವ್ಯಕ್ತ ಭೀತಿ ಅವಳನ್ನು ಆವರಿಸಿತು. ತಾನು ತಲೆಯಲ್ಲಾಡಿಸಿದ್ದರ ಸಮರ್ಥನೆ ಎಂಬಂತೆ ಆಕೆ ಅಂದಳು :

"ಅಡುಗೆ ಮಾಡ್ತೀನಿ. ಇರಿ."

"ಊಟಕ್ಕೋಸ್ಕರ ತಾನೆ ?"

".............."

"ಸರಿ, ಇರ್‍ತೀನಿ. ಆಗ್ಲೆ ಹೇಳಿದ್ನೆಲ್ಲಾ—ಪಾಲಿಗೆ ಬಂದದ್ದೇ ಪಂಚಾಮೃತ ಅಂತ."

"ನೀವು ತುಂಬಾ ಕೆಟ್ಟೋರು."

"ಏನಂದೆ ?"

"ಏನಿಲ್ಲ...."

ತನ್ನ ಕೈ ಬಿಟ್ಟರೆಂದು ಭಾವಿಸಿದ್ದ ಬೆಂಕಿ ಆರಿಯೇ ಹೋಗಿತ್ತು. ಅಮ್ಮಿ ಮತ್ತೊಮ್ಮೆ ಒಲೆ ಹಚ್ಚಿದಳು. "ಮೆಟ್ಟುಗತ್ತಿ ಕೊಡೆ, ತರಕಾರಿ ಹೆಚ್ತೀನಿ" ಎಂದರು ರಾಯರು. ನೀರು ಬಿಸಿಯೇರಿ ಉಗಿಯಾಡಿತು.

ರಾಯರು, ಆಗಿನ್ನೂ ಬರದೇ ಇದ್ದ ಆಳುಮಗ ತಿಮ್ಮಪ್ಪನ ಗುಣಗಾನ ಮಾಡಿದರು. ಅದೊಂದು ಕತೆ. ಇದೊಂದು ಕತೆ. ಸುಮ್ಮಸುಮ್ಮನೆ 'ಹೂಂ' 'ಹೂಂ' ಎಂದಳು ಅಮ್ಮಿ ....

ಊಟವಾಯಿತು. ಆಳು ತಿಮ್ಮಪ್ಪ ತಾನು ಬಂದೆನೆಂದು ವರದಿಯೊಪ್ಪಿಸಿ ಅಂಗಳದ ಹಟ್ಟಿಗೆ ಹೋದ.

ಚಿಗುರೆಲೆಗೆ ಸೂಕ್ಷ್ಮವಾಗಿ ಸುಣ್ಣ ಹಚ್ಚಿ, ಸುಗಂಧದ ಅಡಿಕೆ ಇಟ್ಟು ಮಡಚಿ, ಅಮ್ಮಿಯ ಬಾಯಿಗೆ ರಾಯರು ಅದನ್ನು ತುರುಕಿದರು. ಬಳಿಕ ಇನ್ನೊಂದನ್ನು ಹಾಗೆಯೇ ಮಡಚಿದರು.

"ಇದನ್ನು ಏನ್ಮಾಡ್ಬೇಕು ಗೊತ್ತಾ ?"

"ಊ ಹೂಂ..."

"ಸಾಕು ನಾಚಿಕೆ."

"ತನ್ನಿ."

ಅದನ್ನು ತಾನೆತ್ತಿಕೊಂಡು ಅಮ್ಮಿ ರಾಯರ ಬಾಯಿಗೆ ತುರುಕಿದಳು.

ರಾಯರು ಅಮ್ಮಿಯ ಕೈ ಹಿಡಿಯ ಬಂದರೂ ಆಕೆ ತಪ್ಪಿಸಿಕೊಂಡಳು.

"ಅಬ್ಬ ! ನನ್ನ ದೇವರು ಮಹಾ ಜಿಪುಣ ! ಇನ್ನೂ ಪ್ರಸನ್ನವಾಗೋ ಸ್ಥಿತೀಲೇ ಇಲ್ಲ..."

ಆ ಮಾತುಗಳನ್ನು ಕೇಳುತ್ತಲಿರುವುದೇ ಅಮ್ಮಿಯ ಪಾಲಿಗೆ ದೊಡ್ಡ ಸುಖವಾಗಿತ್ತು. ಜೀವನದಲ್ಲಿ ಆವರೆಗೂ ಆಕೆಗೆ ದೊರೆಯದೇ ಹೋಗಿದ್ದ ಸವಿಯೆಲ್ಲ ಒಮ್ಮೆಲೆ ಅಪಾರ ರಾಶಿಯಾಗಿ ಒದಗಿಬಂದಿತ್ತಲ್ಲ ?

ಹೊಸತಾಗಿ ಬಂದಿದ್ದ ಹಾಸಿಗೆ. ಸುರುಳಿಯಾಗಿದ್ದುದು ಅರಳಿಕೊಂಡಿತು ಆ ರಾತ್ರೆ.

ದೀಪ ಕಣ್ಣು ಮುಚ್ಚಿತು.

ಆವರೆಗೂ ಅಮ್ಮಿ ಅದುಮಿ ಹಿಡಿದಿದ್ದ ಯೌವನದ ಅಭಿಲಾಷೆಗಳೆಲ್ಲ, ಹೊರಹೋಗಲು ಹಾದಿ ದೊರೆಯಿತೆಂದು, ಕಣ್ಣು ಹೊಸೆದು ಎಚ್ಚತ್ತು ಮೈ ನಿಡಿದುವು.

ಏನೂ ತಿಳಿಯದವಳು ಅಮ್ಮಿ.

ತಿಳಿದಿದ್ದ ರಾಯರು ಆಕೆಯನ್ನು ಸುಖಿಯಾಗಿ ಮಾಡಿದರು.

ಆ ರಾತ್ರೆ ಅವರಿಬ್ಬರು ನಿದ್ದೆ ಹೋಗುವುದು ಸಾಧ್ಯವಿರಲಿಲ್ಲ.

ಅಮ್ಮಿಯ ಮನಸ್ಸು ತೃಪ್ತವಾಗಿತ್ತು, ಮೆದುಳು ಶಾಂತವಾಗಿತ್ತು. ಆಕೆ ಈಗ ಯೋಚಿಸುತ್ತಿರಲಿಲ್ಲ.

ಹೊಲದ ಬೇಲಿ ದಾಟಿ ಏರಿಯನ್ನೇರಿದ್ದ ಹೆಣ್ಣು ಜೀವ. ಧರ್ಮದ ಕಟ್ಟುಪಾಡುಗಳ ಕೈದಿಯಾಗಿದ್ದ ಬನಶಂಕರಿ ಬಂಧಮುಕ್ತಳಾಗಿದ್ದಳು. ಪಾಪದ ಬೆದರಿಕೆಯೊ ? ನರಕದ ಭೀತಿಯೊ ? ಅಮ್ಮಿ ಅದನ್ನು ಕುರಿತು ಚಿಂತಿಸಿರಲಿಲ್ಲ. ಆಕೆ ಯಾಕೆ ಹಾಗಾದಳು ? ಗಂಡಿನ ಬಗೆಗೆ ಪ್ರೀತಿಯೆ ? ಆಶ್ರಯವಿತ್ತವನ ವಿಷಯವಾಗಿ ಕೃತಜ್ಞತೆಯೆ ? ಯೌವನದ ಬಯಕೆಯೆ ? ತನ್ನ ಬಾಳ್ವೆಯ ಬಳ್ಳಿ ಒಣಗಿ ಸಾಯಬಾರದು, ಅದು ಚಿಗುರಬೇಕು, ಎಂಬ ಆಸೆಯೆ ? ಈ ಕಾರಣಗಳ ಬಗೆಗೂ ಅಮ್ಮಿ ಯೋಚಿಸಲಿಲ್ಲ.

ಮುಂಜಾವದಲ್ಲಿ ಸುಖಸ್ವಪ್ನ ಕಾಣುತ್ತ ಅಮ್ಮಿ ನಿದ್ದೆಹೋದಳು.

ಇರುಳು ಕಳೆದು ಬೆಳಗಾಯಿತು.

ಅರೆ ಎಚ್ಚರದಲ್ಲಿ ಅಮ್ಮಿ ತಡವರಿಸಿದಾಗ ಆಕೆಯ ಕೈಗೆ ದೊರೆತುದು ಹಾಸಿಗೆಯ ಸ್ಪರ್ಶ ಸುಖ ಮಾತ್ರ. ಗಾಬರಿಯಾಗಿ ಆಕೆ ಕಣ್ಣು ತೆರೆದಳು. ಅಲ್ಲಿ ರಾಯರಿರಲಿಲ್ಲ. ರಾತ್ರೆ ಏನಾಗಿತ್ತು ತನಗೆ? ತಾನು ಕಂಡುದು ಬರಿಯ ಸ್ವಪ್ನವೆ?

ಅಮ್ಮಿಯ ಮುಖದಲ್ಲಿ ಮುಗುಳು ನಗು ಮೂಡಿತು. ರಾಯರು ಮಾಮೂಲಿನಂತೆ ನದೀ ಸ್ನಾನಕ್ಕೆ ಹೋಗಿರಬೇಕು.

ನದಿ, ನದಿಯ ದಂಡೆ......

—ಮೊದಲ ಬಾರಿ ನಾರಾಯಣರಾಯರು ತನ್ನ ತಲೆಗೂದಲು ನೇವರಿಸಿದ್ದು. ಆ ಆಹ್ವಾನ, ಆಶ್ವಾಸನೆ. ಅಲ್ಲಿಂದ ಇಷ್ಟು ದಿನಗಳಾದ ಮೇಲೆ ಈಗ—

ಅಮ್ಮಿ ತನ್ನಷ್ಟಕ್ಕೆ ಅಂದುಕೊಂಡಳು : ಅವರು ಒಳ್ಳೆಯವರು, ತುಂಬಾ ಒಳ್ಳೆಯವರು. ಗಂಡನೆಂಬ ಅಧಿಕಾರದ ಭಾವನೆಯಿಂದ ಅವರು ವರ್ತಿಸಲಿಲ್ಲ. ತನ್ನ ಮನಸ್ಸು ನೋಯಿಸು ವಂತಹದೇನನ್ನೂ ಅವರು ಮಾಡಲಿಲ್ಲ. ತನ್ನ ಪಾಲಿನ ದೇವರು ಆತ...

ರಾಯರು ನಸುಕಿನಲ್ಲೆ ಹೊರಟುಹೋದರು. ಆ ಸಂಜೆ ವಾಪಸು ಬಂದರು.

ಪ್ರತಿ ದಿನವೂ ಸಂಜೆಯಾಗುವುದನ್ನೆ ಕಾದಿರುತ್ತಿದ್ದಳು ರಾಯರ ಶಂಕರಿ. ಅವರು ಬರುವುದು ತಡವಾದರೆ ಆಕೆಗೆ ಕಸಿವಿಸಿಯಾಗುತ್ತಿತ್ತು.

"ತಿಮ್ಮಪ್ಪ, ಸಂಜೆ ಹೊತ್ಗೆ ಅವರ್ನ ಕಂಡಿದ್ಯಾ?" ಎಂದು ಆಳನ್ನು ಕೇಳುತ್ತಿದ್ದಳು.

ಮುದುಕನಿಗೆ ತಮಾಷೆ ಎನಿಸುತ್ತಿದ್ದರೂ ತನ್ನ ಸ್ಥಾನಮರ್ಯಾದೆಯನ್ನು ಮೀರದೆ ಆತ ಮಾತನಾಡುತ್ತಿದ್ದ.

"ಬುದ್ಧಿಯೋರು ದೇವಸ್ಥಾನದಾಗೇ ಇದ್ರು ಕಣ್ರವ್ವ...ಇನ್ನೇನು ವಸಿ ಒತ್ನಾಗೆ ಬಂದ್ಬಿಡ್ತಾರೆ."

ಹಾಗೆ ಸ್ವಲ್ಪ ಹೊತ್ತಿನೊಳಗೆ ಬನಶಂಕರಿಯ 'ಅವರು' ಬರುತ್ತಿದ್ದರು.

"ಇನ್ನೇನು ಬಂದ್ಬಿಡ್ತಾರೆ ಅಂತಿದ್ದ ತಿಮ್ಮಪ್ಪ. ಅಷ್ಟರೊಳ್ಗೆ ನೀವು ಬಂದೇ ಬಿಟ್ರಿ!" ಎಂದು ರಾಯರೊಡನೆ ಅಮ್ಮಿ ಆಗ ಹೇಳುತ್ತಿದ್ದಳು.

"ಯಾರು-ತಿಮ್ಮಪ್ಪ ತಾನೆ? ಅಯ್ಯೊ ಬಿಡು, ಆತ್ನಿಗೆ ತಿಳೀದೆ ನನ್ನ ಹೊತ್ತು ಗೊತ್ತು?" ಎನ್ನುತ್ತಿದ್ದರು ರಾಯರು.

ಆದರೆ ಎಷ್ಟು ಹೊತ್ತಾದರೂ ಅವರು ಬರದೇ ಇದ್ದಾಗ ಅಮ್ಮಿ ತಿಮ್ಮಪ್ಪನಿಗೆ ದೂರು ಕೊಡುತ್ತಿದ್ದಳು.

"ಅವರು ಬರಲೇ ಇಲ್ವಲ್ಲೊ?"

"ಬರ್ತಾರೆ ಬಿಡ್ರವ್ವ...ನೀವು ಊಟ ಮಾಡಿ, ಮನಿಕ್ಕೊಂಡ್ಬಿಡಿ..."

ತಿಮ್ಮಪ್ಪ ಹಾಗೆ ಸಲಹೆ ನೀಡಿದಾಗ ಅಮ್ಮಿಗೆ ರೇಗುತ್ತಿತ್ತು.

"ಥೂ! ತುಂಬ ಕೆಟ್ಟವನು ಈ ತಿಮ್ಮಪ್ಪ..." ಎಂದು ಮನಸ್ಸಿನಲ್ಲೆ ಗೊಣಗುತ್ತಿದ್ದಳು.

ಆದರೆ ಅಮ್ಮಿ ಉಣ್ಣುತ್ತಲೇ ಇರಲಿಲ್ಲ. ರಾಯರು ಬರದೇ ಇದ್ದ ರಾತ್ರೆ ಅಡುಗೆ ಹಾಳಾಗುತ್ತಿತ್ತು.

"ನೀನು ಯಾವತ್ತೂ ನನಗೋಸ್ಕರ ಕಾಯ್ಬಾರ್ದು ಶಂಕರಿ," ಎಂದು ರಾಯರು ಹೇಳುವ ರೂಢಿಯೇನೋ ಇತ್ತು. ಆದರೆ ಶಂಕರಿ ಕಾಯದಿರುತ್ತಿರಲಿಲ್ಲ.

ಕೆಲವೊಮ್ಮೆ ರಾಯರು ರಾತ್ರೆ ಹೊತ್ತು ತಮ್ಮ ಮನೆಯಲ್ಲೇ ಇರುತ್ತಿದ್ದರು. ಅಥವಾ ಅಮ್ಮಿಯ ಸಾಮೀಪ್ಯದಲ್ಲಿ ಸ್ವಲ್ಪ ಹೊತ್ತಿದ್ದು ಮನೆಗೆ ತೆರಳುತ್ತಿದ್ದರು. ಆಗ ಅಮ್ಮಿಗೆ ವ್ಯಥೆಯಾಗುತ್ತಿತ್ತು. ಅವರು ತನ್ನೊಬ್ಬಳದೇ ಸೊತ್ತಾಗಿರಬೇಕೆಂಬ ಆಸೆ ಮೊಟಕಾಗಿ, ಆಕೆಗೆ ಅವಮಾನವೆನಿಸುತ್ತಿತ್ತು.

ಒಂದು ರಾತ್ರೆ ತನ್ನ ತೋಳನ್ನೆ ಅಮ್ಮಿಗೆ ತಲೆದಿಂಬಾಗಿ ಮಾಡಿ ರಾಯರೆಂದರು :

"ನೀನು ಸುಖವಾಗಿದೀಯಾ ಶಂಕರಿ ?"

"ಇದೀನಿ. ನಿಮ್ ಪುಣ್ಯದಿಂದ."

"ನಿನ್ನನ್ನು ಸಂಪಾದ್ಸಿರೋ ನಾನು ಪುಣ್ಯವಂತ."

"ನಿಮಗೆ ನನ್ನಿಂದಾಗಿ ಎಷ್ಟೊಂದು ತೊಂದರೆ—"

"ನಿನ್ನಿಂದ ತೊಂದರೆ ?"

"ಎಷ್ಟೊಂದು ಖರ್ಚು..."

"ಸಾಕು ಸುಮ್ನಿರೆ !"

ಆದರೆ ಅಮ್ಮಿ ಸುಮ್ಮನಿರುವ ಲಕ್ಷಣ ಕಾಣಿಸಲಿಲ್ಲ. ರಾಯರು ಆಕೆಯ ತುಟಿಗಳ ಮೇಲೆ ತನ್ನ ತುಟಿಗಳನ್ನಿಟ್ಟು ಮಾತು ಹೊರಡದಂತೆ ಮಾಡಿದರು.

ಮತ್ತೊಮ್ಮೆ ಅವರೇ ಅಂದರು :

"ಒಂದೊಂದ್ಸಾರಿ ನನಗೆ ವ್ಯಥೆಯಾಗುತ್ತೆ ಶಂಕರಿ."

ಆ ಮಾತು ಕೇಳಿದಾಗ ಅಮ್ಮಿ ಗಾಬರಿಯಾದಳು.

"ಹೇಳಿ ನಾನೇನಾದ್ರೂ ತಪ್ಪು ಮಾಡಿದ್ನೆ ?"

"ನೀನಲ್ಲ ಶಂಕರಿ. ತಪ್ಪು ಮಾಡ್ದೋನು ನಾನು."

"ಬೇಡಿ. ಯಾಕೆ ಹಾಗಂತೀರಾ ?"

"ನಾನು ಮಾಡ್ತಿರೋದು ಸರೀಂತ ಯಾವ ಮುಖದಿಂದ ಹೇಳ್ಲಿ ?"

"ಯಾರಿಗೆ ಹೇಳ್ಬೇಕಾಗಿದೆ ಈಗ ?"

"ಲೋಕ—"

"ಸಾಕು, ಲೋಕದ ವಿಷಯ !" ಎಂದು ಅಮ್ಮಿ ರಾಯರ ತುಟಿಗಳ ಮೇಲೆ ಬೆರಳನ್ನಿಟ್ಟು ಅವರ ಮಾತು ನಿಲ್ಲಿಸಿದಳು.

ಆದರೆ ಆಕೆಯ ಎದೆಗುಂಡಿಗೆ ಡವಡವನೆ ಹೊಡೆದುಕೊಂಡಿತು. ನೆರೆಹೊರೆಯವರಿಗೆಲ್ಲ ತಿಳಿದಿತ್ತು ತಮ್ಮ ಕತೆ. ಊರಿನ ಕೆಲವರಿಗೆ ಕೂಡಾ. ಲೋಕ—

ರಾಯರು ಇಟ್ಟುಕೊಂಡ ಹೆಂಗಸಾಗಿದ್ದಳು ಬನಶಂಕರಿ.

ಎದುರೇನೋ ಯಾರೂ ಗೇಲಿ ಮಾಡುತ್ತಿರಲಿಲ್ಲ; ಗೌರವಿಸುತ್ತಲೇ ಇದ್ದರು. ಆದರೆ ಅಮ್ಮಿಗೆ ತಿಳಿದಿತ್ತು : ಆ ಗೌರವದ ನಾಟಕಕ್ಕೆ ಕಾರಣ ಆಕೆಯಲ್ಲ—ಆಕೆಯ ಹಿಂದಿದ್ದ ವ್ಯಕ್ತಿ.

"ಯಾರಾದರೂ ಏನಾದರೂ ಅಂದ್ರಾ ಶಂಕರಿ ?"

"ಇಲ್ವಲ್ಲಾ. ನಿಮ್ ಪುಣ್ಯದಿಂದ ಯಾರೂ ನನ್ನ ತಂಟೆಗೆ ಬರೊಲ್ಲ."

ಅವರೆಗೆ ಅದು ನಿಜವಾಗಿತ್ತು. ಆದರೆ ಸದಾ ಕಾಲವೂ ಹಾಗೆಯೇ ಇರುವುದು ಸಾಧ್ಯವಿತ್ತೆ ?

" ...ನೀನು ನನ್ನನ್ನು ನಿಜವಾಗ಼್ೂ ಪ್ರೀತಿಸ್ತೀಯಾ ಶಂಕರಿ ? "

" ಯಾಕೆ ಹಾಗಂತೀರಾ ? "

" ನಾನು ನಿನಗೆ ರಕ್ಷಣೆ ಕೊಟ್ಟೆ ಅಂಥ ಕೃತಜ್ಞತೆ ಅಲ್ವೆ ? "

" ನೀವು ನನ್ನ ದೇವರು."

" ದೇವರಲ್ಲಿಡೋದು ಭಯಭಕ್ತಿ. ಆತನನ್ನು ಪ್ರೀತಿಸ್ತಾರೇನು ? "

" ನೀವು ನಾನು ಪ್ರೀತಿಸೋ ದೇವರು."

" ಮಾತ್ನಲ್ಲಿ ಜಾಣೆ ನೀನು..."

ತನಗೆ ದೊರೆತಿರುವುದು ಬರಿಯ ದೇಹವಲ್ಲ, ಮನಸ್ಸು ಕೂಡಾ—ಎಂಬುವನ್ನು ಅಮ್ಮಿಯ ಬಾಯಿಯಿಂದಲೇ ನೂರು ಸಾರಿ ಕೇಳಿದರೂ ರಾಯರಿಗೆ ತೃಪ್ತಿ ಇರುತ್ತಿರಲಿಲ್ಲ.

" ನಾನು ನಿನಗಿಂತ ವಯಸ್ನಲ್ಲಿ ದೊಡ್ಡೋನೂಂತ ಬೇಸರವೆ ? "

" ಎಲ್ಲಿ, ದೊಡ್ಡತನ ಕಾಣಿಸ್ಲೇ ಇಲ್ಲ ? "

" ತಮಾಷೆಯಲ್ಲ ಶಂಕರಿ. ನನಗೀಗ ಎಷ್ಟು ವಯಸ್ಸೂಂತ ತಿಳ್ಕೊಂಡೆ? ನಾಲ್ವತ್ತೊಂದು ! ನಿನಗಿಂತ ಹದಿನೈದು ಹದಿನಾರು ವರ್ಷ ದೊಡ್ಡೋನು ನಾನು ! "

" ಏನು ಮಹಾ ಅಂತ ಆ ಮಾತೆಲ್ಲ ಆಡ್ತೀರೊ ! ಯಾಕೆ ಹೀಗೆ ಗೋಳಾಡಿಸ್ತೀರೊ ? "

" ಹೋಗಲಿ ಬಿಡು, ಬೇರೆ ಮಾತಾಡೋಣ..."

ಆದರೆ ಆಗಾಗ್ಗೆ ಅಮ್ಮಿಯ ಮನಸ್ಸಿನ ನೆಮ್ಮದಿ ಕದಡುತ್ತಿತ್ತು. ಹೂವಿಲ್ಲದ ಹೆರಳು, ಹಾರವಿಲ್ಲದ ಕೊರಳು, ಬರಿಗೈ, ಬೋಳಾದ ಹಣೆ...ಎಲ್ಲರ ಹಾಗೆ ಗಂಡಂದಿರೊಡನೆ ಬಾಳ್ವೆ ನಡೆಸುವ ಭಾಗ್ಯ ತನಗಿತ್ತೆ ? ತಾನೇನೊ ರಾಯರಿಗೆ ಸರ್ವಸ್ವವನ್ನೂ ಅರ್ಪಿಸಿದ್ದಳು. ಆದರೆ ಅವರ ಪಾಲಿಗೆ ತಾನೇ ಸರ್ವಸ್ವವಾಗಿದ್ದೆನೆ ? ಅವರ ಹೆಂಡತಿ, ನಾಲ್ವರು ಮಕ್ಕಳು-ಅವರಿಗೂ ರಾಯರ ಪ್ರೀತಿಯಲ್ಲಿ ಒಂದು ಪಾಲು ದೊರೆಯುತ್ತಿತ್ತಲ್ಲ?...ಆ ಮಟ್ಟಿಗೆ ತಾನು ನಿರ್ಭಾಗ್ಯೆ...ಆ ಸುಖವನ್ನು ಬ್ರಹ್ಮ ತನಗೆ ದಯೆಪಾಲಿಸಲಿಲ್ಲ.

ಅಮ್ಮಿಯನ್ನು ಸುಖಿಯಾಗಿಡಲು ಏನೇನು ಸಾಧ್ಯವೋ ಅದನ್ನೆಲ್ಲ ರಾಯರು ಮಾಡಿದರು. ತಾನೇ ಒಂದು ದಿನ, ಅಮ್ಮಿಯ ಕತ್ತಿಗೆ ಎರಡೆಳೆಯ ಹಾರ ಹಾಕಿದರು: ಬೊಟ್ಟಿಟ್ಟರು; ಹೂ ಮುಡಿಸಿದರು. ಎದುರು ನಿಲುವುಗನ್ನಡಿ ಹಿಡಿದುನಿಂತು, ಆಕೆ ಆನಂದದಿಂದ ಅಳುವಂತೆಯೂ ನಗುವಂತೆಯೂ ಮಾಡಿದರು.

...ಒಂದು ತಿಂಗಳು ಮುಟ್ಟಾಗಲಿಲ್ಲ ಅಮ್ಮಿ. ಆಮೇಲೊಮ್ಮೆ ಆಕೆ ವಾಂತಿ ಮಾಡಿದಳು. ಸುಂದರಮ್ಮನಿಗೆ ಹಿಂದೆ ಹಾಗೆ ಆಗಿದ್ದುದರ ನೆನಪಾಗಿ, ಅದರ ಅರ್ಥವಾಗಿ, ಮುಖ ಕೆಂಪ ಗಾಯಿತು—ಕಪ್ಪಗಾಯಿತು. ರಾಯರು ಏನೆನ್ನುವರೋ ಎಂಬ ಭಯವಾಯಿತು.

ಹಾಲು ಹಸುಳೆಯ ಪಾಲನೆಯಲ್ಲಿದ್ದ ಸುಂದರಮ್ಮ ಬನಶಂಕರಿಯನ್ನು ನೋಡಲು ಬಂದೇ ಇರಲಿಲ್ಲ. ತಿಮ್ಮಪ್ಪನನ್ನೇನೋ ಒಂದೆರಡು ಸಾರೆ ಅಮ್ಮಿ ಅಲ್ಲಿಗೆ ಕಳಿಸಿದ್ದಳು-ಮಕ್ಕಳು ಹೇಗಿವೆಯೆಂದು ನೋಡಿಕೊಂಡು ಬರಲು. ಆಗ ಸುಂದರಮ್ಮ ಅಂದಿದ್ದಳಂತೆ: " ಇನ್ನು ಸ್ವಲ್ಪ ದಿವ್ಸ...ಆಮೇಲೆ ಬಂದು ನೋಡ್ಕೊಂಡು ಹೋಗ್ತೀನಿ ಅಂತ ಹೇಳು."

ಕೆಲವಲ್ಲ, ಹಲವು ದಿನಗಳಾಗಿದ್ದುವು ಆ ಮಾತಿಗೆ.

ತಿಮ್ಮಪ್ಪನನ್ನು ಕರೆದು ಅಮ್ಮಿ ಹೇಳಿದಳು :

" ಒಂದು ಕೆಲಸ ಮಾಡ್ತೀಯೇನಪ್ಪ ? "

" ಹೇಳಿ ತಾಯಿ."

" ರಾಮಶಾಸ್ತ್ರಿಗಳ ಮನೆಗೆ ಹೋಗ್ಬಿಟ್ಟು ಈಗಿಂದೀಗ ಬರ್ಬೇಕಂತೆ ಅನ್ನು. ಮೈ ಚೆನ್ನಾಗಿಲ್ಲ, ಬರ್ಲೇಬೇಕಂತೆ, ಅಂತ ಹೇಳು."

ಮೈ ಚೆನ್ನಾಗಿಲ್ಲ ಎಂದಾಗ, ತಿಮ್ಮಪ್ಪನೂ ಗಾಬರಿಯಾದ.

" ಏನಾಗೈತಮ್ಮಣ್ಣೀ ? " ಎಂದ.

" ಸುಮ್ನೆ ಹೋಗಿ ಹೇಳೊ " ಎಂದು ಅಮ್ಮಿ ಮುನಿಸಿಕೊಂಡು ಗದರಿಕೆಯ ಧ್ವನಿಯಲ್ಲೇ ಅಂದಳು.

...ಎಲ್ಲ ಕೆಲಸವನ್ನೂ ಬಿಟ್ಟು ಓಡಿ ಬಂದಳು ಸುಂದರಮ್ಮ.

" ಅಂತೂ ಬಂದೆಯಲ್ಲಾ ಅಕ್ಕಾ ! "

" ಬರದೆ ಇರ್ತೀನೇನೆ ? "

" ಮಕ್ಕಳು ? "

" ಮಕ್ಕಳನ್ನೂ ಮನೇನೂ ಅವರ ವಶಕ್ಕೆ ಒಪ್ಪಿಸ್ಬಿಟ್ಟು ಬಂದೆ. ಏನಾಯಿತೇ ನಿಂಗೆ ? "

ಮೈ ತುಂಬಿಕೊಂಡು, ಗೆಳತಿಯ ಮೆಚ್ಚುಗೆಯ ಮಾತನ್ನು ಇದಿರು ನೋಡುತ್ತ, ಅಮ್ಮಿ ನಿಂತಿದ್ದಳು. ಏನಾಗಿತ್ತು ಅವಳಿಗೆ ?

ಸುಂದರಮ್ಮ ಬೆರಗುಗಣ್ಣಿನಿಂದ ಅಮ್ಮಿಯನ್ನು ನೋಡಿದಳು. ಹತ್ತಿರ ಬಂದು ಕೈ ಮುಟ್ಟಿದಳು. ಮೈ ಮುಟ್ಟಿದಳು.

" ನೀನು ಬನಶಂಕರೀನೆ ತಾನೆ ? "

" ಹೋಗಕ್ಕ ! "

" ನಾನು ಬಂದಿದೀನಿ. ಕಾಹಿಲೆ ಏನು ಹೇಳು ? "

" ನಂಗೊತ್ತಿಲ್ಲ..."

" ಮತ್ತೆ ? "

" ವಾಂತಿಯಾಯ್ತು ಎರಡು ಸಾರಿ."

" ಇಷ್ಟೇನೇ ! ಎಲ್ಲಿ ಒಂದಿಷ್ಟು ಸಿಹಿ ಹಾಕು ನನ್ನ ಬಾಯಿಗೆ ! "

ಅಷ್ಟೇ. ಸುಂದರಮ್ಮನಿಗೆ ಮಾತ್ರ ಸಿಹಿ. ಸಂತೋಷದ ವಾರ್ತೆಯೆಂದು ಸಿಹಿ ತಿಂಡಿಯನ್ನು ಕೇಳುವ ಸಂಬಂಧಿಕರು ಅಮ್ಮಿಗೆ ಯಾರಿದ್ದರು ?

ಸುಂದರಮ್ಮ ಬನಶಂಕರಿಯನ್ನು ಲೇವಡಿ ಮಾಡಿದಳು. ಆಕೆಯೊಡನೆ ಲಲ್ಲೆಯಾಡಿದಳು ; ನಗೆ ಮಾತಾಡಿದಳು.

" ನಿನ್ನನ್ನು ಅಣಕಿಸೋರನ್ನು ಸುಟ್ಟಿತು," ಎಂದು ಗೊಣಗಿದಳು.

" ಎಷ್ಟು ಜನಕ್ಕಿದೆ ಈ ಸುಖ ? " ಎಂದು ಸವಾಲು ಹಾಕಿದಳು.

ಮೊದಲ ಮಾತಿನ ರಭಸ ಕಡಿಮೆಯಾದ ಮೇಲೆ, ವಿವೇಚನೆಯ ಹಿನ್ನೆಲೆಯಲ್ಲಿ ಸುಂದರಮ್ಮನ ಮಾತು ಬಂತು.

" ಅವರಿಗೆ ಹೇಳಿದೀಯಾ ? "

" ಇನ್ನೂ ಇಲ್ಲ."

" ಹೇಳಿ ನೋಡು. ಏನಂತಾರೊ ? "

" ಯಾಕೆ ಅಕ್ಕಾ ? ಅವರಿಗೆ ಸಂತೋಷವಾಗಲ್ವೆ ? "

ಬನಶಂಕರಿ ತಾಯಿಯಾಗುವ ಸ್ಥಿತಿಯಲ್ಲಿದ್ದರೂ ಎಳೆಯ ಹಸುಳೆಯೇ ಆಗಿದ್ದಳಲ್ಲ ?

" ಆಗದೇನು ಬನೂ ? ಆದರೆ ಗಂಡಸರ ವಿಷಯ ಹೀಗೇಂತ ಹೇಳೋಕಾಗಲ್ಲ."

" ನಂಗೊತ್ತು ಅಕ್ಕಾ. ಸಂತೋಷವಾಗುತ್ತೆ. ಅವರು ನನ್ನನ್ನು ಪ್ರೀತಿಸ್ತಾರೆ."

ಸುಂದರಮ್ಮ ನಿರುತ್ತರಳಾದಳು. ಆದರೂ ಚೇತರಿಸಿಕೊಂಡು ಆಕೆ ವಿವೇಕದ ಮಾತನ್ನಾಡಿದಳು.

" ನಿನಗೆ ತಾಯಿಯಾಗ್ಬೇಕೂಂತ ಆಸೆ ಇದೆಯಾ ಬನೂ ? "

ಬನಶಂಕರಿಯ ಮುಖ ಕೆಂಪಗಾಯಿತು.

" ಹೀಗೆ ಕೇಳಿದೇಂತ ಕೋಪಿಸ್ಕೋಬೇಡವಮ್ಮ. ತಾಯಿಯಾದ್ಮೇಲೆ ಎಷ್ಟೊಂದು ಮಾತು ಕೇಳ್ಬೇಕಾಗುತ್ತೆ ಗೊತ್ತೆ ?-ನೀನು, ನಿನ್ಮಗು, ಇಬ್ರೂನೂ ? "

" ಅಕ್ಕಾ—"

" ಯಾಕೆ ಬನೂ ? ಕೆಟ್ಟ ಮಾತಾಡಿ ನಿನ್ನ ಮನಸ್ಸ ನೋಯಿಸ್ತಿದೇನೆಯೇ ? "

" ಈಗ ನಾನು ಕೇಳ್ತಿರೋ ಮಾತು ಕಡಿಮೆಯೆ ಅಕ್ಕ ? "

" ಅದು ನಿಜ ಕಣೇ...ಆದರೆ ಅವರ ವಿಚಾರ ? ಈಗ ನೀನು ಅವರಿಗೆ ಬೇಕು. ನಾಳೆ ಮಗು ನಿಮ್ಮಿಬ್ಬರ ನಡುವೆ ಬಂದಾಗ ? "

" ಅವರು ಒಳ್ಳೇವರು ಅಕ್ಕಾ. ನನ್ನ ಭಾಗದ ದೇವರು."

" ಒಪ್ದೆ ಬನೂ. ಆದರೂ ಅವರು ಮಗು ಬೇಡ ಅನ್ತಾರೆ ಎಂದಿಟ್ಕೊ."

" ಅಂದರೆ—! "

" ಅರ್ಥ ಆಗಲ್ವೇನು ? "

" ಆಗೋದನ್ನು ತಪ್ಪಿಸೋದುಂಟೆ ಅಕ್ಕಾ ? "

" ಉಂಟು ತಾಯಿ. ಅದಕ್ಕೇ ಹೇಳಿದೀನಿ. ಅವರಿಗೆ ಒಪ್ಗೆ ಇಲ್ದೇ ಹೋದ್ರೆ ಏನಾದರೂ ಕೆಟ್ಟ ಕಷಾಯ ಅವರು ತಂದ್ಕೊಡ್ಬಹುದು—ಮೈ ಕಳೀಲೀಂತ......"

ಅಮ್ಮಿಯ ಮೈ ನಡುಗಿತು. ದೇಹ ತಣ್ಣಗಾಯಿತು. ಆ ತಣುಪಿನಲ್ಲೂ ಪುಟಾಣಿ ಮುತ್ತುಗಳ ಹಾಗೆ ಬೆವರಹನಿಗಳು ಆಕೆಯ ಹಣೆಯ ಮೇಲೆ ಸಾಲುಗೊಂಡುವು.

ಸುಂದರಮ್ಮನ ಜತೆಯಲ್ಲಿ ಸಂತೋಷವಾಗಿರಬೇಕೆಂದು ಅಮ್ಮಿ ಬಯಸಿದ್ದರೆ, ಮಾತು ಈ ರೀತಿ ಹೊರಳಬೇಕಾಯಿತೆ ?

ಬನಶಂಕರಿಯನ್ನು ಸಂಕಟಕ್ಕೀಡು ಮಾಡಿದೆನೆಂದು ಸುಂದರಮ್ಮನಿಗೆ ಕೆಡುಕೆನಿಸಿತು. ಮತ್ತೊಮ್ಮೆ ಗೆಳತಿಯ ಮುಖದ ಮೇಲೆ ಮುಗುಳು ನಗು ಬರಿಸಬೇಕೆಂಬ ಉದ್ದೇಶದಿಂದ ಆಕೆ ಏನೇನನ್ನೊ ಮಾತನಾಡಿದಳು.

" ಬನೂ...ನನಗೇನು ಆಸೆಯಾಗುತ್ತೆ ಗೊತ್ತಾ ? ನಿನಗೆ, ನಿನ್ನ ಹಾಗೆಯೇ ಮುದ್ದು ಮುದ್ದಾದ ಗಂಡು ಮಗು ಹುಟ್ಬೇಕು...ಆ ಮಗು ದೊಡ್ಡೋನಾದಾಗ ಊರಿಗೆ ಊರೇ ಆತನನ್ನ ಗೌರವಿಸೋ ಹಾಗೆ ಆಗ್ಬೇಕು...ಆ ಮುದ್ದೂಗೆ ಏನು ಹೆಸರಿಡ್ಬೇಕು ಗೊತ್ತಾ ? ರಾಜ-ರಾಜಾ ಅಂತ..."

ಆ ಪದಗಳು ಅತಿ ಇಂಪಾದ ಸ್ವರದ ಅಲೆಗಳಾಗಿ ಅಮ್ಮಿಯ ಕಿವಿಯೊಳಕ್ಕೆ ಹೊಕ್ಕುವು.

...ಗಂಡು ಮಗು...ಮುದ್ದು...ರಾಜ...ರಾಜಾಂತ...

"ಆಮೇಲೆ—ಆಮೇಲೆ ಏನ್ಗೊತ್ತೆ ಬನೂ...? ಸುಮ್ಸುಮ್ನೆ ನೆಲ ನೋಡ್ತಾ ಇದೀಯಲ್ಲೇ...ಕೇಳೇ ನನ್ಮಾತ್ನ...ನನ್ಹೊಟ್ಟೇಲಿ ಇನ್ನೊಂದು ಹೆಣ್ಣು ಹುಟ್ಟಿದರೆ, ಆ ಮಹಾ ರಾಣೀನ ಕೊಡೋದು ನಿನ್ಮಗ ರಾಜನಿಗೇನೆ...ಆಗ, ಹುಡುಗಿ ಕಪ್ಪೂಂತ ತಿರಸ್ಕಾರ ಮಾಡ ಬಾರದಮ್ಮ!"

ಅಮ್ಮಿ ನಕ್ಕಳು. ಪ್ರತಿಯಾಗಿ ಸುಂದರಮ್ಮ ನಕ್ಕಳು. ಕೆಲವೇ ಕ್ಷಣಗಳ ಹಿಂದೆ ಮೌನವಾಗಿದ್ದ ಮನೆಯ ವಾತಾವರಣ ನಗುವಿನ ಕಲಕಲ ನಿನಾದದಿಂದ ತುಂಬಿತು.

ಸಂಜೆ ತಡವಾಗಿಯೆ ಮನೆಗೆ ಹೊರಡುತ್ತ ಸುಂದರಮ್ಮ ಮತ್ತೂ ಒಂದು ಮಾತು—ಕಿವಿ ಮಾತು—ಹೇಳಿದಳು:

"ಇನ್ನೂ ಒಂದು ತಿಂಗಳು ಅವರಿಗೆ ಹೇಳ್ಬೇಡ ಬನೂ...ಗುಟ್ಟು ಬಿಟ್ಕೊಡ್ಬೇಡ... ನಿಧಾನವಾಗಿ ಅವರ ಮನಸ್ಸು ತಿಳ್ಕೊಂಡು ಆಮೇಲೆ ಹೇಳು......"

ಹೂಂ—ಎಂದಳು ಅಮ್ಮಿ.

ರಹಸ್ಯಮಯಿಯಾಗಿ ಅಮ್ಮಿ ಬಹಳ ದಿನ ಕಳೆದಳು.

ಒಮ್ಮೆ ಕ್ರುದ್ಧರಾಗಿಯೆ ನಾರಾಯಣರಾಯರು ಮನೆಗೆ ಬಂದರು. ಗಾಬರಿಗೊಳ್ಳುತ್ತ ಅಮ್ಮಿ ಅಡುಗೆಯ ಸಿದ್ಧತೆ ನಡೆಸಿದಳು.

ರಾಯರೂ ಒಳಬಂದು ಅಲ್ಲೆ ಸ್ವಲ್ಪ ದೂರದಲ್ಲಿ ಕುಳಿತರು.

ಮೌನವನ್ನು ಮುರಿದು ಮಾತು ಬಂತು:

"ಜಾಸ್ತಿಯಾಗ್ಹೋಯ್ತು ಆ ಸ್ವಾಮಿದು!"

"ಏನಾಯ್ತು? ಯಾರು ಏನಂದ್ರು?"

ಯಾರೋ ಏನೋ ಅಂದಿರಬೇಕೆಂಬುದೊಂದೇ ಆಕೆಗೆ ಇದ್ದ ಭೀತಿ.

"ಯಾರು ಏನನ್ತಾರೆ? ಏನೂ ಇಲ್ಲ! ಆದರೆ ಆ ಸ್ವಾಮಿ! ಮಠಾಧಿಪತಿಯಾದೇಂತ ತಲೆಯೇ ತಿರಿಗ್ಬಿಟ್ಟಿದೆ ಆತನಿಗೆ.....ಹುಂ....."

"ಏನ್ಬೇಕಂತೆ ಅವರಿಗೆ?"

"ಅವರಿಗೆ ಅನ್ಬೇಡ—ಅವನಿಗೆ ಅನ್ನು. ಪಾಪಿ ಚಂಡಾಲ! ನಿನ್ನನ್ನ ಇಲ್ಲಿಗೆ ಕರೆಸಿ ನಾನು ಅಧರ್ಮಕ್ಕಿಳಿದಿದೀನಂತೆ!"

ತನ್ನ ವಿಷಯವೇ! ತುಟಿ ಪಿಟ್ಟೆನ್ನಲಿಲ್ಲ ಅಮ್ಮಿ. ಇನ್ನಷ್ಟು ಕೆಟ್ಟ ಸುದ್ದಿಯನ್ನು ಕೇಳಲು ಸಿದ್ಧಳಾಗಿ ಆಕೆ ಮೌನವಾಗಿ ಕುಳಿತಳು.

"ಶಂಕರಿ, ನಿನಗೆ ಇದೆಲ್ಲಾ ಗೊತ್ತಾಗುತ್ತೇನೆ? ಈ ಮನೆಯ ನಾಲ್ಕು ಗೋಡೆ ಯಾಯಿತು, ನೀನಾಯಿತು. ನಿನಗೊಂದೂ ತಿಳೀದು. ತಮ್ಮ ಅನ್ನ ಕಿತ್ಕೊಂಡ ಅಂತ, ಎಷ್ಟೊಂದು ರಣಹದ್ದುಗಳು ಚೀರಾಡ್ತಾ ಇವೆ ಗೊತ್ತೆ ನಿನಗೆ? ನೀನು ನನ್ನವಳಾಗಿರೋದನ್ನ ಸಹಿಸೋಕಾಗ್ದವ್ರು ಎಷ್ಟೊಂದು ಜನ ಇದಾರೆ ಗೊತ್ತೆ?"

ಏನಾದರೂ ಹೇಳಬೇಕೆಂದು ಅಮ್ಮಿ ಎಂದಳು:

"ಅನ್ನೋವರಿಗೇನು—ಏನು ಬೇಕಾದರೂ ಅನ್ತಾರೆ. ನೀವ್ಯಾಕೆ ಮನಸ್ಸಿಗೆ ಹಚ್ಕೋ

ಬೇಕು ಅದನ್ನ ? ”

ಆದರೆ, ಅಮ್ಮಿಯಾಗಲಿ ಅದನ್ನು ಮನಸ್ಸಿಗೆ ಹಚ್ಚಿಕೊಂಡಿದ್ದಳು. ರಾಯರ ರಕ್ಷಣೆಯಲ್ಲಿ ಬಾಹ್ಯ ಜಗತ್ತನ್ನೇ ಮರೆಯಲೆತ್ನಿಸಿ ಯಶಸ್ವಿಯಾದೆನೆಂದು ಅಮ್ಮಿ ಭಾವಿಸಿದ್ದು ಸುಳ್ಳು ಹಾಗಾದರೆ ?

ಉದ್ವೇಗದ ಬಿಸಿಯುಸಿರು ಬಿಟ್ಟು ರಾಯರೆಂದರು :

“ ಆಗಲಿ, ನೋಡಿಯೇ ಬಿಡೋಣ ಒಂದು ಕೈ.....”

ಅಂತಹ ಸನ್ನಿವೇಶದಲ್ಲಿ ತಾನು ತಾಯಿಯಾಗಲಿರುವ ವಿಷಯವನ್ನು ಅಮ್ಮಿ ಅವರಿಗೆ ಹೇಳುವಂತೆಯೇ ಇರಲಿಲ್ಲ.

ಮತ್ತೊಂದು ದಿನ, ಬಲು ಬಾಡಿದ ಮುಖದೊಡನೆ ರಾಯರು ಬಂದರು. ಇನ್ನೇನು ಆಪತ್ತು ಕವಿಯಿತೊ ಎಂದು ಅಮ್ಮಿ ನಡುಗಿದಳು.

“ ಯಾಕೆ ಹೀಗಿದೀರಾ ? ” ಎಂದಳು ನಯವಾಗಿ.

“ ನನ್ನ ಕೊನೇ ಮಗು ಇವತ್ತು ಬೆಳಿಗ್ಗೆ ತೀರ್ಕೊಂಡ್ತು.”

ಚಿಳ್ಳೆಂದಿತು ಅಮ್ಮಿಯ ಹೃದಯ. ಎಳೆಯದೊಂದು ಮಗುವಿನ ಸಾವು .... ರಾಯರಿಗೆ ದುಃಖವಾಗಿತ್ತು. ಅಮ್ಮಿ ಅವರ ಭುಜದ ಮೇಲೆ ತನ್ನೆರಡೂ ಕೈಗಳನ್ನಿರಿಸಿದಳು. ಸಾಂತ್ವನದ ಮಾತಾಡಬೇಕೆಂದು ಮನಸ್ಸು ಬಯಸಿತು.

ಮನಸ್ಸಿನೊಳಗೆ ಮಾತುಗಳು ರೂಪುಗೊಂಡುವು.

‘ ಮಗು ಹೋಯಿತೆಂದು ದುಃಖಿಸಬೇಡಿ. ಒಂದು ಹೋದರೆ ಇನ್ನೊಂದು ಬಂದೀತು. ಇನ್ನೊಂದು ಮಗು ಬಂದೀತು .... ಚಿಂತಿಸಬೇಡಿ ....’

ಆದರೆ ಆ ಮಾತುಗಳು ಸ್ವರ ತಳೆದು ಹೊರಬೀಳಲಿಲ್ಲ. ದುಃಖದ ಸನ್ನಿವೇಶದಲ್ಲಿ ಒಳ್ಳೆಯ ವಾರ್ತೆ ಹೇಳುವುದು ಸರಿಯಾಗದೆಂದು ಆಕೆ ಸುಮ್ಮನಾದಳು.

ದಿನ ಕಳೆದಂತೆ ಬನಶಂಕರಿಯ ಕಾತರ ಹೆಚ್ಚಿತು.

ಒಮ್ಮೊಮ್ಮೆ ರಾಯರೆನ್ನುತ್ತಿದ್ದರು :

“ ಯಾಕೇ ಮುಖ ಬಾಡಿದೆ ? ”

“ ಇಲ್ಲವಲ್ಲ ! ”

“ ಸುಳ್ಳಾಡ್ಬೇಡ ! ಅಜ್ಜಿಯ ನೆನಪಾಯ್ತೇನು ! ”

ಅಜ್ಜಿಯ ನೆನಪು .... ತನ್ನ ಅಜ್ಜಿ ಇದ್ದಿದ್ದರೆ ? ಮೊಮ್ಮಗಳಿಗೊಂದು ಮಗುವಾಗುವು ದನ್ನು ಆಕೆ ನೋಡಬಹುದಾಗಿತ್ತು....ಆದರೆ—ಆದರೆ ಆಕೆ ಈ ಸಂಬಂಧವನ್ನು ಒಪ್ಪುತ್ತಿದ್ದಳೋ ಇಲ್ಲವೋ .... ದೂರದ ಅತ್ತೆ, ಮಾವ ? ಬಾಲ್ಯದ ಗೆಳತಿ ಕಾವೇರಿ ? ತಾನು ಮಾಡುತ್ತಿರುವು ದೆಲ್ಲ ಪಾಪವೆ ಹಾಗಾದರೆ ?—ಅಯ್ಯೋ !

“ ಮಾತ್ನಾಡೇ ! ಅಂತೂ ಒಳ್ಳೇ ಮೂಕಾಂಬಿಕೆ ಗಂಟು ಬಿದ್ಲೆ ! ”

“ ತಲೆನೋಯುತ್ತೆ ನನಗೆ.”

“ ಮಲಕೋ ಶಂಕರಿ ಹಾಗಾದರೆ. ನಾನು ಅಡುಗೆ ಮಾಡ್ತೀನಿ.”

“ ಓ ! ”

“ ನಿಜವಾಗ಼್ೂ. ಇವತ್ತೊಂದಿನ ನೋಡು ಈ ನಳಪಾಕದ ರುಚೀನಾ.”

“ಅಯ್ಯೋ ಬೇಡಿ. ಕೈಸುಟ್ಕೋಬೇಡಿ ....”

“ಕೈ ಸುಟ್ಕೊಂಡಿದ್ದು ಆಗಲೇ ಆಯ್ತಲ್ಲ—”

ಸೂಚ್ಯವಾಗಿ ಬುದ್ಧಿವಂತಿಕೆಯ ಮಾತನ್ನಾಡಿ, ಅಮ್ಮಿಯ ಕೈ ಹಿಡಿದು ಎಳೆದು ರಾಯರು ತಬ್ಬಿಕೊಂಡರು.

ಅಂತೂ ಕೊನೆಗೊಮ್ಮೆ ಮಲ್ಲಿಗೆಯ ದಂಡೆಯೊಡನೆ ನಗು ನಗುತ್ತ ರಾಯರು ಬಂದ ರಾತ್ರೆ, ಮೈಮನಗಳು ತಣಿದಿದ್ದಾಗ, ರಮಿಸುವ ಮಾತನ್ನಾಡುತ್ತಾ ಅಮ್ಮಿಯೆಂದಳು :

“ನಿಮಗೆ ಮಕ್ಕಳೂಂದ್ರೆ ಪ್ರೀತೀನಾ ?”

“ಹೂಂ. ಯಾಕೆ ?”

“ಸುಮ್ನೆ ಕೇಳ್ದೆ. ನಾನೇ ನಿಮಗೊಂದು ಕಾಣಿಕೆ ಕೊಟ್ರೆ .... ?”

ನಾಲಿಗೆ ತಡವರಿಸುತ್ತ ಆ ಮಾತು ಹೊರಬಂತು.

“ನಿಜವೆ ಚಿನ್ನಾ !”

ಆ ಪ್ರಶ್ನೆಯಲ್ಲಿ ಆಶ್ಚರ್ಯದ ಧ್ವನಿ ಇತ್ತು.

“ಯಾಕೆ ನಂಬಿಕೆ ಹುಟ್ಟೊಲ್ವೆ ?”

“ನೀನು ಫಲ ಬಿಡೋ ಮರವೇ ಅಲ್ಲಾಂತಿದ್ದೆ.”

“ಅಯ್ಯೋ—ಯಾಕೆ ?”

“ಯಾಕೋ ಹಾಗೆ ಅನಿಸಿತ್ತು.”

“ನಿಮ್ಮದು ತಮಾಷೇನೆ ಯಾವಾಗ್ಲೂ.”

“ಇರ್ಲಿ, ಈಗೇನು ವಿಷಯ ?”

“. . . . . . .”

“ಹೇಳೇ.”

“. . . . . . .”

“ಊಹೆ ಸರಿ ತಾನೆ ?”

“ಹೂಂ.”

“ಎಷ್ಟು ತಿಂಗಳು ?”

“ಎರಡು.”

“ಅಯ್ಯ—ಮತ್ತೆ ಮುಟ್ಟಾಗ್ತಾನೇ ಇದ್ದಿಯಲ್ಲೆ ?”

“ನಿಮಗೆ ತಿಳೀಕೂಡ್ದೂಂತ ಸುಮ್ನೆ ಕೂತಿದ್ದೆ.”

“ಎಲಾ ಘಾಟಿ ! ನನ್ನ ಉಪವಾಸ ಹಾಕಿ ಕಳಿಸ್ಬಿಟ್ಟು ನಿನ್ನ ‘ಮಡಿ’ ಅಡುಗೆ ಬೇರೇನೇ ಮಾಡ್ಕೊಂಡ್ಯಲ್ಲೇ !”

“ತಪ್ಪಾಯ್ತು .... ಕ್ಷಮೆ ಕೇಳ್ತೀನಿ.”

“ಹೂಂ !”

“ಈ ಸುದ್ದಿ ಕೇಳಿ ಸಂತೋಷವಾಯ್ತೆ, ನಿಮಗೆ ?”

“ಓಹೋ .... ಎಲ್ಲಿ ಹತ್ತಿರ ಬಾ ...,. ಸಿಹಿ ಕೊಡು.”

“ಥೂ ...,!”

ರಾಯರು ಮನಸ್ಸನ್ನು ತೆರೆದು ಮಾತನಾಡಿರಲಿಲ್ಲ ಆ ರಾತ್ರೆ. ಆ ಸುದ್ದಿ ಅಷ್ಟೊಂದು ಸಂತೋಷಕರವಾಗಿರಲಿಲ್ಲ.

ಆದರೂ ಶಂಕರಿ ಸುಖವಾಗಿರಬೇಕೆಂದು ಅವರು ನಗುನಗುತ್ತಲೇ ದಿನ ಕಳೆದರು. ಆಕೆಯ ಬಯಕೆಗಳನ್ನು ಈಡೇರಿಸಿದರು. ಹೆರಿಗೆಗೆ ಏರ್ಪಾಟು ಮಾಡಿದರು.

ಒಂದು ರೀತಿಯಲ್ಲಿ, ತನ್ನ ಸಾಹಸದ ಫಲವನ್ನು ಕಾಣಲು ರಾಯರು ಕುತೂಹಲಿಯಾಗಿಯೇ ಇದ್ದರು.

ಧೋ ಧೋ ಎಂದು ಮಳೆ ಸುರಿಯುತ್ತಿದ್ದೊಂದು ದಿನ ಅಮ್ಮಿ ತಾಯಿಯಾದಳು. ಗಂಡು ಮಗು. ತಾಯಿಯ ಗಲ್ಲ ತುಟಿಗಳು. ತಂದೆಯ ಹಣೆ. ಮುದ್ದುಮುದ್ದಾಗಿತ್ತು ಮಗು.

ನಾರಾಯಣರಾಯರು ಸಂತುಷ್ಟರಾದರು. ಆದರೆ ಮರುಕ್ಷಣದಲ್ಲೆ ಚಿಂತೆಯ ಮೋಡ ಆ ಸಂತೋಷವನ್ನು ಕವಿಯಿತು.

ಅಮ್ಮಿ ಯಾವುದನ್ನೂ ಗಮನಿಸಲಿಲ್ಲ—ಆಕೆಯ ಸರ್ವಸ್ವವಾಗಿದ್ದುದು ಆ ಮಗು. ಅದರ ಮೇಲಿಂದ ದೃಷ್ಟಿಯನ್ನು ಬೇರೆ ಕಡೆಗೆ ಆಕೆ ಹರಿಸಲಿಲ್ಲ.

## ೧೨

ಸುಂದರಮ್ಮ ಬಂದಳು. ಮಗುವನ್ನಾಕೆ ಮುದ್ದಿಸಿದಳು. ಮಗುವಿನ ತಾಯಿಯ ಮುಂಗುರುಳನ್ನು ಮೂಸಿ ನೋಡಿದಳು.

“ಬನೂ, ಎಷ್ಟೊಂದು ಮುದ್ದಾಗಿದೆ ಮಗು!”

“ನನ್ನ ಜನ್ಮ ಸಾರ್ಥಕವಾಯ್ತು ಅಕ್ಕಾ.”

“ಶುರುವಾಯ್ತು ವೇದಾಂತ. ತುಂಟ ನಿದ್ದೇಲಿ ಹ್ಯಾಗೆ ನಗ್ತಿದಾನೇಂತ ನೋಡೊಂದ್ರೆ...”

“ಇಂಥ ದಿನ ನನ್ನ ಪಾಲಿಗೆ ಸಾಧ್ಯವಾದದ್ದು ನಿನ್ನಿಂದ ಅಕ್ಕ. ನಾನು ಈವರೆಗೂ ಉಸಿರು ಹಿಡಿದದ್ದು ನಿನ್ನಿಂದಾಗಿ ಅಕ್ಕ.”

“ಸಾಕು, ನಿಲ್ಸೆ.”

“ನಂಗ್ಯಾಕೊ ಭಯವಾಗಿತ್ತು ಅಕ್ಕ.”

“ಏನು?”

“ಮಗು ಬದುಕುತ್ತೆ. ನಾನು ಸತ್ಹೋಗ್ತೀನಿ ಅಂತ.”

“ಹೂಂ?”

“ಸಾಯೋಕ್ಮುಂಚೆ ಆ ಮಗೂನ ನಿನಗೊಪ್ಪಿಸ್ಬೇಕೂಂತ ಹೇಳೋಣಾಂತಿದ್ದೆ.”

“ಅಬ್ಬ! ಮಗೂ ಮುಖ ನೋಡ್ದಾಗ ಸಾಯೋಕೆ ಮನಸಾಗ್ಲಿಲ್ವೇನೊ?”

ಬನಶಂಕರಿ ಮೃದುವಾಗಿ ನಕ್ಕಳು. ನಗುತ್ತ ಮಗುವನ್ನೆ ಮಮತೆಯ ದೃಷ್ಟಿಯಿಂದ ನೋಡಿದಳು.

“ಬನೂ, ಸಂತೋಷವಾಗಿದ್ಯೆ ಅವರಿಗೆ?”

" ಏನಕ್ಕ ಸಂತೋಷವಾಗ್ದೆ— ? "

" ಹಾಗೇಂತ ಬಾಯ್ಬಿಟ್ಟು ಅಂದ್ರೇನು ? "

" ಅದೆನ್ನೆಲ್ಲಾ ಬಾಯ್ಬಿಟ್ಟು ಅಂತಾರೇನು ? "

" ನಿನ್ನ ಅವರು ಒಳ್ಳೆಯವರು ಕಣೇ."

" ನನಗೆ ಇನ್ನೇನೂ ಬೇಡ ಅಕ್ಕ. ಈ ಮಗು ದೊಡ್ಡೋನಾಗೋದನ್ನು ನೋಡಿ ನಾನು ಸತ್ತರೆ ಸಾಕು."

" ಹುಚ್ಚಿ ! ಇನ್ನೂ ಸಾವಿನ ಮಾತು ಬಿಡೋಲ್ಲ."

" ಸಾವಿನ್ಜತೇಲಿ ಸರಸ ಆಡ್ತಾನೇ ಹುಟ್ಟಿದ್ದೋಳಮ್ಮ ನಾನು."

ಎಚ್ಚರಗೊಂಡ ಮಗು ಪುಟ್ಟ ಕೈಗಳನ್ನು ಅತ್ತಿತ್ತ ಚಲಿಸಿ ಅಳತೊಡಗಿತು. ಬನಶಂಕರಿ ಮಲಗಿದಲ್ಲಿಂದಲೆ ಚಡಪಡಿಸಿದಳು. 'ಊಶ್...ಬುರ್...' ಎಂದು ಲಾಲಿ ಮಾಡಿದಳು ಸುಂದರಮ್ಮ. ಜೋ ಜೋ ಜೋ ಎಂದು ರಾಗವೆಳೆದಳು.

ಮಗು ಅಳು ನಿಲ್ಲಿಸಿದಾಗ ಮೊದಲು ಮಾತನಾಡಿದವಳು ಅಮ್ಮಿ.

" ಅಣ್ಣನ್ನ ನೋಡ್ಬೇಕೂಂತ ಆಸೆ ಆಗುತ್ತೆ ಅಕ್ಕ."

" ಇನ್ನೊಂದ್ಸಲ ಕರ್ಕೊಂಡು ಬರ್ತೀನಿ."

" ಮಕ್ಕಳ್ನೂ ಕರ್ಕೊಂಡ್ಬಾರೇ..."

" ಹೂನಮ್ಮ... ಅಲ್ಲ ಬನೂ, ನಿನ್ನ ಸ್ವಂತದ್ದೇ ಬೊಂಬೆ ಬಂದ್ಮೇಲೆ, ಇನ್ಯಾಕಮ್ಮ ಬೇರೆ ಮನೇದು ? "

" ಅಕ್ಕಾ ನಂಗೆ ಅಳು ಬರುತ್ತೆ ನೀನು ಹಾಗೆ ಮಾತಾಡಿದ್ರೆ—"

" ಈಗಲೇ ಸುರಸುಂದರಿಯಾಗಿದೀಯೆ. ಇನ್ನು ಅಳು ಬೇರೆ ಬಂದರೆ ನನ್ನ ದೃಷ್ಟಿ ತಾಕೋದು ಖಂಡಿತ."

" ಹೋಗಕ್ಕಾ."

" ಬನೂ, ಆ ದಿನವೇ ಹೇಳಿದ್ದೆ. ಮಗೂಗೆ ಯಾವ ಹೆಸರಿಡ್ಬೇಕೂಂತ. ನೆನಪಿದೆ ತಾನೆ ? "

" ರಾಜ."

" ಸರಿ ಹೇಳ್ದೆ."

" ರಾಜಣ್ಣ ಅಂತ ನಾನು ಕೂಗ್ಬೌದೇನು ? "

" ಅಷ್ಟರ ಮಟ್ಟಿಗೆ ನನ್ದೇನೂ ಆಕ್ಷೇಪವಿಲ್ಲ."

" ಅಕ್ಕಾ, ಇನ್ನೊಂದು ವಿಷ್ಯಾನೂ ಹೇಳಿದ್ದೆ. ನೆನಪಿದೆ ತಾನೆ ? "

" ಇದೆ ಬನೂ, ಆ ದೇವಾಧಿದೇವರ ದಯೆಯಿಂದ ನನ್ಹೊಟ್ಟೇಲಿ ತೊಳೆದ ಕೆಂಡದಂಥಾ ಒಂದು ಹೆಣ್ಣು ಮಗು ಹುಟ್ಟಿದ್ರೆ, ಅದನ್ನ—"

ಬನಶಂಕರಿಗೆ ನಗು ಬಂತು. ಸುಂದರಮ್ಮನೂ ಮಾತು ನಿಲ್ಲಿಸಿ ನಕ್ಕಳು. ಇಬ್ಬರೂ ಬಿದ್ದು ಬಿದ್ದು ನಗುವುದನ್ನು ಕಂಡು ಮುಗುಳು ನಗು ಸೂಸಿತು ಮಗು.

" ನೋಡೆ, ಹ್ಯಾಗೆ ನಗ್ತಿದಾನೆ ಖಿಲಾಡಿ, ವಿಷಯ ತಿಳಿದ್ಹೋಯ್ತೇನೊ ಅವನ್ಗೆ ! "

...ಸ್ವಲ್ಪ ದಿನಗಳಲ್ಲೆ ಬನಶಂಕರಿ ಎದ್ದು ಓಡಾಡಿದಳು...ಹೆರಿಗೆಯೊಂದು ಪುನರ್ಜನ್ಮ

ವಾಗಿತ್ತು ಅವಳ ಪಾಲಿಗೆ. ಆದರೆ ಮಗು ದೊರೆತ ಮಹಾ ಸಂಭ್ರಮದ ನಡುವೆ ನೋವಿನ ಯಾವ ನೆನಪೂ ಅಮ್ಮಿಯನ್ನು ಬಾಧಿಸಲಿಲ್ಲ.

ತನ್ನ ಕೂಸಿನ ಹೊರತಾಗಿ ಪ್ರಪಂಚದಲ್ಲಿ ಬೇರೇನೂ ಇರಲೇ ಇಲ್ಲ ಅಮ್ಮಿಗೆ. ಆಕೆ ಸಂಚರಿಸುತ್ತಿದ್ದ ಲೋಕವೇ ಬೇರೆ.

ಆದರೆ, ಅಂತಹ ಸನ್ನಿವೇಶದಲ್ಲಿ ನಾರಾಯಣರಾಯರ ಮನಸ್ಸಿನೊಳಗೆ ಆಗುತ್ತಿದ್ದು ದೇನನ್ನೂ ಗಮನಿಸಲು ಅಮ್ಮಿ ಸಮರ್ಥಳಾಗಲಿಲ್ಲ.

ನಾರಾಯಣರಾಯರು ಎರಡು ದಿನಗಳಿಗೊಮ್ಮೆ ಮೂರು ದಿನಗಳಿಗೊಮ್ಮೆ ಬನಶಂಕರಿ ಯಲ್ಲಿಗೆ ಬಂದು ಹೋಗುತ್ತಿದ್ದರು. "ಯಾಕೆ ಬರಲಿಲ್ಲ—ನಿನ್ನೆ, ಮೊನ್ನೆ ?" ಎಂದು ಕೇಳಿದರೆ, "ಏನೇನೋ ಕೆಲಸ ಶಂಕರಿ, ಜಾತ್ರೆಯ ತಯಾರಿ ಬೇರೆ ಇದೆಯಲ್ಲ," ಎನ್ನುತ್ತಿದ್ದರು. ಕೆಲಸವಿತ್ತು ನಿಜ; ಜಾತ್ರೆಯ ತಯಾರಿಯೂ ಇತ್ತು. ಆದರೆ ಅದೊಂದೂ ಇರದೇ ಇದ್ದ ದಿನ ಯಾವುದು ? ಹಿಂದೆ ಎಂತಹ ಕೆಲಸವಿದ್ದರೂ ರಾಯರು ಬರುತ್ತಿರಲಿಲ್ಲವೆ ? ಆದರೆ ಅಮ್ಮಿ ಅಷ್ಟು ಕೂಡಾ ಯೋಚಿಸುತ್ತಿರಲಿಲ್ಲ. ರಾಯರ ಉತ್ತರ ಬಂದೊಡನೆ ಆಕೆಗೆ ಸಮಾಧಾನವೆನಿಸುತ್ತಿತ್ತು.

"ನೋಡಿ, ಹ್ಯಾಗೆ ಕಾಣ್ತಿದಾನೆ ರಾಜ ?" ಎಂದು ಮಗನ ಮಾತೆತ್ತಿ, ಒಂದೇ ಉಸುರಿಗೆ, ಆತ ನಗುವುದರ ಅಳುವುದರ ವರ್ಣನೆ ಮಾಡುತ್ತಿದ್ದಳು.

ಬೇಸರವಾಗುತ್ತಿದ್ದರೂ ರಾಯರು ಅದನ್ನು ತೋರಗೊಡುತ್ತಿರಲಿಲ್ಲ. ಆದರೆ, ಹೊಸತಾಗಿ ಆಗಮಿಸಿದ ಮಗು, ತನ್ನಿಂದ ಬನಶಂಕರಿಯನ್ನು ಸೆಳೆದುಕೊಂಡಂತೆ ಅವರಿಗೆ ಕಾಣುತ್ತಿತ್ತು.

ಅಷ್ಟೇ ಅಲ್ಲ, ಇತರ ತೊಂದರೆಗಳು ಅವರನ್ನು ಕಾಡುತ್ತಿದ್ದುವು. ಅವಳ ಎಳೆಯ ಮಗು ತೀರಿಕೊಂಡಂದಿನಿಂದ ಮನೆಯಾಕೆಯ ಮನಸ್ಸು ಸ್ವಸ್ಥವಿರಲಿಲ್ಲ, ಗಂಡನ ಮನೆಯ ಹೊರಗಿನ ಸಾಹಸ ಜೀವನದ ವಿಷಯ ಅಷ್ಟಿಷ್ಟು ತಿಳಿದಿದ್ದರೂ "ಇದು ನನ್ನ ಹಣೆಯ ಬರಹ"ವೆಂದು ಆವರೆಗೆ ಸುಮ್ಮನಿದ್ದ ಅವರ ಹೆಂಡತಿ, ಈಗೀಗ ವಿನಾಕಾರಣ ರೇಗುತಿದ್ದಳು— ಚುಚ್ಚು ಮಾತನ್ನಾಡುತ್ತಿದ್ದಳು. ಅಮ್ಮಿ ಗಂಡು ಮಗುವನ್ನು ಹೆತ್ತಳೆಂಬ ಸುದ್ದಿಯಂತೂ ಆಕೆಯ ಕರುಳಿಗೆ ಉರಿಯುವ ಕೊಳ್ಳಿ ಇಕ್ಕಿತು.

ಒಂದಲ್ಲ ಒಂದು ಸಮಯ ಸಾಧಿಸಿ ಆಕೆ ದಿನವೂ ಹೇಳುತ್ತಿದ್ದಳು :

"ಅಂತೂ ನಮ್ಮಿನ್ನನ್ನ ಕೊಂದವರು ನೀವು...ಆ ರಾತ್ರೆ ಆ ಮೋಹಿನಿ ಮನೆಗೆ ಹೋಗ್ದೇ ಇದ್ದಿದ್ರೆ ಒಂದಿಷ್ಟು ಔಷಧೀನಾದ್ರೂ ಬೇಗನೆ ತರೋಕಾಗ್ತಿತ್ತು."

ಮನೆಯಲ್ಲಿ ಆ ಸಿಡಿಸುಡಿಯಾದರೆ, ಹೊರಗೆ ನಿಂದೆ. ನಾರಾಯಣರಾಯರಲ್ಲದೇ ಹೋಗಿದ್ದರೆ ಅಮ್ಮಿ ಖಂಡಿತವಾಗಿಯೂ ತನ್ನವಳಾಗುತ್ತಿದ್ದಳೆಂದು ನಂಬಿದ್ದ ಮಠಾಧೀಶರು ದ್ವೇಷ ಸಾಧನೆಯ ಮೊದಲ ಹಂತವಾಗಿ ಅಪಪ್ರಚಾರ ಆರಂಭಿಸಿದ್ದರು. ಸ್ವತಃ ನೀತಿ ಗೆಟ್ಟುದು, ಆ ಕಾರ್ಯದಲ್ಲಿ ಬಡ ಬಾಲವಿಧವೆಯೊಬ್ಬಳನ್ನು ಕೆಡಿಸಿದ್ದು,—ಇವು ಘೋರ ಅಪರಾಧಗಳಲ್ಲವೆ ? ಇಂಥವರು ದೇವಸ್ಥಾನದ ಪಾರುಪತ್ಯಗಾರರಾಗುವುದು ಸಾಧ್ಯವೆ ? ಹೀಗಾದರೆ ಜನರಲ್ಲಿ ಧರ್ಮನಿಷ್ಠೆ ಎಷ್ಟು ತಾನೆ ಉಳಿದೀತು ?

ಆದರೆ ನಾರಾಯಣರಾಯರಿಗೆ ಸ್ವಾಮಿಗಳಿಗಿಂತಲೂ ಹೆಚ್ಚು ಬಲವಿತ್ತು. ಸ್ವಾಮಿಗಳ

ಪಾತ್ರೆಯಲ್ಲಿಯೇ ಇರುವ ತೂತುಗಳೆಷ್ಟೆಂಬುದು ಅವರಿಗೆ ಗೊತ್ತಿರಲಿಲ್ಲವೆ ? ಎದುರೆದುರು ನಿಂತಾಗ ತಮ್ಮ ವಿರುದ್ಧ ಚ ಕಾರವೆತ್ತದ ಸ್ವಾಮಿಗಳೊಡನೆ ಒಮ್ಮೆ ನಾರಾಯಣರಾಯರು ಸೂಚ್ಯವಾಗಿ ಹೇಳಿದ್ದರು :

"ಮಠದ ಕೆಲವು ಜನ ಏನೇನೋ ಮಾತಾಡ್ತಿರೋದು ಸ್ವಾಮಿಗಳ ಗಮನಕ್ಕೆ ಬಂದಿರ್ಬೇಕು."

"ಏನು ! ಏನೂ ಇಲ್ವಲ್ಲಾ ! ಹೇಳಿ, ಸಂಕೋಚ ಯಾಕೆ ? ಹೇಳಿ."

"ಬಾಯಿ ಬಿಟ್ಟು ಹೇಳ್ಬೇಕಾದ್ದಿಲ್ಲ. ಸ್ವಾಮಿಗಳಿಗೆ ಗೊತ್ತಿದೆ. ಇದರಿಂದ ಯಾರಿಗೂ ಹಿತವಾಗೋದಿಲ್ಲ ಅನ್ನೋದನ್ನ ಮಾತ್ರ ಗಮನಿಸ್ಬೇಕು."

ಆ ಎಚ್ಚರಿಕೆಯಿಂದ ಸ್ವಲ್ಪ ಮಟ್ಟಿಗೆ ಪ್ರಯೋಜನವಾಯಿತು. ಪೂರ್ತಿ ನಿಲ್ಲದಿದ್ದರೂ ಕಡಿಮೆಯಾಯಿತು.

ಆದರೆ ನಾರಾಯಣರಾಯರ ಮನಸ್ಸಿನ ನೆಮ್ಮದಿ ಕೆಡದೆ ಹೋಗಲಿಲ್ಲ.

ಬನಶಂಕರಿಯನ್ನು ಅವರು ಪ್ರೀತಿಸುತ್ತಿದ್ದರು, ಬಯಸುತ್ತಿದ್ದರು—ಮಾನವ ಜೀವಿಯಾಗಿ, ಹೆಣ್ಣಾಗಿ. ಆಕೆ ನೊಂದರೆ ಅವರಿಗೆ ಬೇಸರವಾಗುತ್ತಿತ್ತು. ಆಕೆಗೆ ಯಾವ ಕೊರತೆಯೂ ಆಗದಂತೆ ಅವರು ನೋಡಿಕೊಳ್ಳುತ್ತಿದ್ದರು.

ಈಗ ? ಬನಶಂಕರಿ ತಾಯಿಯಾಗಿರುವ ಹೊಸ ಸನ್ನಿವೇಶ...

ರಾಯರಿಗೆನಿಸಿತ್ತು. ಇವರಿಬ್ಬರಲ್ಲಿ ಮಗು ಯಾರು ? ಏನೂ ಅರಿಯದ ಆ ಎಳೆಯ ಕೂಸೆ ? ಅಥವಾ ಆ ಕೂಸಿನ ಹೊರತಾಗಿ ಉಳಿದೆಲ್ಲವನ್ನೂ ಮರೆತಿರುವ ಅದರ ತಾಯಿಯೆ ?

ಅಮ್ಮಿ ಬಾಣಂತಿಯಾದ ಬಳಿಕ ಆ ಮನೆಯಲ್ಲಿ ಊಳಿಗಕ್ಕೆ ತಿಮ್ಮಪ್ಪನೊಬ್ಬನೇ ಇರಲಿಲ್ಲ. ಒಡತಿಯ ಆರೈಕೆಗಾಗಿ ತಿಮ್ಮಪ್ಪನ ಮಗಳು ಬಂದು ಅಲ್ಲೆ ನೆಲೆಸಿದ್ದಳು.

ರಾಯರು ರಾತ್ರೆ ಹೊತ್ತು ಈಗ ಅಲ್ಲಿರುತ್ತಲೇ ಇರಲಿಲ್ಲ. ಸ್ವಲ್ಪ ಹೊತ್ತಿದ್ದು ತಮ್ಮ ಮನೆಗೇ ಹೊರಟುಹೋಗುತ್ತಿದ್ದರು. ಇಲ್ಲವೆ, ದೇವಸ್ಥಾನದ ಹೊರ ಅಂಗಣದ ಮಹಡಿಯ ಮೇಲೆ ಇದ್ದು ಬಿಡುತ್ತಿದ್ದರು.

ಅವರನ್ನು ತನ್ನ ಜತೆಯಲ್ಲೇ ರಾತ್ರೆ ಇರಿ ಎಂದು ಅಮ್ಮಿ ಒತ್ತಾಯಿಸಲೇ ಇಲ್ಲ. ಮಗು ರಾತ್ರೆ ಎಷ್ಟು ಸಾರೆ ಎಚ್ಚರುತ್ತದೆ ? ತಾನು ಅದಕ್ಕೆಷ್ಟು ಸಾರಿ ಹಾಲೂಡುತ್ತೇನೆ. ಮಗುವಿಗೆ ತೊಂದರೆಯಾಗಬಾರದೆಂದು ತಾನೆಷ್ಟು ಸಾರಿ ಎಚ್ಚರವಾಗಿಯೇ ಇರುತ್ತೇನೆ ?—ಎಂದು ಅಮ್ಮಿ ಮತ್ತೆ ಮತ್ತೆ ಹೇಳಿದ್ದನ್ನೇ ಹೇಳುತ್ತಿದ್ದಳೆ ಹೊರತು, ಆಸೆಯ—ಆಹ್ವಾನದ—ದೃಷ್ಟಿಯಿಂದ, ಇಲ್ಲವೆ ಸಮ್ಮತಿಯ ದೃಷ್ಟಿಯಿಂದ, ರಾಯರನ್ನು ನೋಡುತ್ತಲೇ ಇರಲಿಲ್ಲ.

ಊಟ ಮಾಡಿಯೊ ಇಲ್ಲವೆ ಹಾಗೆಯೊ ರಾಯರು ಹೊರಡುತ್ತ ಕೇಳುತ್ತಿದ್ದರು :

"ಬರಲಾ ಶಂಕರಿ ? "

"ಹೂಂ. ನಾಳೆ ಬೇಗ್ಬನ್ನಿ."

ಆ ಉತ್ತರ ಕೇಳಿ, ಕತ್ತಲೆಯಲ್ಲಿ ಬೀದಿಗಿಳಿಯುತ್ತ ರಾಯರು ನೋವಿನಿಂದ ನಿರಾಸೆಯಿಂದ ನಸುನಗುತ್ತಿದ್ದರು.

ಒಂದು ಸಂಜೆ, ಊಟಬೇಡವೆಂದ ರಾಯರಿಗೆ ಅಮ್ಮಿ ಒಂದು ಲೋಟ ಹಾಲು ಕೊಟ್ಟಳು. ಅದನ್ನು ಕುಡಿಯುತ್ತ ಅವರೆಂದರು :

" ನನಗೂ ಹಾಲು, ಮಗುವಿಗೂ ಹಾಲು. ಅಲ್ವಾ ಶಂಕರಿ ? "

" ಹೂಂ....ನೀವೂ ಮಗೂನೇ...."

ಹಾಲು ಕುಡಿಯುತ್ತ ರಾಯರ ದೃಷ್ಟಿ, ಅಮ್ಮಿಯ ತುಂಬಿದ ಎದೆಯತ್ತ ಹೋಗುತ್ತಿತ್ತು ; ಮುಖದತ್ತ-ಕಣ್ಣು ಮೂಗು ತುಟಿಗಳತ್ತ-ಸರಿಯುತ್ತಿತ್ತು. ಆದರೆ ಒಂದಿಷ್ಟಾದರೂ ಅಮ್ಮಿ ಗಮನ ಕೊಡಬೇಡವೆ ?

ರಾಯರು ನಿಟ್ಟುಸಿರು ಬಿಟ್ಟರು. ಎಂಥ ಹುಚ್ಚು ಈ ಬನಶಂಕರಿಗೆ—ಎಂದುಕೊಂಡರು. ಮಗು ಬಂತೆಂದು ಒಬ್ಬ ಹೆಣ್ಣು ಹೀಗೂ ಮಾರ್ಪಡುವುದು ಸಾಧ್ಯವೆ ?—ಎಂದು ಅವರಿಗೆ ಆಶ್ಚರ್ಯವಾಯಿತು.

ಆದರೆ ಆ ಪರಿಸ್ಥಿತಿಯನ್ನು ಅವರು ಹಾಗೆಯೇ ಇರಗೊಡುವಂತಿರಲಿಲ್ಲ......

ಮಗು ರಾಜಣ್ಣನಿಗೆ ಮೂರು ತಿಂಗಳು ತುಂಬಿದೊಂದು ಸಂಜೆ....

ಅದು ಇದು ಮಾತಾಡುತ್ತಲೇ ಊಟ ಮಾಡಿದ ರಾಯರು, ಹೊರಡುವ ಆತುರ ತೋರಲಿಲ್ಲ.

" ಯಾಕೋ ತಲೆನೋವು "—ಎಂದರು.

ಅಮ್ಮಿ ಸಹಜವಾಗಿಯೆ ಗಾಬರಿಗೊಳ್ಳುತ್ತ, " ಬಿಸಿಲಲ್ಲಿ ಓಡಾಡಿದ್ರೇನೊ....ಇಲ್ಲೇ ಮಲಕ್ಕೊಳ್ಳಿ " ಎಂದಳು.

ರಾಯರು ಆಸೆಯಿಂದ ಆಕೆಯ ಮುಖ ನೋಡಿದರು. ಅಲ್ಲೇನೂ ಇರಲಿಲ್ಲ. ಸ್ವರ ಸಾಮಾನ್ಯವಾಗಿತ್ತು.... ಆದರೂ ಹಾಸಿಗೆಯಲ್ಲೊರಗಿಕೊಂಡು, ಪಕ್ಕದಲ್ಲೆ ಇದ್ದ ತೂಗುತೊಟ್ಟಿಲನ್ನೂ ಅದಕ್ಕೆ ಬಿಗಿದು ಹಾಸಿಗೆಯ ಮೇಲೆ ಇಳಿಬಿಟ್ಟಿದ್ದ ಹಗ್ಗವನ್ನೂ ನೋಡಿದರು...ಮಗು ನಿದ್ದೆ ಹೋಗಿತ್ತು.

ಅಡುಗೆ ಮನೆ ಸಾರಿಸಿ ದಿನದ ಕೆಲಸ ಮುಗಿಸಿಕೊಂಡು, " ಉಶ್ಶಪ್ಪ " ಎಂದಳು ಅಮ್ಮಿ, ಮೈಸಡಿಲಿಸುತ್ತ.

" ಯಾಕೆ ? ಆಯಾಸವಾಯ್ತೆ ? "

" ಆಯಾಸ ಎಂಥಾದ್ದು ? ಸುಮ್ನೆ ಅಂದೆ—ಅಷ್ಟೆ."

ಬಾ—ಎಂದು ಕರೆಯಬೇಕೆನ್ನಿಸಿತು ರಾಯರಿಗೆ. ಆದರೆ ಅವರು ಬಾಯಿ ಬಿಡಲಿಲ್ಲ.

ಬನಶಂಕರಿ ಚಾಪೆ ತಂದು ತೊಟ್ಟಿಲ ಇನ್ನೊಂದು ಮಗ್ಗುಲಲ್ಲಿ ಹಾಸತೊಡಗಿದಳು. ಹಾಸಿಗೆಯ ಮೇಲೆ ಮಲಗಿದ್ದ ರಾಯರನ್ನು ನೋಡುತ್ತಾ ಆಕೆಗೆ ಏನೇನೋ ನೆನಪುಗಳಾದುವು. ಅವರ ತಲೆ ನೋವಿನ ಕಾರಣವೂ ಹೊಳೆದುಹೋಯಿತು. ತಾನು ಅವರ ಬಳಿ ಹೋಗದೆ ತಪ್ಪು ಮಾಡುತ್ತಿರುವೆನೇನೋ ಎಂಬ ಶಂಕೆ ಮೂಡಿತು.

" ಯಾಕೆ ಹಾಸ್ತೀಯಾ ಚಾಪೆ ? "

ರಾಯರ ಸ್ವರ ಸ್ವಲ್ಪ ಗಡುಸಾಗಿತ್ತು.

" ಮಗು ಎದ್ದಾಗ ರಮಿಸೋಕೆ ಅನುಕೂಲವಾಗುತ್ತೇಂತ."

ತಪ್ಪುಗಾರಳಂತೆ ಅಮ್ಮಿ ಉತ್ತರವಿತ್ತಳು.

" ಶಂಕರಿ ? ಚಾಪೆ ಅಲ್ಲಿ ಬಿಟ್ಬಿಡು. ದೀಪ ಆರಿಸಿ ಇಲ್ಲೇ ಮಲಕೋ."

ಅದು ತೀರ ಹೊಸತಾದ ವರ್ತನೆ. ಅಮ್ಮಿ ನಡುಗಿದಳು. ಹಾಗೆಯೇ ನಿಂತಳು ಕ್ಷಣಕಾಲ.

ಕ್ಷಣಾರ್ಧವೂ ಇಡಿಯ ಯುಗವಾಗಿತ್ತು ರಾಯರ ಪಾಲಿಗೆ.

ಸ್ವಲ್ಪ ಸ್ವರ ತಗ್ಗಿಸಿ ರಾಯರು, "ಇನ್ನೂ ನಿಂತೇ ಇದೀಯಲ್ಲೇ," ಎಂದರು.

"ಬಂದೆ," ಎಂದಳು ಅಮ್ಮಿ ದೀಪ ಆರಿಸುತ್ತಾ. ಕೇಳಿಸದಷ್ಟು ಕ್ಷೀಣವಾಗಿ ಆಕೆಯ ಉತ್ತರ ಹೊರಕ್ಕೆ ನುಸುಳಿತ್ತು.

ಹತ್ತಿರ ಬಂದು ತನ್ನ ಬಳಿಯಲ್ಲಿ ಮಲಗಿಕೊಂಡ ಅಮ್ಮಿಯನ್ನು ರಾಯರು ತನ್ನಡೆಗೆ ಎಳೆದರು.

"ಯಾಕೆ ಶಂಕರಿ—ಕೋಪವೆ ನನ್ಮೇಲೆ ?"

"ಇಲ್ವಲ್ಲಾ !"

"ಮತ್ತೆ ? ಇಷ್ಟು ದಿನ ಆದ್ರೂ—"

ತಪ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ.

"ಇಚ್ಛೆ ಇಲ್ವೆ ನಿಂಗೆ ?"

ಆ ಮೌನವನ್ನು ನಾಚಿಕೆ ಎಂದು ಭಾವಿಸಿದ ರಾಯರಿಗೆ ತುಸು ಸಮಾಧಾನವಾಯಿತು.

"ಹುಂ ! ಬರೇ ಬೆಪ್ಪು !"

ಮಾತನಾಡಲೇ ಇಲ್ಲ ಅಮ್ಮಿ. ರಾಯರು ಮುಂದಾದರು...

...ಬೆಳಿಗ್ಗೆ ಎದ್ದ ರಾಯರಿಗೆ ನಿಜವಾಗಿಯೂ ತಲೆ ನೋಯುತ್ತಿತ್ತು. ಬಲಾತ್ಕಾರ ಮಾಡಿದೆನೆಂದು ತಿಳಿದು ಕಸಿವಿಸಿಗೊಂಡಿತ್ತು ಅವರ ಮನಸ್ಸು. ಅಮ್ಮಿ ಆಗಲೆ ಎದ್ದು ಹಿತ್ತಿಲಿಗೆ ಹೋಗಿದ್ದಳು. ಆಕೆ ಬರುವುದಕ್ಕೆ ಮುಂಚೆಯೇ ರಾಯರು, "ಬರ್‍ತೀನಿ ಶಂಕರೀ" ಎಂದು ಗಟ್ಟಿಯಾಗಿ ಕೂಗಿ ನುಡಿದು ಹೊರಟರು.

ಆ ಸ್ವರ ಕೇಳಿ ಅಮ್ಮಿ ಬೇಗನೆ ಒಳಕ್ಕೆ ಬಂದರೂ ಅವರು ಕಾಣಸಿಗಲಿಲ್ಲ. ಮಗುವಷ್ಟೇ ಅಳುತ್ತಿತ್ತು. ಅಮ್ಮಿ ಕಂದನನ್ನೆತ್ತಿಕೊಂಡು ಮುದ್ದಿಸಿ ಎದೆಗವಚಿಕೊಂಡಳು. ಬಿಸಿಬಿಸಿಯಾದ ಕಂಬನಿಯಿಂದ ಆಕೆಯ ಕಪೋಲಗಳು ತೋಯ್ದುವು.

ರಾಯರು ನಾಲ್ಕು ದಿನ ಬರಲಿಲ್ಲ. ಬಿಡುವಿಲ್ಲವೆಂದಷ್ಟೆ ಹೇಳಿಕಳುಹಿದರು.

"ದೇವಸ್ಥಾನ್ದಾಗೇ ಉಳಕೊಂಡವ್ರೆ," ಎಂದ ತಿಮ್ಮಪ್ಪ, ಹೋಗಿ ನೋಡಿ ಬಂದು.

ಐದನೆಯ ದಿನ ಅವರು ಬಂದಾಗ ಅಮ್ಮಿ, ಅವರ ಕೊರಳಿಗೆ ಜೋತುಬಿದ್ದಳು :

"ನನ್ದು ತಪ್ಪಾಯ್ತು. ಏನೂ ತಿಳೀದ ಮಗು ನಾನು. ಅದಕ್ಕೆ ನೀವು ಕೋಪಿಸ್ಕೊಳ್ಳೋದೆ ?"

"ನಾನು ಕೋಪಿಸ್ಕೊಂಡೇಂತ ಯಾರೇ ನಿಂಗೆ ಹೇಳ್ದೋರು ?"

"ನನಗಷ್ಟೂ ಗೊತ್ತಾಗಲ್ವೇನು ?"

"ಹೋಗಲಿ ಬಿಡು. ಸುಮ್ಸುಮ್ನೆ ಏನಾರೂ ಅನ್ಬೇಡ..."

"ಕ್ಷಮಿಸ್ದೆ ಅಂತ ಹೇಳಿ."

"ಇಷ್ಟವಿಲ್ಲದಿದ್ರೂ ನಿಂಗೆ ತೊಂದ್ರೆ ಕೊಟ್ನಲ್ಲಾ. ಅದಕ್ಕೆ ನೀನು ಕ್ಷಮಿಸ್ಬೇಕು ನನ್ನ."

ಅಮ್ಮಿ ಮೂಕಳಾಗಿ, ರಾಯರ ಎದೆಯಲ್ಲಿ ಮುಖವಿಟ್ಟು ಬಿಸಿಯುಸಿರು ಬಿಡುತ್ತಾ, ರಾಯರ ಬಲಗೈಯ ಬೆರಳುಗಳೊಡನೆ ಆಟವಾಡಿದಳು.

ಹೀಗೆ, ಮಗುವಿನ ತಾಯಿಯಾದ ಅಮ್ಮಿ ಮತ್ತೆ ಪ್ರೇಯಸಿಯಾದಳು...

ಆಕೆಯ ಆರೋಗ್ಯ ಕೆಟ್ಟಿತು. ತಡೆದು ತಡೆದು ಮುಟ್ಟಾದಳು. ದೇಹ ಬಳಲಿತು. ರಾಯರೂ ಗಾಬರಿಯಾಗದೆ ಇರಲಿಲ್ಲ. ವೈದ್ಯರು ಬಂದು ಪರೀಕ್ಷೆ ಮಾಡಿದರು.

"ನಿಶ್ಶಕ್ತಿ, ಅಷ್ಟೆ. ಏನೂ ಹೆದರ್ಬ್ಕೋಬೇಡಿ. ಇದು ನೂರು ವರ್ಷ ಬದುಕೋ ಗಟ್ಟಿಮುಟ್ಟಾದ ಶರೀರ. ಒಂದಿಷ್ಟು ಆಸವ ಕೊಡ್ತೀನಿ," ಎಂದರು. "ವಿಶ್ರಾಂತಿ ಮುಖ್ಯ. ಆಯಾಸವಾಗೋ ಕೆಲಸ ಮಾಡ್ಬಾರ್ದು," ಎಂದು ಎಚ್ಚರಿಕೆಯ ಮಾತನ್ನಾಡಿದರು.

ಆದರೆ ಮನೆಗೆಲಸವನ್ನು ಯಾರು ಮಾಡುವುದು ಸಾಧ್ಯವಿತ್ತು? ಹೊರಗಿನ ಕೆಲಸದಲ್ಲಿ ತಿಮ್ಮಪ್ಪನ ಮಗಳು ನೆರವಾಗುತ್ತಿದ್ದಳು. ಆದರೆ ಅದೊಂದು ನೆರವಿನಿಂದಲೇ ಮಗುವಿನ ತಾಯಿಗೆ ವಿಶ್ರಾಂತಿ ದೊರೆಯುವುದು ಹೇಗೆ ಸಾಧ್ಯ?

ವಿಶ್ರಾಂತಿಯ ಹೆಚ್ಚಿನ ಅಂಶವನ್ನು ಒದಗಿಸಿ ಕೊಟ್ಟವರು ರಾಯರು. ತನ್ನದು ಪಶು ವರ್ತನೆ ಎಂದು, ತಮ್ಮನ್ನು ತಾವೇ ಅವರು ನಿಂದಿಸಿದರು. ಆದರೂ ಆಗಾಗ್ಗೆ ದೇಹದ ಹಸಿವು ಬುದ್ಧಿಯನ್ನು ಮೀರಿ ವರ್ತಿಸುತ್ತಿತ್ತು.

ಪರಿಣಾಮವಾಗಿ ಮತ್ತೆ ಬನಶಂಕರಿ ಬಸುರಿಯಾದಳು.

ಕೋರ್ಟು ಕಚೇರಿಗಳ ಕೆಲಸದ ನಿಮಿತ್ತ ನಾರಾಯಣರಾಯರೊಮ್ಮೆ ಬೆಂಗಳೂರಿಗೆ ಹೋದರು. ಹೋಗುತ್ತ, ಹಿಂದಿರುಗಲು ಹದಿನೈದು ದಿನಗಳಾದರೂ ಬೇಕು, ಎಂದರು.

ಆ ಸಂದರ್ಭದಲ್ಲೊಂದು ಸಂಜೆ ಅಮ್ಮಿ, ಒಂಭತ್ತು ತಿಂಗಳ ತನ್ನ ಮಗುವನ್ನೆತ್ತಿ ಕೊಂಡು, ದೇವಸ್ಥಾನಕ್ಕೆ ಹೋದಳು. ಕೆಲಸದಾಕೆ ಇದ್ದಳು ಜತೆಯಲ್ಲಿ.

ಆಗ, ದೇವಸ್ಥಾನದ ಅಂಗಳದಲ್ಲಿ...

ಎಂಟು ವರ್ಷ ಆರು ವರ್ಷಗಳ ಮಕ್ಕಳಿಬ್ಬರನ್ನು ಕರೆದುಕೊಂಡು ಹೆಂಗಸೊಬ್ಬಳು ಹೊರಹೊರಟಿದ್ದಳು. ಆಕೆಯನ್ನು ನೋಡುತ್ತ ಅಮ್ಮಿಯ ಕೆಲಸದಾಕೆ, "ದೊಡ್ಡಮ್ಮಾವ್ರು ಬತ್ತವ್ರೆ," ಎಂದು ಗಾಬರಿಯ ಸ್ವರದಲ್ಲಿ ಅಂದಳು.

ದೊಡ್ಡಮ್ಮಾವರು—

ಅಮ್ಮಿಗೆ ಅರ್ಥವಾಯಿತು. ತಾನು ನೋಡಿದ್ದ ನೆನಪಿರಲಿಲ್ಲವಾದರೂ ಆಕೆಯ ಬಗ್ಗೆ ರಾಯರ ಬಾಯಿಯಿಂದಲೇ ಎಷ್ಟೋ ಸಾರೆ ಕೇಳಿದ್ದ ಅಮ್ಮಿಗೆ, ಆಕೆಯನ್ನು ಗುರುತಿಸುವುದು ಕಷ್ಟವಾಗಲಿಲ್ಲ. ಕುತೂಹಲದಿಂದ ತನ್ನ ಮಗುವಿನ ತಂದೆಯ ಆ ಹೆಂಡತಿಯನ್ನೂ ಇಬ್ಬರು ಮಕ್ಕಳನ್ನೂ ಆಕೆ ನೋಡಿದಳು.

ರಾಯರ ಹೆಂಡತಿಗೆ ಅಮ್ಮಿಯ ಪರಿಚಯ ಸರಿಯಾಗಿ ಇರಲಿಲ್ಲ. ವಿಧವೆ ಸುಬ್ಬಕ್ಕನ ಜತೆಯಲ್ಲಿದ್ದ ಸಕೇಶಿ ಹುಡುಗಿಯೊಬ್ಬಳನ್ನು ಬಲು ಹಿಂದೆ ಅವಳು ಕಂಡಿದ್ದಳು. ಆದರೆ ಮಗುವನ್ನೆತ್ತಿಕೊಂಡಿರುವ ಈ ಹೆಂಗಸೇ ಆಕೆ ಇರಬಹುದೆಂದು ಅವಳು ಭಾವಿಸಲಿಲ್ಲ.

ಹಣೆಯಲ್ಲಿ ಕುಂಕುಮವಿರಲಿಲ್ಲ. ಕೈಗಳು ಬರಿದಾಗಿದ್ದುವು. ಮೂಗಿನಲ್ಲಿ ಬರಿಯ ತೂತು. ಆದರೆ ಓರಣವಾಗಿದ್ದ ತಲೆಗೂದಲು. ಎತ್ತಿಕೊಂಡಿದ್ದ ಮುದ್ದಾದ ಮಗು. ಅಪರಿಚಿತಳಾದ ಈಕೆ ಯಾರೆಂದು ರಾಯರ ಹೆಂಡತಿಯೂ ನೋಡಿದಳು.

ಆಗ ಕೆಲಸದವಳು ಆಕೆಯ ಕಣ್ಣಿಗೆ ಬಿದ್ದಳು. ಎವೆ ಮುಚ್ಚಿ ತೆರೆಯುವುದರೊಳಗಾಗಿ ತಿಳಿದುಹೋಯಿತು.

"ಚಿಕ್ಕಿ!"

ಅದು ಅಧಿಕಾರದ ವಾಣಿ.

"ಈ ಊರಲ್ಲೇ ಇದ್ದೇನೆ ಈಗ ?"

"ಹೂನಮ್ಮಣ್ಣಿ..."

"ಎಲ್ಲಿದ್ದೀಯ ?"

ಅಳುಕುತ್ತಲೆ ಆ ಚಿಕ್ಕಿ ಅಮ್ಮಿಯತ್ತ ಬೊಟ್ಟು ಮಾಡಿದಳು.

"ಇವರ್ತಾವ."

"ಓ."

ಆ ಹೆಂಗಸು ಅಮ್ಮಿಯ ಸಮೀಪಕ್ಕೆ ಬಂದಳು.

"ಓ! ನೀನೇ ಏನು ಶಂಕರೀಂತನ್ನೋಳು ?"

"ಗೌರವ ಇಟ್ಟು ಮಾತ್ನಾಡಿ."

"ಏನಂದೆ ? ಗೌರವ ! ಬಜಾರಿ !..."

ಸುತ್ತಮುತ್ತಲಿಂದ ಬಂದು ಹೆಂಗಸರು ಸೇರಿದರು ; ಗಂಡಸರು ಸೇರಿದರು. ರೋದಿಸುವ ಸ್ವರದಲ್ಲಿ ಮಾತನಾಡುತ್ತ, ಹಣೆ ಚಚ್ಚಿಕೊಳ್ಳುತ್ತ, ರಾಯರ ಹೆಂಡತಿ ಕೂಗಾಡಿದಳು.

"ನೋಡಿ, ನೋಡೀಪ್ಪಾ...ಈ ಮೋಹಿನೀನೆ ನನ್ನ ಮಾಂಗಲ್ಯ ಕಸಕೋತಿರೋದು. ಇವಳೇನಪ್ಪಾ ನನ್ಮನೇಗೆ ಬೆಂಕಿ ಇಟ್ಟೋಳು...ನನ್ಮಗೂನ ತಿಂದೋಳು ಈ ರಾಕ್ಷಸೀನೇ..."

"ಮುಚ್ಚಿ ಬಾಯಿ !" ಎಂದು ಅಮ್ಮಿ ಕಿರಿಚಿದಳು. ನೆರೆದವರೆಲ್ಲ ತನ್ನನ್ನೆ ನೋಡುತ್ತಿದ್ದರು, ಗುಸುಗುಸು ಮಾತನಾಡುತ್ತ. ಸುಂದರಮ್ಮನಿಗಾಗಿ ಅಮ್ಮಿಯ ಕಣ್ಣುಗಳು ಅತ್ತಿತ್ತ ಓಡಾಡಿದುವು. ಆದರೆ ಅಲ್ಲಿ ಯಾರೂ ಇರಲಿಲ್ಲ. ತನ್ನ ನೆರವಿಗೆ ಬರುವವರು ಒಬ್ಬರೂ ಇರಲಿಲ್ಲ. ಅವರಿಗೆಲ್ಲ ಅದೊಂದು ಹಬ್ಬವಾಗಿತ್ತು, ಆ ಜನ ನಗುತ್ತಿದ್ದರು.

ಅಮ್ಮಿಯ ಸಂತಾನ ನಾಶವಾಗಲೆಂದು ಶಪಿಸುತ್ತ ರಾಯರ ಹೆಂಡತಿ, ತನ್ನ ಮಕ್ಕಳನ್ನು ಬಿಟ್ಟು, ಅಮ್ಮಿಯ ಮೇಲೆ ಹರಿಹಾಯ್ದಳು. ಸೆರಗನ್ನೆಳೆದಳು. ತುರುಬಿಗೆ ಕೈ ಹಾಕಿದಳು. ಮಗು ಅಳತೊಡಗಿತು. "ಅಯ್ಯೋ !" ಎಂದು ಅಮ್ಮಿ ಚೀರಿದಳು. ಆಕೆಯ ಕಾಲುಗಳು ಕಂಪಿಸಿದುವು. ಆಕೆ ಅಧೀರಳಾದಳು. ತನ್ನ ಮಗು, ತನ್ನ ಮಗು...ಅಯ್ಯೊ !...

ಮೇಲೆ ಬೀಳುತ್ತಿದ್ದ ರಾಯರ ಹೆಂಡತಿಯನ್ನು ತನ್ನೆಲ್ಲ ಬಲದಿಂದ ಹಿಂದಕ್ಕೆ ತಳ್ಳಿ, ಮಗುವನ್ನು ಎದೆಗವಚಿಕೊಂಡು, ಅಮ್ಮಿ ಅಲ್ಲಿಂದ ಕಂಬಿ ಕಿತ್ತಳು. ಆಕೆ ನೂಕಿದ ರಭಸಕ್ಕೆ ಕುಸಿದುಬಿದ್ದ ರಾಯರ ಹೆಂಡತಿ, ನೆಲಕ್ಕೆ ಕೈ ಬಡಿಯುತ್ತ ಶಪಿಸಿದಳು :

"ನಿನ್ನ ವಂಶ ನಾಶವಾಗಿ ಹೋಗ್ಲಿ ! ದೇವರು ನಿನಗೆ ಶಾಸ್ತಿ ಮಾಡ್ಲಿ !"

ತನಗೆ ದೊರೆಯುತ್ತಿದ್ದ ಶಾಪಕ್ಕೆ ಕಿವಿಗೊಡಲು ಅಮ್ಮಿ ಅಲ್ಲಿರಲಿಲ್ಲ.

ಬೀದಿಯ ಜನ ತನ್ನನ್ನೆ ನೋಡುತ್ತಿದ್ದರೂ ಲೆಕ್ಕಿಸದೆ, ಸ್ವಲ್ಪ ದೂರ ಮೆಲ್ಲನೆ ಓಡುತ್ತ ಸ್ವಲ್ಪ ದೂರ ವೇಗವಾಗಿ ನಡೆಯುತ್ತ ಮನೆ ಸೇರಿ, ಬಾಗಿಲು ಮುಚ್ಚಿ, ಒಳಗಿಂದ ಅಗಣಿ ಹಾಕಿಕೊಂಡಳು. ಈ ಗದ್ದಲಕ್ಕೆ ಮಗು ಮತ್ತಷ್ಟು ಅತ್ತಿತು. ಅದನ್ನು ಎದೆಗವಚಿಕೊಂಡೇ ಅಮ್ಮಿಯೂ ಅತ್ತಳು.

ಸ್ವಲ್ಪ ಹೊತ್ತಿನಲ್ಲೆ ಬಂದ ಕೆಲಸದಾಕೆ ಕಿಟಕಿಯಿಂದ ಒಳಕ್ಕೆ ನೋಡುತ್ತಾ ಅಂದಳು :

"ನಂಗೆ ಗಾಬರಿಯಾಗ್ಬಿಡ್ತವ್ವ. ಅಯ್ಯೋ, ಎಂಗ್ಮಾಡ್ಬುಟ್ರು ಆ ದೊಡ್ಡಮ್ಮಾವ್ರು !

ಅಂತೂ ಮನೆ ಸೇರ್ಬಿಟ್ವಿ…ನೀವಿನ್ನು ದೇವಸ್ಥಾನಕ್ಕೆ ಹೋಗ್ಬೇಷ್ರವ್ವ…"

ಆ ರಾತ್ರೆಯೆಲ್ಲಾ ಅಮ್ಮಿಗೆ ನಿದ್ದೆ ಬರಲಿಲ್ಲ. ಮರುದಿನ ಹಗಲೂ ಅಷ್ಟೆ, ಆಕೆಯ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಪ್ರತಿ ಕ್ಷಣವೂ ಗಂಡಾಂತರವನ್ನು ನಿರೀಕ್ಷಿಸುತ್ತಲೆ ಇದ್ದಳು. ರಾಯರು ಬೇಗನೆ ಬರಬಾರದೆ—ಎಂದು ಅಮ್ಮಿ ಹಲುಬಿದಳು. ಬೆಂಗಳೂರು ಬಲು ದೂರ. ಯಾರನ್ನಾದರೂ ಕಳುಹಿಸಿಕೊಟ್ಟು ಕರೆಸುವುದೂ ಸಾಧ್ಯವಿರಲಿಲ್ಲ. ಅವರು ಬರುವ ತನಕ ತನ್ನ ಮಗುವಿಗೇನೂ ಆಗದಿದ್ದರೆ ಸಾಕು—ಎಂದುಕೊಂಡಳು.

ಊರಿಗೆ ಹಿಂತಿರುಗಿದ ರಾಯರು ತಾವು ಇಲ್ಲದಿದ್ದಾಗ ನಡೆದ ರಾದ್ಧಾಂತದ ವರ್ಣರಂಜಿತ ವರದಿಯನ್ನೆಲ್ಲ ಕೇಳಿಕೊಂಡೇ ಅಮ್ಮಿಯ ಮನೆಗೆ ಬಂದರು. ಬೆಂಗಳೂರಿನಿಂದ ಅಮ್ಮಿಗಾಗಿ ತಂದಿದ್ದ ಕುಸುರಿನ ನೆಯ್ಗೆಯ ಅಂಚುಗಳಿದ್ದ ರೇಷ್ಮೆ ಸೀರೆ, ಮಗುವಿಗಾಗಿ ಕೊಂಡು ಬಂದಿದ್ದ ಉಣ್ಣೆಯ ಅಂಗಿ—ಟೋಪಿ ಆಟದ ಸಾಮಾನುಗಳು, ಎಲ್ಲವನ್ನೂ ಹಾಸಿಗೆಯ ಸುರುಳಿಯ ಮೇಲೆ ಎಸೆದರು. ಮೌನವಾಗಿ ಸ್ವಲ್ಪ ಹೊತ್ತು ಕುಳಿತರು.

ಅವರನ್ನು ಯಾವ ರೀತಿ ಎದುರ್ಗೊಳ್ಳಬೇಕೆಂಬ ಬಗ್ಗೆ ಹತ್ತಾರು ಸಾರೆ ವಿವರವಾಗಿ ಅಮ್ಮಿ ಯೋಚಿಸಿದ್ದಳು. ನಡೆದುದನ್ನು ಹೇಗೆ ತಿಳಿಸಬೇಕೆಂಬುದನ್ನೆಲ್ಲ ಗೊತ್ತು ಮಾಡಿದ್ದಳು. ಆದರೆ ರಾಯರ ಅಸಮಾಧಾನದ ಸಿಟ್ಟಿನ ಮುಖಮುದ್ರೆಯನ್ನು ನೋಡುತ್ತಲೆ, ಹೇಳಬೇಕೆಂದು ಅಮ್ಮಿ ಯೋಚಿಸಿದ್ದೆಲ್ಲಾ ಮರೆತುಹೋಯಿತು. ತಂದ ಉಡುಗೊರೆಗಳು ಕೆಳಕ್ಕೆ ಬಿದ್ದ ಶಬ್ದ ಕೇಳಿ ಆಕೆಯ ಹೃದಯ ನಡುಗಿತು.

"ಏನೇ ಇದು ? ಯಾಕೇ ಹೀಗ್ಮಾಡ್ದೆ ? ನಾನು ನಾಲ್ಕು ದಿವಸ ಊರಿಗೆ ಹೋಗ್ಲೀಂತ ಇದಕ್ಕೆಲ್ಲಾ ಸಮಯ ಕಾಯ್ತಾ ಇದ್ದೆಯೇನು ?"

ಅಮ್ಮಿಯ ಹೃದಯದೊಳಗೇ ಕುದಿಯುತ್ತ ಉಕ್ಕೇರುತ್ತಿದ್ದ ನೋವಿಗೆ ಹೊರಹೋಗಲು ಇದ್ದ ಹಾದಿಯೊಂದೇ ಅಳು. ಕಣ್ಣೀರು ಧುಮುಧುಮಿಕಿ ಕಣ್ಣಂಚುಗಳತ್ತ ಸರಿಯಿತು. ಆದರೆ ಆಕೆಗೆ ಅವಮಾನವಾಗಿತ್ತು, ತನ್ನನ್ನು ಪ್ರೀತಿಸಿದವರೇ ತನ್ನ ಬಗೆಗೆ ಕಟು ಮಾತುಗಳನ್ನಾಡಿದ್ದರು, ಹಾಗೆ ಮಾತನಾಡಿ ಅವರು ತಪ್ಪು ಮಾಡಿದ್ದರು. ಅವರ ಮುಂದೆ ತಾನು ಅಪರಾಧಿಯಲ್ಲ; ತಾನು ತಲೆಬಾಗಿಸಬೇಕಾದ್ದಿಲ್ಲ; ಅಂದಮೇಲೆ ಅಳುವುದಾದರೂ ಯಾಕೆ ?

ಅಮ್ಮಿ ತುಟಿಗಳನ್ನು ಬಿಗಿದುಕೊಳ್ಳುತ್ತ ಪ್ರಯಾಸದಿಂದ ಕಂಬನಿಯನ್ನು ತಡೆಹಿಡಿದಳು.

"ನೀನು ಒಳ್ಳೇವಳೂಂತ ನಂಬಿದ್ರೆ, ನಾನು ತಲೆಯೆತ್ತಿ ನಡೀದ ಹಾಗೇ ಮಾಡ್ತೀಯಲ್ಲೇ !"

ಅಮ್ಮಿ ಇನ್ನು ತಡೆಯಲಾರದೆ ನೇರವಾಗಿ ಅವರನ್ನೆ ನೋಡುತ್ತ ಅಂದಳು :

"ಯಾಕ್ರಿ ಹೀಗ್ಮಾತಾಡ್ತೀರಾ ? ವಿಷಯ ಏನೂಂತ ತಿಳಕೊಳ್ದೇನೇ ಅಂತೀರಲ್ಲ. ಯಾರ್ದು ತಪ್ಪು ?"

ತಪ್ಪು ಯಾರದೊ ? ಅದನ್ನೆಲ್ಲ ವಿಚಾರಿಸುವುದು ರಾಯರಿಗೆ ಬೇಕಾಗಿರಲಿಲ್ಲ. ಅಮ್ಮಿ ನಿರಪರಾಧಿಯಾಗಿರಬಹುದು. ಅವರಾಕೆಯೇ ಕಾಲು ಕೆರೆದು ಜಗಳಕ್ಕೆ ಬಂದಿರಬಹುದು. ಅದೇನೇ ಇದ್ದರೂ ಬೀದಿ ಬೀದಿಯಲ್ಲೂ ತನ್ನ ಬಗೆಗೆ ಜನ ಆಡಿಕೊಳ್ಳುವಂತಾಯಿತಲ್ಲ ? ಹಾಗಾಗಲು ಅಮ್ಮಿಯಲ್ಲವೆ ಕಾರಣ ?

" ನೀನು ಯಾಕೆ ಹೊರಗೆ ಹೋಗ್ಬೇಕಾಗಿತ್ತೂಂತ ? "

" ಏನು ? ದೇವಸ್ಥಾನಕ್ಕೂ ಹೋಗ್ಕೂಡ್ದೆ ನಾನು ? "

" ನಿನಗೊಂದೂ ಅರ್ಥವಾಗೋದಿಲ್ಲ ಶಂಕರಿ. ಎಂಥೆಂಥ ಮಾತು ಕೇಳಿ ನಾನು ಬದುಕ್ತಿದೀನೀಂತ ನಿನಗೇನಾದರೂ ಅರ್ಥವಾಗುತ್ತೇನು ? "

" ನೀವು ಆ ಮಾತು ಕೇಳಿರೋದೆಲ್ಲ ನನ್ನಿಂದಾಗಿ—ಅಲ್ಲ ? "

" ಅಲ್ದೆ—ಮತ್ತೇನೂಂತಿದ್ದೆ ? "

ಕಹಿಯಾದುದೇನೋ ಬಾಯಿತುಂಬ ಹರಡಿದ ಹಾಗಾಯಿತು ಅಮ್ಮಿಗೆ. ಉಗುಳ ಲಾಗದ ಎಂಜಲನ್ನು ನುಂಗುತ್ತ ಅವಳೆಂದಳು :

" ನನ್ನ ಉದ್ಧಾರ ಮಾಡೋಕೆ ಹೋಗಿ ನಿಮಗೀ ಗತಿ ಬಂತು ! "

" ಮುಚ್ಚೆ ಬಾಯಿ ! "

ರಾಯರೆದ್ದು ಬೀದಿಗಿಳಿದು ಹೊರಟೇಹೋದರು.

ಅಮ್ಮಿ ಅಡುಗೆ ಮಾಡಲಿಲ್ಲ. ಚಾಪೆಯ ಮೇಲೆ ಅಳುತ್ತ ಬಿಸುಸುಯ್ಯುತ್ತ ಹೊರ ಳಾಡಿದಳು. ಪುಟ್ಟ ಕೂಸು ಬಂದು, ಬಾಳುವೆಯಲ್ಲಿ ಪರಮ ಸುಖ ಎನ್ನುವುದು ತನಗೆ ದೊರಕಿದ್ದಾಗಲೇ ಹೀಗಾಗಬೇಕೆ ? ತನ್ನನ್ನು ಪ್ರೀತಿಯಿಂದ ಕರೆದು ಅಭಯ ನೀಡಿದವರೇ ಈ ರೀತಿ ವರ್ತಿಸಬೇಕೆ ?

ಮೊದಲ ಉದ್ವೇಗ ಶಮನವಾದಂತೆ ಅಮ್ಮಿ ತಪ್ಪು ತನ್ನದೇ ಇರಬಾರದೇಕೆ ಎಂದು ಯೋಚಿಸಿದಳು. ಮಗುವನ್ನೆತ್ತಿಕೊಂಡು ನಾಲ್ಕು ಜನರ ಮುಂದೆ ಜಂಭದಿಂದ ಮೆರೆಯ ಬೇಕೆಂಬ ಉದ್ದೇಶದಿಂದಲೇ ಅಲ್ಲವೆ ತಾನು ದೇವಸ್ಥಾನಕ್ಕೆ ಹೋದುದು ! ರಾಯರ ಹೆಂಡತಿಗೆ ತಾನೇನೂ ಅಂದಿರಲಿಲ್ಲ. ಅನ್ನದೇ ಇದ್ದರೂ ಮುಖ್ಯ ಅಲ್ಲಿಗೆ ಹೋದುದು ತಪ್ಪಾಯಿತು. ಅವರು ಛೀಮಾರಿ ಹಾಕಿದಾಗಲಾದರೂ ತಾನು ಸುಮ್ಮನಿರಬೇಕಿತ್ತು. ಅವರು ಮುನಿದರೆ ತನಗೆ ಬೇರೆ ಯಾರು ಗತಿ ? ಅವರಿಗೂ ಇದಿರಾಡಿದೆನಲ್ಲವೆ ? ಹಾಗೆ ಮಾಡಬಾರದಿತ್ತು...

ಆದರೆ ಹಾಗೆಂದು ಈಗ ಯೋಚಿಸಿ ಏನು ಪ್ರಯೋಜನ ?

ಸ್ವಲ್ಪ ವಿಚಿತ್ರವಾಗಿಯೇ ತೋರುತ್ತಿದ್ದ ಮನೆಯೊಳಗಿನ ಶಾಂತತೆಯನ್ನು ಗಮನಿಸಿ ತಿಮ್ಮಪ್ಪ ಬಾಗಿಲ ಬಳಿ ನಿಂತು, " ಯಾಕ್ರವ್ವಾ, ಧಣೇರು ಹೊಂಟೋದ್ರಾ ? " ಎಂದ.

" ಹೂನಪ್ಪಾ," ಎಂದಳು ಅಮ್ಮಿ.

ಆ ಸ್ವರವನ್ನು ಕೇಳಿ ತಿಮ್ಮಪ್ಪ, ಏನಾಗಿದ್ದಿರಬಹುದೆಂಬುದನ್ನು ಊಹಿಸಿಕೊಂಡ.

" ಏಳಿ ತಾಯಿ. ಹಿಂಗುಪ್ವಾಸ ಮನಿಕ್ಕೊಂಡ್ರೆ ಕಾಯಿಲೆ ಬೀಳ್ತೀರಾ—"

ಹಾಗೆ ಹೋದ ರಾಯರು ಒಂದು ವಾರವಾದರೂ ಬರಲಿಲ್ಲ. ಮನೆಗೆ ಬೇಕಾದ ಸಾಮಾನು ಸರಂಜಾಮುಗಳನ್ನೇನೊ ತಿಮ್ಮಪ್ಪ ತರುತ್ತಿದ್ದ. ಆದರೆ ಅಮ್ಮಿ ಯಾವುದರಲ್ಲೂ ಆಸಕ್ತಿ ಇಲ್ಲದವಳ ಹಾಗೆ ಹೊತ್ತು ಕಳೆದಳು. ಮನಸ್ಸಿನ ಕಾಹಿಲೆ ಮೈಗೆ ಅಂಟಿಕೊಂಡಿತು. ತಲೆ ನೋವು ನೆಗಡಿ ಜ್ವರ ಎಂದು ಮಲಗಿಕೊಂಡಳು.

ಒಂದು ದಿನ...ಎರಡು ದಿನ...ಮಗು ರಾಜಣ್ಣನ ಸಾಮಿಪ್ಯದಿಂದಲೂ ಅಮ್ಮಿ ನಗು ಮುಖಳಾಗಲಿಲ್ಲ. ಊಟ ಉಪಚಾರ ಯಾವುದರಲ್ಲೂ ಶ್ರದ್ಧೆ ಇರಲಿಲ್ಲ ಅವಳಿಗೆ.

ಊಳಿಗದ ಚಿಕ್ಕಿ ಅಂದಳು :

"ನೀವು ರಾತ್ರೆ ನಿದ್ದೇಲಿ ಕನಸ್ನಾಗೆ ಏನೇನೋ ಅಂತಿದ್ರಮ್ಮಣ್ಣಿ."

"ಏನನ್ತಿದ್ನೆ ?"

"ಅಮ್ಮಾ—ರಾಜಾ—ಅಂತ ಏನೇನೋ. ನಂಗ್ಬಲೆ ದಿಗಿಲಾಯ್ತು. ಕೂಗಿ ಎಬ್ಸಾನಾಂತಿದ್ದೆ."

"ಯಾಕೆ ಎಬ್ಬಿಸ್ಲಿಲ್ಲ ಹಾಗಾದ್ರೆ ?"

"ಅಷ್ಟ್ರಲ್ಲೆ ನಂಗೆ ನಿದ್ದೆ ಬಂದ್ಬಿಡ್ತು ಕಣ್ರವ್ವ."

ಚಿಕ್ಕಿಯ ಮುಗ್ಧತೆ ಮೋಹಕವಾಗಿತ್ತು. ಆಕೆಯೇ ಸುಖಿ. ಆಗಾಗ್ಗೆ ಹಳ್ಳಿಗೆ ಹೋಗಿ ಬರುತ್ತಿದ್ದಳು, ಗಂಡನ ಬಳಿಗೆ.

"ಬೇರೆ ಯಾರ್ನಾರ ನಿನ್ಗಂಡ ಕಟ್ಕೊಂಡ್ರೆ ಏನ್ಮಾಡ್ತೀಯೆ ?" ಎಂದು ಆಕೆಯನ್ನು ಅಮ್ಮಿ ಒಮ್ಮೆ ಕೇಳಿದ್ದಳು, ಕುತೂಹಲದಿಂದಲೂ ತಮಾಷೆ ಎಂತಲೂ.

"ಓ ಒಳ್ಳೇ ಹೇಳ್ದ್ರಿ...ಯಾವ ರಂಭೆ ಅವನ್ನ ಕಂಟ್ಕೊಂತಾಳೊ ನೋಡ್ತೀನಿ !"

ಆಕೆಯ ಆತ್ಮವಿಶ್ವಾಸವನ್ನು ಕಂಡು ಅಮ್ಮಿಗೆ ಸಂತೋಷವಾಗಿತ್ತು.

ಆದರೆ ಈಗ—?

ರಾಯರು ತಾನು ಕೈಹಿಡಿದ ಪತಿಯಲ್ಲ. ಚಿಕ್ಕಿ ತನ್ನ ಗಂಡನ ಬಗೆಗೆ ಮಾತನಾಡುವಷ್ಟೇ ವಿಶ್ವಾಸದಿಂದ ಅವರ ಬಗೆಗೆ ತಾನು ಮಾತನಾಡುವುದು ಸಾಧ್ಯವಿರಲಿಲ್ಲ. ಅಲ್ಲದೆ ವಾಸ್ತವವಾಗಿ, ತಾನೇ ರಾಯರು ಕಟ್ಟಿಕೊಂಡ ರಂಭೆ. ಹೆಂಡತಿ ವ್ಯಗ್ರಳಾಗಿ, ಪೊರಕೆ ಎತ್ತಿದರೆ, ರಾಯರು ತನ್ನನ್ನು ಬಿಟ್ಟರೂ ಬಿಟ್ಟುಬಿಡಬಹುದು. ಅದು ತನ್ನ ಜೀವನ...

ಎಷ್ಟು ಅಸ್ಥಿರ ಆ ಜೀವನದ ಅಡಿಪಾಯ !

ಆ ರಾತ್ರೆ ಅಮ್ಮಿಯ ಮೈ ಕೆಂಡವಾಯಿತು.

ರಾತ್ರೆಯೆಲ್ಲ ನಿದ್ದೆಯಲ್ಲಿ ಕನವರಿಸುತ್ತಿದ್ದಳು ಅಮ್ಮಿ. ಕನಸಿನಲ್ಲಿ ಆಕೆ ಅಗ ಅಳುತ್ತಿದ್ದಳು : ಅತ್ತೆ—ಮಾವ, ಎನ್ನುತ್ತಿದ್ದಳು. ಅಣ್ಣ, ಕಾವೇರಿ, ಅಜ್ಜಿ, ಅಕ್ಕಾ, ಎಂದು ಹಲುಬುತ್ತಿದ್ದಳು...

ತಿಮ್ಮಪ್ಪ ಬಂದು ಎಬ್ಬಿಸಿದೊಡನೆ ಮುಂಜಾವದಲ್ಲೆ ರಾಯರು ಅಮ್ಮಿಯ ಮನೆಗೆ ಓಡಿ ಬಂದರು. ಔಷಧೋಪಚಾರ ನಡೆಯಿತು. ಒಂದು ಕ್ಷಣವೂ ಅಮ್ಮಿಯನ್ನು ಅವರು ಅಗಲಲಿಲ್ಲ. ಹಗಲೂ ರಾತ್ರೆ ಜ್ವರದೊಡನೆ ಕದನ...

ಸುದ್ದಿ ಕೇಳಿದ ಸುಂದರಮ್ಮನೂ ಬಂದು ಆರೈಕೆಗೆ ನಿಂತಳು.

ಅಮ್ಮಿ ಚೇತರಿಕೊಳ್ಳಲು ಬಹಳ ದಿನ ಹಿಡಿಯಲಿಲ್ಲ. ತನ್ನ ಬಗೆಗೆ ಇತರ ಜೀವಗಳು ತೋರುತ್ತಿದ್ದ ಪ್ರೇಮ ಸ್ನೇಹಗಳ ದಿವ್ಯೌಷಧದ ಎದುರಲ್ಲಿ ಅಮ್ಮಿಯ ಜ್ವರ ಓಡಿಹೋಯಿತು.

ಅಮ್ಮಿಗೆ ಗರ್ಭಸ್ರಾವವಾದರೂ ಆಗಬಹುದು, ಎಂದರು ವೈದ್ಯರು. ರಾಯರಿಗೆ ಆ ಮಾತು ಕೇಳಿ ಸಂಕಟಕ್ಕಿಂತಲೂ ಹೆಚ್ಚು ಸಮಾಧಾನವೇ ಆಯಿತು.

ಆದರೆ ಗರ್ಭಸ್ರಾವವಾಗಲಿಲ್ಲ.

ಕಾಹಿಲೆಯಿಂದ ಎದ್ದು ಬಂದ ಅಮ್ಮಿ ರಾಯರನ್ನು ಪುನಃ ಪಡೆದಿದ್ದಳು. ಆಕೆಗಾದ ಸಂತೋಷಕ್ಕೆ ಎಣೆ ಇರಲಿಲ್ಲ.

ಅವರು ತನಗೆ ಔಷಧಿ ಕುಡಿಸುತ್ತಿದ್ದಾಗಲೊಮ್ಮೆ ಅಮ್ಮಿ ಎಂದಳು.

"ನನ್ನಪ್ಪ ಮನ್ನಿಸಿ...ನೀವಲ್ದೆ ಹೋದ್ರೆ ನನಗೂ ಮಗೂಗೂ ಬೇರೆ ಯಾರು

ಗತಿ ? "

" ತಪ್ಪು ನನ್ನದು ಶಂಕರಿ. ಸಿಡುಕಿ ಏನೋ ಅಂದೆ."

ಆ ಮಾತು ಅಂತಃಕರಣದಿಂದಲೇ ಸ್ಫುಟಗೊಂಡು ಬಂದಿತ್ತು. ಅದರಲ್ಲಿ ಕಪಟವಿರಲಿಲ್ಲ.

ಆದರೆ ಬಾಹ್ಯ ಪ್ರಪಂಚ ಆ ರಾಯರನ್ನು ಹಿಂಸೆಗೆ ಗುರಿಮಾಡಿತು ; ಅವರ ಮನಸ್ಸಿನ ನೆಮ್ಮದಿಯನ್ನು ಕಸಿದುಕೊಂಡಿತು. ಅವರಿಗಾಗದವರು ಬನಶಂಕರಿಯ ಪ್ರಕರಣವನ್ನು ಉಪಯೋಗಿಸಿ, ದೇವಸ್ಥಾನದ ಪಾರುಪತ್ಯಗಾರನ ಪದವಿಯಿಂದ ರಾಯರನ್ನು ಕೆಳಕ್ಕಿಳಿಸಲು ಪ್ರಯತ್ನಿಸಿದರು.

...ಈ ಗೊಂದಲದಲ್ಲಿ ಕೆಲವೇ ತಿಂಗಳ ಅವಧಿಯೊಳಗೆ ನಾರಾಯಣರಾಯರ ಕೂದಲಿನ ಹೆಚ್ಚಿನಂಶ ಬಿಳುಪಾಯಿತು. ಮುಖದ ಮೇಲೆ ಆಳವಾದ ಗೆರೆಗಳು ಮೂಡಿದುವು. ಹಣೆ ಯೋಚನೆಯ ಒತ್ತಡಕ್ಕೆ ಸಿಲುಕಿ ಕ್ಷಣಕ್ಷಣವೂ ನೆರಿಗೆ ಕಟ್ಟಿತು.

ಅಮ್ಮಿಗೆ ಇಷ್ಟು ಬೇಗನೆ ಇನ್ನೊಂದು ಮಗು. ಎಷ್ಟು ಬೇಕಾದರೂ ಚಿಗುರಿಕೊಳ್ಳುವ ಫಲವತ್ತಾದ ಬಳ್ಳಿಯಾಗಿದ್ದಳು ಆಕೆ.

ಅಮ್ಮಿ ಹೆಣ್ಣು ಹೆತ್ತಳು. ಈ ಸಲ ಹೆರಿಗೆ ಸುಲಭವಾಗಿರಲಿಲ್ಲ. ಬಾಣಂತಿತನ ಕಳೆಯುವುದು ತಡವಾಯಿತು.

ರಾಯರು ಮಗುವನ್ನು ನೋಡಿ ನಗಲಿಲ್ಲ ಈ ಸಾರೆ. ಅಮ್ಮಿಯೂ ನಗಲಿಲ್ಲ. ಸದಾ ಕಾಲವೂ ಅಳುತ್ತಲೇ ಇದ್ದ ಆ ಹೆಣ್ಣು ಮಗು...ತನ್ನ ಪ್ರತಿರೂಪವಾಗಿದ್ದ ಎಳೆಯ ಜೀವ...

ಒಂದು ಸಂಜೆ ಸುಂದರಮ್ಮ ತನ್ನ ಮಕ್ಕಳೊಡನೆ ಬಂದಳು.

ಆಗ, ನೋವಿನ ನಗೆಯೊಡನೆ ಅಮ್ಮಿ ಎಂದಳು :

" ಬಾ ಅಕ್ಕಾ. ಒಬ್ಬಿಗೇ ಬೇಸರವಾಗಿತ್ತು."

" ಯಾಕೆ ಬನೂ ಹೀಗಿದೀಯಾ ? "

" ಒಂದು ಸಂಶಯ ನನ್ನ ಬಾಧಿಸ್ತಾ ಇದೆ, ಅಕ್ಕಾ."

ಸುಂದರಮ್ಮನ ಎದೆ ಡವಡವನೆ ಹೊಡೆದುಕೊಂಡಿತು : ಬನಶಂಕರಿಗೆ ತಿಳಿದಿತ್ತೆ ಹಾಗಾದರೆ ?—ತಿಳಿದಿತ್ತೆ ?

" ಏನು ಸಂಶಯ ಬನೂ ? "

" ನನಗೀಗ ಹೆಣ್ಣು ಹುಟ್ಟಿದೆ. ಆಕೇನ ನೀನು ನಿನ್ಮಗನಿಗೆ ತಂದ್ಕೋತಿಯೋ ಇಲ್ಲವೋ ಅಂತ ! "

" ಓ ! ಅಷ್ಟೇನೇ...ಈ ಮುದ್ದುರಾಣಿಗೆ ಅತ್ತೆಯಾಗೋದಕ್ಕೂ ಭಾಗ್ಯ ಬೇಕು ಬನೂ."

ಸುಂದರಮ್ಮ ಹಾಗೆ ಹೇಳಿದಳೇನೋ ನಿಜ. ಆದರೆ ಆಕೆಯ ಹೃದಯ ಕಳವಳದಿಂದ ಚೀರಾಡುತ್ತಿತ್ತು. ಬನಶಂಕರಿಯ ಮಕ್ಕಳ ಮದುವೆ ! ಆ ಸಂತಾನದ ಭಾವೀ ಸುಖ ! ಪಾಪ, ಬನಶಂಕರಿಗೆ ಗೊತ್ತೇ ಇರಲಿಲ್ಲ. ಮಠದ ಸ್ವಾಮಿಗಳು ಆಕೆಯ ಘಟಶ್ರಾದ್ಧ ಮಾಡಲು ನಡೆಸುತ್ತಿದ್ದ ಯೋಚನೆಯೊಂದೂ ಆಕೆಗೆ ತಿಳಿದೇ ಇರಲಿಲ್ಲ ! ಇನ್ನು ಅಮ್ಮಿ ಜಾತಿಯಿಂದ ಬಹಿಷ್ಕೃತೆಯಾಗುವಳು ; ಆ ಮಕ್ಕಳು ಕೂಡಾ. ಜಾತಿಗೆಟ್ಟ ಮೇಲೆ ಅವರ ಪಾಲಿಗೆ ಉಳಿಯುವುದೇನು—ಏನು ?

ಆ ವಿಷಯ ಬನಶಂಕರಿಯೊಡನೆ ಪ್ರಸ್ತಾಪಿಸಲೆಂದೇ ಸುಂದರಮ್ಮ ಬಂದಿದ್ದಳು. ಆದರೆ ಆ ಮಾತನ್ನು ಹೇಗೆ ಎಲ್ಲಿ ಆರಂಭಿಸಬೇಕು ?

ಬಹಳ ಹೊತ್ತು ಸುಂದರಮ್ಮ ಚಡಪಡಿಸಿದಳು. ತಾನು ಕೇಳಿದ್ದ, ಗಂಡನಿಂದ ಕೇಳಿ ತಿಳಿದಿದ್ದ, ಕೆಟ್ಟ ಸುದ್ದಿಯನ್ನು ಕುರಿತು ಬಾಯ್ತೆರೆಯುವುದಾಗಲೇ ಇಲ್ಲ.

ಬನಶಂಕರಿ ಕನಸಿನಲ್ಲಿ ಮಾತನಾಡುವವರ ಹಾಗೆ ಅಂದಳು :

"ಈ ಸಾರೆ ನನ್ಮಗೂಗೆ ನಾನೇ ಹೆಸರಿಡ್ತೀನಿ. ಏನ್ಗೊತ್ತೆ ? ಸುಶೀಲಾ ಅಂತ—ಒಳ್ಳೇ ಶೀಲದವಳು—ತಾಯಿಯ ಹಾಗಲ್ಲ ಆಕೆ !"

"ಯಾಕೆ ಹಾಗೆ ಆಡ್ತೀಯಾ ? ತಾಯಿಯೂ ಸುಶೀಲೆ, ಮಗಳೂ ಸುಶೀಲೆ. ಹೆಸರು ಚೆನ್ನಾಗಿಯೇ ಇದೆ. ಸುಶೀಲಾ ಅಂತ್ಲೇ ಇರ್‍ಲಿ."

"ಅಂತೂ ನೀನೊಬ್ಬಳಾದರೂ ನನ್ನನ್ನು ಸುಶೀಲೆ ಅಂತೀಯಲ್ಲ. ಅಷ್ಟು ಸಾಕು !"

ಮನಸ್ಸಿನಲ್ಲಿದ್ದುದೊಂದನ್ನೂ ಬಿಡಿಸಿ ಹೇಳದೆ, ಹೇಳಲಾರದೆ, ಸುಂದರಮ್ಮ ಹೊರಟು ನಿಂತಳು. ಹೊರಡುತ್ತ ಆಕೆ ಎಂದಳು :

"ಬನೂ, ನಿನಗೇನಾದ್ರೂ ತೊಂದರೆಯಾದ್ರೆ ನನ್ನನ್ನು ಕೇಳ್ದೆ ಏನೂ ಮಾಡ್ಬೇಡ್ವಮ್ಮ. ಏನಾದ್ರೂ ಬೇಕಾದಾಗ ನಮ್ಮನೆಗೆ ಖಂಡಿತ ಬಾರಮ್ಮ."

"ನನಗೆಂಥಾ ತೊಂದರೆಯಕ್ಕಾ ? ಇಷ್ಟು ಹಾಯಾಗಿದೀನಿ ಇಲ್ಲಿ..."

"ಒಂದು ದಿನ ಇದ್ದ ಹಾಗೆ ಇನ್ನೊಂದಿರುತ್ಯೆ ? ಅದಕ್ಕೆ ಹೇಳ್ದೆ."

ಆ ಮಾತು ಅರ್ಥವಾಗದೆ ಅಮ್ಮಿ ಹುಬ್ಬು ಮೇಲೇರಿಸಿದಳು, ಪ್ರಶ್ನಾರ್ಥಸೂಚಕವಾಗಿ. ಆದರೆ ಸುಂದರಮ್ಮ ವಿವರಿಸಲಿಲ್ಲ. ಮುಖಮುರಿಸಿಕೊಂಡು ಹೊರಟುಹೋದಳು.

ಸುಂದರಮ್ಮನ ಮಾತಿನ ಅರ್ಥ ಅಮ್ಮಿಗೆ ಆಗಲು ಬಹಳ ದಿನ ಹಿಡಿಯಲಿಲ್ಲ. ಮನೆಗೆ ಬಂದಾಗಲೆಲ್ಲ ಮುಖ ಬಾಡಿಸಿಯೇ ಇರುತ್ತಿದ್ದ ನಾರಾಯಣರಾಯರು ಆ ದಿನ ಮತ್ತಷ್ಟು ಸೊರಗಿದಂತೆ ತೋರಿದರು. ಅವರು ಸರಿಯಾಗಿ ಮಾತು ಕೂಡಾ ಆಡಲಿಲ್ಲ. ಏನಾದರೂ ಕೇಳಿದರೆ ಹ್ಞಾ ಹ್ಞೂ ಎಂದಷ್ಟೆ ಚುಟುಕು ಉತ್ತರ ಬರುತ್ತಿತ್ತು.

ಈ ಸ್ಥಿತಿಯನ್ನು ಕೊನೆಗಾಣಿಸಲೇಬೇಕೆಂದು ತೀರ್ಮಾನಿಸಿದ್ದ ಅಮ್ಮಿ ನೇರವಾಗಿ ಒಂದು ಪ್ರಶ್ನೆ ಹಾಕಿದಳು :

"ನನ್ನ ವಿಷಯವಾಗಿ ಏನೋ ಯೋಚಿಸ್ತಿದೀರಿ ಅಲ್ವೆ ?"

ನಿದ್ದೆಯಿಂದ ಎದ್ದವರಂತೆ ರಾಯರೆಂದರು :

"ಏನಂದೆ ?"

"ನೀವು ಚಿಂತಿಸ್ತಿರೋದು ನನ್ನ ವಿಷಯ ಅಲ್ವೆ—ಎಂದೆ."

"ಹೂಂ-"

ರಾಯರಿಗರಿಯದಂತೆಯೇ ಆ ಸ್ವರ ಹೊರಬಿತ್ತು.

"ಮತ್ತೆ ಹೇಳ್ಬಾರ್‍ದೆ ಏನೂಂತ ? ನನಗೆ ದುಃಖವಾಗುತ್ತೇಂತ ಸುಮ್ನಿದೀರೇನು ? ಅಂಥಾದೇನೂ ಇಲ್ಲ. ಹೇಳಿ. ನೀವು ಸಹಿಸ್ಕೊಂಡಿರೋದನ್ನ ನಾನೂ ಸಹಿಸ್ಕೋತೀನಿ."

ಹೇಳಿಯೇ ಬಿಡೋಣವೆನಿಸಿತು ರಾಯರಿಗೆ :

"ಹ್ಯಾಗೆ ಹೇಳ್ಲಿ ಶಂಕರಿ ?"

" ನೀವು ಧೈರ್ಯವಂತರೂಂತಿದ್ದೆ. ಇಂಥಾ ಎಳೆ ಮಗೂಂತ ನನಗೆ ಗೊತ್ತಿರ್ಲಿಲ್ಲ."

ರಾಯರನ್ನು ಕೆಣಕಿದಂತಾಯಿತು.

" ಎಳೇ ಮಗೂಗಿಂತ ಕಡೆ ನಾನು."

" ಆಗಲಿ ಹೇಳ್ಬಿಡಿ."

" ನಿನಗೆ ಬಹಿಷ್ಕಾರ ಹಾಕ್ತಾರಂತೆ ಶಂಕರಿ."

ಅಷ್ಟು ಹೇಳಿದ ರಾಯರಿಗೆ, ನೇರವಾಗಿ ಅಮ್ಮಿಯ ಮುಖ ನೋಡುವ ಧೈರ್ಯ ವಿರಲಿಲ್ಲ.

ಸಿಡಿಲು ಬಡಿದ ಹಾಗಾಯಿತು ಅಮ್ಮಿಗೆ. ಕಲ್ಲು ಬೊಂಬೆಯ ಹಾಗೆ ಕ್ಷಣ ಹೊತ್ತು ಎವೆಮುಚ್ಚದೆ ಆಕೆ ಕುಳಿತಳು.

ಆದರೆ ತಣ್ಣಗಾದ ಹೃದಯ ಮತ್ತೆ ಬಿಸಿಯಾಯಿತು. ಹಲ್ಲುಗಳು ಸದ್ದಿಲ್ಲದೆ ಒಂದಕ್ಕೊಂದು ಅತು ಕುಳಿತುವು. ಕಣ್ಣುಗಳು ಬೆಳಗಿದುವು. ಎತ್ತಿಕೊಂಡಿದ್ದ ಮಗು ರಾಜನನ್ನು ಮತ್ತಷ್ಟು ಬಿಗಿಯಾಗಿ ಅಪ್ಪಿಕೊಂಡಳು. ರಾಯರ ಮಾತಿಗೆ ಪ್ರತಿಕ್ರಿಯೆಯಾಗಿ ಎರಡು ಪದಗಳು ಹೊರಟುವು :

" ಅಷ್ಟೆ ತಾನೆ ? "

ರಾಯರು ಆಶ್ಚರ್ಯದಿಂದ ಆಕೆಯನ್ನು ನೋಡಿದರು. ಆ ವಿಷಯ ಎಷ್ಟು ಗಂಭೀರ ವಾದುದೆಂಬುದನ್ನು ಒತ್ತಿ ಹೇಳಬೇಕೆನ್ನಿಸಿತು ಅವರಿಗೆ.

" ಸಾಮಾನ್ಯ ಬಹಿಷ್ಕಾರವಲ್ಲ. ಘಟಶ್ರಾದ್ಧ ಮಾಡ್ತಾರಂತೆ."

" ಘಟಶ್ರಾದ್ಧ ಅಂದರೆ ? "

" ಗೊತ್ತಿಲ್ವೇನು ? ನಿನ್ನ ಸಂಬಂಧಿಕರು ಯಾರನ್ನಾದರೂ ಕರೆತಂದು ಒಂದು ಮಡಕೇನ ಎತ್ತಿ ಕುಕ್ಕಿಸಿ ಹೋಳುಮಾಡಿ, ನೀನು ಸತ್ತೆ ಅನ್ನೋದು ! "

" ಓ ! "

ಆ ಓ ರಾಗ ದೀರ್ಘವಾಗಿತ್ತು. ಮೂದಲಿಕೆಯಿತ್ತು ಆ ಧ್ವನಿಯಲ್ಲಿ.

" ಇಷ್ಟೂ ಆ ಸ್ವಾಮಿಯ ಫಿತೂರಿ."

" ದೇವಸ್ಥಾನದ ಪಾರುಪತ್ಯಗಾರರ ಆಶ್ರಯದಲ್ಲಿ ಯಾವ ಹೆದರಿಕೆಯೂ ಇಲ್ಲಾಂತಿದ್ದೆ."

" ಈಗ ತಿಳೀತು ತಾನೆ—ಇದೇಂತ ? "

" ರೇಗ್ಬೇಡಿ. ಏನ್ಮಾಡ್ಬೇಕೂಂತಿದೀರಾ ? "

" ಮಾಡೋದೇನು ? "

" ನಿಮ್ನ ಸುಮ್ನೆ ಬಿಡ್ತಾರೇನು ? "

" ಸಂಧಿ ಸಾಧಿಸಿ ಭಿಕಾರಿಯಾಗಿ ಮಾಡ್ತಾರೆ."

ಈ ಮಾತಿಗೆ ಉತ್ತರವಾಗಿ ಅಮ್ಮಿಯಿಂದ ಯಾವ ಸ್ವರವೂ ಹೊರಡಲಿಲ್ಲ. ಆಕೆ ಅಳುಕಿದಳು. ಬಿರುಗಾಳಿ ಸಿಲುಕಿದ ತರಗೆಲೆಯ ಹಾಗೆ ಅವಳ ಮಿದುಳು -ಹೃದಯ ತೂರಾಡಿದುವು. ಮಗನನ್ನೆತ್ತಿಕೊಂಡು ಆಕೆ ಅತ್ತಿತ್ತ ನಡೆದಳು.

ತೊಟ್ಟಿಲಲ್ಲಿದ್ದ ಸುಶೀಲೆ ತನಗೆ ಎಚ್ಚರವಾಯಿತೆಂದಳು, ಅಳುತ್ತ.

ರಾಯರು ಹೊರಟರು.

" ಊಟಕ್ಕೆ ನಿಲ್ಲೋದಿಲ್ವೆ ? "

" ಏನೂ ಬೇಡ."

" ಹಾಲು ? "

" ಬೇಡ."

" ನಿಮ್ಮಿಷ್ಟ."

ಬಾಗಿಲು ದಾಟುತ್ತಲಿದ್ದ ರಾಯರನ್ನು ಅಮ್ಮಿ ಬಂದು ಒಂದು ಮಾತು ಕೇಳಿದಳು :

" ನೀವೇನ್ಮಾಡ್ತೀರಾ ? "

"ಅನುಭವ್ಸೋದು. ತಪ್ಪು ಮಾಡಿದ್ದೇ ಉಂಟಂತೆ—"

ಅನುಭವಿಸುವುದು—ತಪ್ಪು—...

" ಯಾವತ್ತು ಈ—ಈ—ಘಟಶ್ರಾದ್ಧ ? "

" ಇನ್ನೊಂದು ತಿಂಗಳೊಳಗೇ—"

...ಮರುದಿನ ಬೆಳಿಗ್ಗೆ ಎದ್ದವಳೇ ಅಮ್ಮಿ, ಸುಂದರಮ್ಮನ ಮನೆಗೆ ಹೋದಳು. ಸ್ನಾನಕ್ಕೆ ಹೊರಟಿದ್ದ ರಾಮಶಾಸ್ತ್ರಿ ಅಮ್ಮಿಯನ್ನು ಕಂಡು ತಡೆದು ನಿಂತ.

ದಂಪತಿಗೆ ಪರಿಸ್ಥಿತಿಯನ್ನು ಊಹಿಸಿಕೊಳ್ಳುವುದೇನೂ ಕಷ್ಟವಾಗಿರಲಿಲ್ಲ.

" ಮಕ್ಕಳ್ನ ಬಿಟ್ಬಿಟ್ಟು ಬಂದಿಯೇನೆ ಬನೂ ? " ಎಂದು ಸುಂದರಮ್ಮ ಮೃದುಧ್ವನಿಯಲ್ಲಿ ಕೇಳಿದಳು.

" ಚಿಕ್ಕಿ ನೋಡ್ಕೋತಿದಾಳಕ್ಕ."

" ಬಾ, ಒಳಕ್ಕೆ ಬಾ—"

ಒಳಬರುತ್ತ ಬನಶಂಕರಿ ಹೇಳಿದಳು :

" ಅಕ್ಕಾ ಆ ದಿನ ಹೇಳಿದ್ದೆ. ಏನಾದ್ರೂ ತೊಂದರೆಯಾದ್ರೆ ನಿನ್ನನ್ನು ಕೇಳ್ದೆ ಏನೂ ಮಾಡ್ಕೊಡದೂಂತ."

" ಏನಮ್ಮ ಸಮಾಚಾರ ? "

" ಅದೇ ಬಹಿಷ್ಕಾರದ್ದು. ಅದೇನೋ ಘಟಶ್ರಾದ್ಧವಂತಲ್ಲ."

" ಅವರೇ ಅಂದರೇನು ಈ ವಿಷಯ ? "

" ಅವರೇ ಎಂದರೆ ? ಅವರೇ—ನಾರಾಯಣರಾಯರು."

ಬನಶಂಕರಿ ಮೊದಲ ಬಾರಿಗೆ ರಾಯರ ಹೆಸರು ಹಿಡಿದು ಮಾತನಾಡಿದ್ದಳು ! ಅಂತೂ ಶಾಸ್ತ್ರಿ ದಂಪತಿ ನಿರೀಕ್ಷಿಸಿದ್ದ ಕೆಟ್ಟ ದಿನ ಬಂದೇ ಬಿಟ್ಟಿತ್ತು.

" ಇನ್ನೇನೂ ಇಲ್ಲ. ಅದು ನಿಜವೆ ಕೇಳ್ಕೊಂಡು ಹೋಗೋಣಾಂತ ಬಂದೆ."

" ನೀನು ಸುಮ್ಸುಮ್ನೆ ಗಾಬರಿಯಾಗ್ಬೇಡ," ಎಂದ ರಾಮಶಾಸ್ತ್ರಿ.

ಆದರೆ ಅದು ಒಣ ಆಶ್ವಾಸನೆ. ಒಣಗಿದ್ದ ಆ ಸ್ವರವೇ ಹೇಳುತ್ತಿತ್ತು ಹಾಗೆಂದು.

" ಗಾಬರಿ ಯಾತಕ್ಕಣ್ಣ ? " ಎಂದಳು ಬನಶಂಕರಿ. ಬಳಿಕ ಸುಂದರಮ್ಮನತ್ತ ತಿರುಗಿ, " ನಿಮಗೆ ಅವತ್ತೇ ತಿಳ್ದಿತ್ತು, ಅಲ್ವೆ ಅಕ್ಕಾ ? ನನ್ನ ಎಳೇ ಮನಸ್ನ ಹ್ಯಾಗೆ ನೋಯ್ಸೋದೂಂತ ಹೇಳ್ದೇನೆ ವಾಪ್ಸು ಬಂದೆ, ಅಲ್ಲ ? " ಎಂದಳು.

ಸುಂದರಮ್ಮನ ಕಣ್ಣುಗಳು ಮಸುಕಾದುವು. ರಾಮಶಾಸ್ತ್ರಿಯೇ ಮಾತನಾಡಿದ :

"ಘಟಶ್ರಾದ್ಧ ಮಾಡೋಕೆ ಆಗೋಲ್ಲ ಬನಶಂಕರಿ. ಅದಕ್ಕೆ ನಿನ್ನ ಸಂಬಂಧಿಕರು ಬೇಕು. ಅಂಥವರ್ನ ಎಲ್ಲಿಂದ ತರ್ತಾರೆ ? ಉಳಿದದ್ದು ಬಹಿಷ್ಕಾರ. ಅದನ್ನ ಮಾಡಿದರೇನು, ಬಿಟ್ಟರೇನು ? ನೀನೇ ಯೋಚಿಸಿ ನೋಡು......ಆ ಸ್ವಾಮಿಯಿನೇ ಇಷ್ಟೆಲ್ಲಾ ಮಾಡ್ತಿರೋದು. ಚಂಡಾಲ ಬುದ್ಧಿ !"

"ಆದರೆ ಬಹಿಷ್ಕಾರ ಹಾಕ್ಬೇಕಾದ್ದು ಧರ್ಮ ಅಲ್ವೆ ಅಣ್ಣ ? ಸುಮ್ನೆ ಇದ್ರೆ ನಾಳೆ ದಿನ ಸಮಾಜ್ವೇ ಕೆಟ್ಹೋಗಲ್ವೇನು ?"

"ಅದ್ನೆಲ್ಲಾ ಮರೆತ್ಬಿಡು ಬನಶಂಕರಿ."

"ಅಷ್ಟೇ ಸರಿ, ಇನ್ನೇನು ! ನೀವಂದ್ಮೇಲೆ ಮರೆತ್ಬಿಡ್ತೀನಿ."

ರಾಮಶಾಸ್ತ್ರಿ ಸ್ನಾನಕ್ಕೆ ಹೋದ. ಸುಂದರಮ್ಮ ಬನಶಂಕರಿಯೊಡನೆ ಸ್ವಲ್ಪ ಹೊತ್ತಿನ ಹರಟೆಗೆ ನಿಂತಳು. ಬನಶಂಕರಿ ಗೆಳತಿಯ ಪುಟ್ಟ ಮಗುವನ್ನೆತ್ತಿಕೊಂಡಳು. ಒಲ್ಲದ ನಗುವನ್ನು ಮುಖದ ಮೇಲೆ ಬರಿಸುತ್ತ.

ಬನಶಂಕರಿ ಹೊರಟಾಗ ಸುಂದರಮ್ಮ ಕೇಳಿದಳು :

"ನಿಮ್ಮ ರಾಯರೇನೆಂದರು ?"

"ಅನುಭವ್ಸೋದೂಂತ."

"ನಿನ್ನ ಯೋಚ್ನೆ—"

"ಇದೆಯಲ್ಲಾ ಅಕ್ಕಾ, ಇನ್ನೂ ಒಂದ್ತಿಂಗ್ಳು. ಮುಂದೆ ನೋಡ್ಕೊಂಡರಾಯಿತು..."

...ಆ ಒಂದು ತಿಂಗಳಿನ ದಿನಗಳು ಬೇಗಬೇಗನೆ ಕರಗಿದುವು. ಯೋಚಿಸಿದಷ್ಟೂ, ಅಮ್ಮಿಯ ಮೆದುಳು ಧೀಂಗುಡುತ್ತ ಕೊಡುತ್ತಿದ್ದ ಉತ್ತರವೊಂದೇ :

'ಹಾಳಾದ ಈ ಊರು ಬಿಟ್ಹೋಗು ! ಬಾಳೆಮಣ್ಣೂರು ಬಿಟ್ಹೋಗು !'

ಆ ಊರಲ್ಲೆ ಉಳಿದರೆ ಅಮ್ಮಿಗೆ ಉಳಿಗಾಲವಿರಲಿಲ್ಲ. ಆ ಜನ ತನ್ನ ರಾಜನನ್ನೂ ತನ್ನ ಸುಶೀಲೆಯನ್ನೂ ಹರಿದು ತಿನ್ನದೆ ಬಿಡುವುದುಂಟೆ ? ಸುಂದರಮ್ಮ—ರಾಮಶಾಸ್ತ್ರಿ ಮತ್ತೊಮ್ಮೆ ತನಗೆ ಆಶ್ರಯ ನೀಡುವ ಮಾತೇ ಇರಲಿಲ್ಲ. ಬಂದ ಹಾದಿಯಲ್ಲೆ ಹಿಂತಿರುಗುವ ಹಾಗಿರಲಿಲ್ಲ ಆಕೆ.

ಊರು ಬಿಟ್ಟು ಹೋಗುವುದರಿಂದ ನಾರಾಯಣರಾಯರಿಗೂ ಒಳಿತಾಗುವುದರಲ್ಲಿ ಸಂದೇಹವಿರಲಿಲ್ಲ. ಕಣ್ಣಿನ ಕಸ ಹೋದ ಮೇಲೆ ಜನ ರಾಯರನ್ನು ನೆಮ್ಮದಿಯಿಂದ ಇರಗೊಡುವುದು ಸಾಧ್ಯವಿತ್ತು.

ಊರು ಬಿಟ್ಟು ಹೋಗುವ ಯೋಚನೆ...

ಘಟಶ್ರಾದ್ಧಕ್ಕೋ ಬಹಿಷ್ಕಾರಕ್ಕೋ ಇನ್ನು ಮೂರು ದಿನಗಳಿದ್ದಾಗ, ಅಮ್ಮಿ ಸುಂದರಮ್ಮನಲ್ಲಿಗೆ ಬಂದಳು.

"ಅಕ್ಕ, ಹಿಂದೆ ನೀನು ಹೇಳ್ತಾ ಇದ್ದೆಯಲ್ಲ-ಬೆಂಗಳೂರಿನ ಜನ ಇಲ್ಲಿಗಿಂತ ಒಳ್ಳೇ ವರೂಂತ ? ಅಲ್ಲಿಗೆ ಹೋಗ್ಬಿಡೋಣಾಂತಿದೀನಿ."

"ಬನೂ !"

"ನಿಜವಾಗ್ಲೂ ಅಕ್ಕ. ಇನ್ನು ಜಾಸ್ತಿ ದಿನ ಈ ಊರಲ್ಲಿ ಉಸಿರಾಡಕ್ಬಾರ್ದು ...ನಿಮ್ಮನ್ನ ಹ್ಯಾಗೆ ಬಿಟ್ಹೋಗ್ಲೀಂತ ಅನಿಸುತ್ತೆ. ಆದರೂ ಹೋಗೇ ತೀರ್ಬೇಕು. ಬೇರೆ ಹಾದಿಯೇ ಇಲ್ಲ."

" ಅವರು ಏನಂದರು ? "

" ಯಾವ ಅವರು ? ಅವರೇನು ಮಾಡ್ತಾರೆ ? ಅವರಿಗೇನು ಹೆಂಡತಿ - ಮಕ್ಕಳಿಲ್ವೆ ? "

" ಆದರೆ ನಿನಗೆ ಆಶ್ರಯ ಕೊಟ್ಟೋರು ಅವರಲ್ವೆ ? "

" ಆಶ್ರಯಾನೂ ಕೊಟ್ರು. ಎರಡು ಮಕ್ಕಳ್ನೂ ಕೊಟ್ರು. ಇನ್ನು ನಾನು ಅವರ್ನ ಪೀಡಿಸ್ಬಾರ್ದು...ಅವರ ತಪ್ಪಿಲ್ಲ ಅಕ್ಕಾ. ಅವರ್ನ ದೂರ್ತಿದೀನೀಂತ ಭಾವಿಸ್ಬೇಡ...ಮನುಷ್ಯ ಎಷ್ಟು ಒಳ್ಳೇದು ಮಾಡ್ಬೌದೋ ಅಷ್ಟನ್ನು ಅವರು ಮಾಡಿದಾರೆ."

...ಮಾತು ಈ ಘಟ್ಟಕ್ಕೆ ಬಂದ ಮೇಲೆ, ರಾಮಶಾಸ್ತ್ರಿಯೊಡನೆ ಮಾತನಾಡಿ ಮರುದಿನ ಸುಂದರಮ್ಮ ಬಂದು ಹೇಳಿದಳು :

" ಬನೂ...ಒಂದು ವಿಷಯ ಬನೂ... ನಮ್ಮವ್ರು ಏನಂತಾರೆ ಗೊತ್ತೆ ? ನೀನು ಬೆಂಗಳೂರ್ಗೆ ಹೋಗಕೂಡ್ದಂತೆ. ಹಾಸನದಲ್ಲಿ ಇರ್ಬೇಕಂತೆ. ಅಲ್ಲಿ ಅವರ ಗುರ್ತಿನೋರಿದಾರೆ. ಕಾಗದ ಬರ್ಕೊಡ್ತಾರೆ, ಏರ್ಪಾಟು ಮಾಡ್ತಾರೆ...ಅಲ್ಲೇನಾದರೂ ಮಾಡ್ಕೊಂಡು ನೀನು ಇರೋದು ಸಾಧ್ಯ—ಅಂತಾರೆ."

" ಹಾಸನ ಅಂದಿಯಾ ? "

" ಹೂಂ ಬನೂ, ಹಾಸನ..."

ಬನಶಂಕರಿ ಸ್ವಲ್ಪ ಹೊತ್ತು ಮೌನವಾಗಿದ್ದಳು.

" ಅಂತೂ ನಿಮ್ಮ ಋಣ ಸುಲಭವಾಗಿ ತೀರೋಹಾಗಿಲ್ಲ ಅಕ್ಕಾ."

" ಹಾಗೆಲ್ಲ ಭಾವಿಸ್ಬೇಡ, ಬನೂ."

ಅಮ್ಮಿ ಒಪ್ಪಿದಳು. ಹಾಗೆ ಒಪ್ಪಿದ ಅಮ್ಮಿ ರಾಯರಿಗೆ ಒಂದು ಮಾತನ್ನೂ ಹೇಳಲಿಲ್ಲ.

" ಊರಿಗೆ ಹೋಗ್ಬೇಕೂಂತ ಆಸೆ ಆಗುತ್ತೆ—ಚಿಕ್ಕಮಗಳೂರು ಹಾದಿಯಾಗಿ ಹೋಗ್ತೀನಿ. ಗಾಡಿ ಕಟ್ಟಿಸ್ಕೊಡ್ತೀರಾ ? "

" ಹೋಗು. ನನಗೇನು ? "

" ನಾಳೆ ತಾನೆ ನನ್ನ ಶ್ರಾದ್ಧ ? ನಾಳೇನೇ ಹೊರಡ್ತೀನಿ."

ಅಮ್ಮಿ ಎಲ್ಲಿಗೆ ಹೊರಟರೂ ಬೇಡವೆನ್ನುವ ಸ್ಥಿತಿಯಲ್ಲಿರಲಿಲ್ಲ ರಾಯರು.

" ಯಾವಾಗ್ಬರ್ತೀಯಾ ವಾಪಸು ? "

" ಈಗ್ಲೆ ಹ್ಯಾಗೆ ಹೇಳೋಕಾಗುತ್ತೆ ? ಅಲ್ಲಿರೋರು ದೂರದ ಬಳಗ. ಅವರು ಹೋಗು ಅಂದಾಗ ಹೊರಟುಬರ್ತೀನಿ."

" ಸರಿ " ಎಂದರು ರಾಯರು.

ಮರುದಿನ ಮಧ್ಯಾಹ್ನ ಗಾಡಿ ಬಂತು. ಅದು ದೇವಸ್ಥಾನದ್ದಾಗಿರಲಿಲ್ಲ.

ಗಂಟುಗಡಡಿಗಳನ್ನು ಅಮ್ಮಿ ಒಳಕ್ಕಿಟ್ಟಳು, ಮಕ್ಕಳನ್ನು ಕೂಡಿಸಿದಳು. ತಿಮ್ಮಪ್ಪ ಮತ್ತು ಚಿಕ್ಕಿಗೆ ಒಂದೊಂದು ಬೆಳ್ಳಿನಾಣ್ಯ ಕೊಟ್ಟಳು.

ಆ ಮುದುಕ ನಿಜಸಂಗತಿ ತಿಳಿಯದೆ, " ಹುಣ್ಣಿಮೆ ಹೊತ್ತಿಗೆ ವಾಪಸು ಬಂದ್ಬಿಡಿ ಅಮ್ಮಣ್ಣಿ " ಎಂದ.

ಅವನ ಮಗಳು " ಮಕ್ಕಳ್ನ ಜೋಪಾನವಾಗಿ ನೋಡ್ಕೊಳ್ರವ್ವಾ," ಎಂದಳು.

ಅಮ್ಮಿಯ ಗಂಟಲು ಬಿಗಿದುಬಂದಿತ್ತು. "ಹೂಂ" ಎನ್ನಲಾಗಲಿಲ್ಲ.

ರಾಮಶಾಸ್ತ್ರಿಯ ಮನೆಯ ಮುಂದೆ ಗಾಡಿ ಎರಡು ನಿಮಿಷ ನಿಂತಿತು. ಸ್ನೇಹಿತನ ಮನೆಯ ವಿಳಾಸದೊಡನೆ ಬರೆದಿದ್ದ ಕಾಗದವನ್ನು ರಾಮಶಾಸ್ತ್ರಿ ಕೊಟ್ಟ. ಸುಂದರಮ್ಮ ಆಕೆಯನ್ನು ಅಲ್ಲಿ ಇಳಿಯಗೊಡಲಿಲ್ಲ.

"ಆಗಲಿ, ಆಶೀರ್ವಾದ ಮಾಡೀಪ್ಪಾ ಮೂವರಿಗೂ" ಎಂದಳು ಅಮ್ಮಿ. ಕಂಠ ಗದ್ಗದಿತವಾಗಿತ್ತು.

"ಹೋಗಿ ಬಾ ಬನೂ...ನಾವು ಬಂದು ನೋಡ್ತೀವಿ ನಿನ್ನ."

ರಾಮಶಾಸ್ತ್ರಿ ಗಾಡಿಯವನಿಗೆ ಹೇಳಿದ:

"ಅಮ್ಮಾವ್ರು ಹಾಸನಕ್ಕೆ ಹೋಗ್ತಾರೆ ಕಣೋ, ಅಲ್ಲಿಗೇ ಹೊಡಿ."

"ಆದರೆ ಧಣೇರು—" ಎಂದು ಆತ ತಡವರಿಸಿದ.

"ನಾನೇ ಅಂತೀನಲ್ಲ. ಹಾಸನಕ್ಕೇಂತ—ಸುಮ್ನೆ ಹೊಡೀಪ್ಪಾ" ಎಂದಳು ಅಮ್ಮಿ.

ಗಾಡಿ ಹೊರಟಿತು.

ತನಗೆ ಮಕ್ಕಳನ್ನು ಕೊಟ್ಟಿದ್ದ ನಾರಾಯಣರಾಯರು ಕಾಣಸಿಗುವರೇನೋ ಎಂದು ಅಮ್ಮಿ ತಿರುಗಿ ನೋಡಿದಳು.

ಅಲ್ಲಿ ಯಾರೂ ಇರಲಿಲ್ಲ.

ಅದೇ ಹೊತ್ತಿಗೆ, ಧರ್ಮನಿಷ್ಠರೆದುರು ಸ್ವಾಮಿ ಬಾಳೆಮಣ್ಣೂರಲ್ಲಿ ಬಹಿಷ್ಕಾರದ ಘೋಷಣೆ ಮಾಡುತ್ತಿದ್ದರು. ಇನ್ನು ಮುಂದೆ ಬನಶಂಕರಿ ಬಹಿಷ್ಕೃತೆ, ಜಾತಿಬಾಹಿರಳು.

ಆದರೆ ಆಗಲೆ, ಆ ಘೋಷಣೆ ಕೇಳಿಸದಷ್ಟು ದೂರ, ಬನಶಂಕರಿ ತನ್ನ ಮಕ್ಕಳೊಡನೆ ಹೊರಟುಹೋಗಿದ್ದಳು.

## ೧೩

ನಾಲ್ಕು ವರ್ಷಗಳ ಕಾಲ ಲೋಕದೊಂದು ಭಾಗದಲ್ಲಿ ಘೋರವಾದೊಂದು ಯುದ್ಧ ನಡೆದು ಅದೇ ಆಗ ಶಾಂತಿ ನೆಲೆಸಿತ್ತು.

ಆದರೆ ಅಂದೊಂದೂ ಅಮ್ಮಿಗೆ ತಿಳಿದಿರಲಿಲ್ಲ. ಆಕೆಯ ಪ್ರಪಂಚ ಕಿರಿದಾಗಿತ್ತು. ಅಲ್ಲಿಯೋ—ಇದ್ದುದೊಂದೇ, ಅಶಾಂತಿ; ಬಿರುಗಾಳಿ ಬೀಸುತ್ತಿತ್ತು ಒಂದೇ ಸಮನೆ.

ಬೆಟ್ಟದಷ್ಟು ಎಲ್ಲ ರಕ್ಕೆ ಸಾಮಾನು ಹೇರಿಕೊಂಡು ಆ ಭಾರಕ್ಕೆ ಬದುಕುತ್ತಿದ್ದುವೇನೋ ಎಂಬಂತೆ ಕೆಲವು ಲಾರಿಗಳು, ಗಾಡಿ ಸಾಗುವ ಹಾದಿಗಳಲ್ಲಿ ಧೂಳೆಬ್ಬಿಸುತ್ತ ಓಡುತ್ತಿದ್ದುವು.

ಆ ಧೂಳಿನಿಂದ ಕೆಂಪಗಾದುದು, ಗಾಡಿಯ, ಎತ್ತುಗಳ, ಅಮ್ಮಿಯ, ಮಕ್ಕಳ ಮೈ ಮಾತ್ರವಲ್ಲ. ಭವಿಷ್ಯತ್ತಿನ ಬಗೆಗೆ ಶೂನ್ಯ ನೋಟ ಬೀರುತ್ತ ಸಾಗಿದ್ದ ಆ ತಾಯಿಜೀವನದ ಭಣಗುಡುತ್ತಿದ್ದ ಹೃದಯ ರಂಗದಲ್ಲೂ ಧೂಳು ಎದ್ದಿತ್ತು.

ಸಂಸ್ಥಾನದ ಉದ್ದಕ್ಕೂ ಲೋಹದ ಹೆದ್ದಾರಿಗಳನ್ನು ಆಗಲೆ ಇರಿಸಿದ್ದರು. "ಆಸ್ನಕ್ಕೂ ಬಂದೈತ್ರವ್ವ ರೈಲು" ಎನ್ನುತ್ತಿದ್ದ ಗಾಡಿಯಾತ.

ಆದರೆ ಅಮ್ಮಿಗಿದ್ದುದೊಂದೇ—ಲೋಹವಾಗಿ ಮಾರ್ಪಡುತ್ತಿದ್ದ ಹೃದಯ. ಅಲ್ಲಿ ಹೆದ್ದಾರಿ ಇರಲಿಲ್ಲ. ದಾರಿಯೇ ಇರಲಿಲ್ಲ ಅದರ ಮುಂದೆ.

ಅಂತೂ ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದ ಅಮ್ಮಿ ಎಳೆಯ ಮಕ್ಕಳೊಡನೆ ಹಾಸನ ಸೇರಿದಳು.

ಗಾಡಿಯುವನಿಗೂ ಅಷ್ಟರಲ್ಲೇ ಅರ್ಥವಾಗಿತ್ತು. ಬಹುಮಾನವಾಗಿ ಅಮ್ಮಿ ಕೊಟ್ಟ ಎರಡು ರೂಪಾಯಿಗಳನ್ನು ಆತ ಸ್ವೀಕರಿಸಲಿಲ್ಲ.

"ತಗೋಪ್ಪಾ...ನಿನ್ನಂಥಾ ಒಳ್ಳೇವರು ಇನ್ನೂ ಇರೋದ್ರಿಂದಾನೆ ಪ್ರಳಯವಾಗ್ದೆ ಲೋಕ ಉಳಿದಿದೆ. ತಗೋಪ್ಪಾ ಇದನ್ನ."

"ಬೇಡ ತಾಯಿೞ—ಖಂಡಿತ ಬೇಡ."

ಅಮ್ಮಿ ಗಂಟು ಬಿಚ್ಚಿದಳು. ಅಲ್ಲಿ ಹಲವು ಸೀರೆಗಳಿದ್ದುವು. ತಕ್ಕಮಟ್ಟಿಗೆ ಹೊಸ ತಾಗಿಯೇ ಇದ್ದುದೊಂದನ್ನು ಆರಿಸಿ ಆಕೆ "ತಗೋ, ನಿನ್ನ ಹೆಂಡ್ತಿಗಾಗುತ್ತೆ," ಎನ್ನುತ್ತ ಗಾಡಿಯುವನಿಗೆ ಕೊಟ್ಟಳು.

ಮನಸ್ಸಿಲ್ಲದ ಮನಸ್ಸಿನಿಂದ ಆತ ಅದನ್ನು ತೆಗೆದುಕೊಂಡ.

ರಾಮಶಾಸ್ತ್ರಿಯ ಸ್ನೇಹಿತನನ್ನು ಹುಡುಕುವುದು ಕಷ್ಟವಾಗಲಿಲ್ಲ. ಆದರೆ ಅವನು ಆಗ ಮನೆಯಲ್ಲಿರಲಿಲ್ಲ.

ಅಮ್ಮಿ ರಾಮಶಾಸ್ತ್ರಿಯ ಹೆಸರೆತ್ತಿದುದನ್ನು ಕಂಡು ಮನೆಯಾಕೆ, ಅಮ್ಮಿಯನ್ನೂ ಮಕ್ಕಳನ್ನೂ ಬರಮಾಡಿಕೊಂಡಳು.

"ನೀವು ನಮ್ಜನ ತಾನೆ ?" ಎಂದಳು.

ಹೌದೆನ್ನಲೂ ಇಲ್ಲ ಅಮ್ಮಿ, ಅಲ್ಲವೆನ್ನಲೂ ಇಲ್ಲ.

"ಎದೆ ಕೂಸನ್ನೂ ಕಟ್ಟಿಕೊಂಡು ಇಷ್ಟು ದೂರ—ಬಾಳೆಮಣ್ಣೂರ್ನಿಂದ ಇಲ್ಲಿಗೆ—ಗಾಡಿ ಪ್ರವಾಸ ಮಾಡಿದರಲ್ಲಾ, ಧೈರ್ಯವಂತೆಯಮ್ಮ ನೀವು!"

ಅಮ್ಮಿ ಮುಗುಳ್ನಕ್ಕಳು. 'ಧೈರ್ಯವಂತೆ' ಎನ್ನುವುದರಲ್ಲಿ ಸಂದೇಹವಿರಲಿಲ್ಲ. ಆ ಒಂದು ಪ್ರವಾಸವೆಂದೇನು ? ಬಾಳ್ವೆಯ ಪಯಣದ ಹಾದಿಯಲ್ಲಿ ಅಷ್ಟು ದೂರ ನಡೆದು ಬಂದಿರುವುದೇ ಸಾಲದೆ ಆಕೆಯ ಧೈರ್ಯಕ್ಕೆ ನಿದರ್ಶನ ?

ಖಾಲಿ ಗಾಡಿ ವಾಪಸು ಹೊರಟಿತು. ಅದು ಹೊರಟು ಹೋಗುತ್ತಿದೆ ಎಂದು ತಿಳಿಸು ವವನಂತೆ ಪುಟ್ಟ ಮಗು ರಾಜಣ್ಣ "ಹಿ ಹೈ ಹಿ" ಎಂದು ಸದ್ದು ಮಾಡಿದ, ಕೈಯಾಡಿಸುತ್ತ.

ಅಮ್ಮಿ ಮುದ್ದಾದ ತನ್ನ ಮಕ್ಕಳನ್ನೆ ನೋಡಿದಳು. ಗಾಡಿಯತ್ತ ದೃಷ್ಟಿ ಹರಿಸಲಿಲ್ಲ.

ರಾಮಶಾಸ್ತ್ರಿಯ ಸ್ನೇಹಿತ ಬಂದ. ವಯಸ್ಸಿನಲ್ಲಿ ಶಾಸ್ತ್ರಿಗಿಂತಲೂ ಅವನು ದೊಡ್ಡವನಾಗಿದ್ದ. ಶಾಸ್ತ್ರಿಯ ಕಾಗದ ಓದಿದಾಗ ಅವನ ಮುಖ ಗಂಭೀರವಾಯಿತು.

ಗಂಡನ ಆ ಮುಖಮುದ್ರೆಯನ್ನು ನೋಡಿ, ಏನೋ ಸ್ವಲ್ಪ ಅರ್ಥವಾದವಳಂತೆ ಮನೆಯಾಕೆ ಒಳಕ್ಕೆ ಹೊರಟುಹೋದಳು.

ಶಾಸ್ತ್ರಿಯ ಸ್ನೇಹಿತ ಮತ್ತೊಮ್ಮೆ ಕಾಗದದ ಮೇಲೆ ಕಣ್ಣೋಡಿಸಿ ಅಂದ :

"ಶಾಸ್ತ್ರಿ ನನ್ನ ಪ್ರಾಣ ಸ್ನೇಹಿತ—ಸೂಕ್ಷ್ಮವಾಗಿ ಬರೆದಿದಾನೆ. ಏನಾದರೂ ಸಹಾಯ ಮಾಡೊಂತ ಹೇಳಿದಾನೆ. ಹೇಳಮ್ಮ. ನನ್ನಿಂದೇನಾಗ್ಬೇಕು ಹೇಳು. ಏನು ನನ್ಕೈಲಾಗುತ್ತೋ

ಅದನ್ನ ಖಂಡಿತವಾಗಿ ಮಾಡ್ತೀನಿ."

ಗಂಭೀರವಾದರೂ ಮೃದುವಾದ, ತಡೆತಡೆದು ಬಂದರೂ ಏಕ ಪ್ರಕಾರವಾದ, ಸ್ವರದಲ್ಲಿ ಅಮ್ಮಿ ಯೆಂದಳು :

"ಗುರುತು ಪರಿಚಯ ಇಲ್ಲದ ಊರಿನಲ್ಲಿ ವಿಶ್ವಾಸದಿಂದ ನೀವಿಷ್ಟು ಮಾತಾಡ್ತೊದೇ ನನ್ಭಾಗ್ಯ. ಈ ಮಕ್ಕಳ್ಪುಣ್ಯ...ಬೇರೇನು ಹೇಳ್ಲಿ ?...ಸದ್ಯಃ ನಮ್ಮ ವಾಸಕ್ಕೆ ಒಂದಿಷ್ಟು ಜಾಗ ಕೊಡ್ಸಿ. ಆಮೇಲೆ ಯಾರಾದರೂ ಗೃಹಸ್ಥರ ಮನೇಲಿ ಕೆಲ್ಸ ಕೊಡ್ಸಿ..."

" ಎಂಥ ಕೆಲ್ಸ ಮಾಡ್ತೀಯಮ್ಮ ನೀನು ? "

"ಎಂಥಾದ್ದು ಬೇಕಾದರೂ ಮಾಡ್ತೀನಿ. ಮುಸುರೆ ತಿಕ್ಕೋದು, ಅಡುಗೆ ಮಾಡೋದು..."

ಬೇರೆ ಯಾವ ಕೆಲಸವನ್ನು ಅಮ್ಮಿ ಮಾಡುವುದು ಸಾಧ್ಯವಿತ್ತು ? ನೆಲ ನೋಡುತ್ತಲೆ ಇದ್ದವಳ ದೃಷ್ಟಿ ರಾಜ - ಸುಶೀಲೆಯರ ಮೇಲೆ ಹರಿದೊಡನೆ ಆಕೆಗೆ ಹೊಳೆಯಿತು.

"ಮಕ್ಕಳ್ನ ನೋಡ್ಕೊಳ್ಳೊ ಕೆಲಸಾನೂ ಮಾಡ್ತೀನಿ."

ಆ ಮಾತಿನ ಹಿಂದಿನ ನೋವು ಶಾಸ್ತ್ರಿಯ ಸ್ನೇಹಿತನಿಗೆ ಅರ್ಥವಾಗದೆ ಹೋಗಲಿಲ್ಲ.

"ಆಗಲಮ್ಮ , ನಾಳೇನೆ ಏನಾದರೂ ಮಾಡೋಣ."

ಆ ರಾತ್ರೆ ಗಂಡ ಹೆಂಡತಿ ತಮ್ಮ ಕೋಣೆಯಲ್ಲಿ ಬಹಳ ಹೊತ್ತು ಪಿಸುಮಾತನಾಡುತ್ತಿದ್ದುದನ್ನು ನಡುಮನೆಯಲ್ಲಿ ಮಲಗಿದ್ದ ಅಮ್ಮಿ ಗಮನಿಸದೆ ಇರಲಿಲ್ಲ. ನಿದ್ದೆ ಬಾರದೆ ಕತ್ತಲೆಯಲ್ಲಿ ಕಣ್ಣು ಪಿಳಿಪಿಳಿ ಬಿಡುತ್ತಲಿದ್ದ ಆಕೆಗೆ ರಾಮಶಾಸ್ತ್ರಿ—ಸುಂದರಮ್ಮನ ನೆನಪಾಯಿತು. ಈ ಮನೆಯಾಕೆಗೆ ಸುಂದರಮ್ಮನಂಥದೇ ಹೃದಯವಿರುವುದು ಸಾಧ್ಯವಾದರೆ ? ಸ್ನೇಹಪರ ಮಾನವ ಜೀವದ ಸಹವಾಸ ತನಗೆ ದೊರೆಯುವಂತಾದರೆ ?

ರಾಮಶಾಸ್ತ್ರಿಯ ಸ್ನೇಹಿತನಾದ ಕೇಶವಮೂರ್ತಿ ಒಳ್ಳೆಯವನಾಗಿದ್ದ. ಮನೆಯಾಕೆ ಸಾವಿತ್ರಿಯೂ ಅನುಕೂಲೆಯಾಗಿದ್ದಳು. ಆಕೆಗೆ ಮೊದಲು ಹುಟ್ಟಿದ ಎರಡು ಗಂಡುಮಕ್ಕಳೂ ಆರಾರು ತಿಂಗಳಿದ್ದು ಸತ್ತು ಹೋಗಿದ್ದುವು. ಮಕ್ಕಳಿಲ್ಲದ ಸಂಸಾರವನ್ನು ನಿರ್ವಹಿಸುವುದು ಕೇಶವಮೂರ್ತಿಗೆ ಕಷ್ಟವಾಗಿರಲಿಲ್ಲ. ಕೋರ್ಟಿನೆದುರು ಕುಳಿತು ಅರ್ಜಿ ಬರೆದು ಕೊಡುತ್ತಲೊ ದಸ್ತಾವೇಜುಗಳನ್ನು ಪ್ರತಿಮಾಡಿಕೊಡುತ್ತಲೊ ಆತ ಸಾಕಷ್ಟು ಸಂಪಾದಿಸುತ್ತಿದ್ದ.

ಸಾವಿತ್ರಿಗೆ, ಅಮ್ಮಿಯ ಮಕ್ಕಳನ್ನು ಕಂಡು ಮಮತೆ ಹುಟ್ಟಿತ್ತು. ಮಕ್ಕಳ-ತಾಯಿಯ ಕತೆ ಕೇಳಿ ಕನಿಕರವೂ ಉಂಟಾಗಿತ್ತು. ಆದರೆ ಅಮ್ಮಿ, ಹಾದಿ ತಪ್ಪಿದ ಹೆಂಗಸೆಂಬುದನ್ನು ಮರೆಯುವುದು ಅವಳಿಂದ ಸಾಧ್ಯವಿರಲಿಲ್ಲ. ಅಲ್ಲದೆ ಅಮ್ಮಿಗಿನ್ನೂ ಇಪ್ಪತ್ತೆಂಟು ವರ್ಷ ವಯಸ್ಸು. ತನ್ನ ಗಂಡನ ರಕ್ಷಣೆಯನ್ನೂ ಸಾವಿತ್ರಿ ಮಾಡಬೇಕಲ್ಲ ?

ತಾನು ಆ ಬಡಪಾಯಿಗೆ ನೆರವಾಗಲೇ ಬೇಕು ಎಂದು ದೃಢ ನಿರ್ಧಾರ ಮಾಡಿದ್ದ ಕೇಶವಮೂರ್ತಿ ಪರಿಪರಿಯಾಗಿ ಹೇಳಿ ಸಾವಿತ್ರಿಯನ್ನು ಒಪ್ಪಿಸಿದ. ಮನೆಯ ಹಿಂಭಾಗದಲ್ಲಿ ಹಿತ್ತಿಲಿನೊಳಗೇ ಇದ್ದ ದೊಡ್ಡ ಕೊಠಡಿಯನ್ನು ಅಮ್ಮಿಗೆ ಬಿಟ್ಟುಕೊಡಬೇಕೆಂದು ತೀರ್ಮಾನವಾಯಿತು.

ಮರುದಿನ ಸಾವಿತ್ರಿ ಅಮ್ಮಿಯನ್ನು ಕಂಡಾಗಲೆಲ್ಲ ಗಂಭೀರವಾಗಿರುತ್ತಿದ್ದಳು. ಆದರೆ ಮಕ್ಕಳನ್ನು ಕಂಡೊಡನೆ ಮುಗುಳುನಗುತ್ತಿದ್ದಳು.

ಕೇಶವಮೂರ್ತಿ ಒಂದು ಪ್ರಶ್ನೆ ಕೇಳಿದ:

"ನಿನ್ನ ಹತ್ತಿರ ಹಣ ಎಷ್ಟಿದೆಯಮ್ಮ? ಹಾಗೆ ಕೇಳ್ದೇಂತ ತಪ್ಪು ತಿಳ್ಕೋಬೇಡ."

"ಇನ್ನೂರು ರೂಪಾಯಿ ಚಿಲ್ರೆ ಇದೇಂತ ತೋರುತ್ತೆ...ನಿಮ್ಕೈಗೆ ಕೊಟ್ಟಿರ್ತೀನಿ."

"ಛೆ! ಛೆ! ನೀನೆ ಇಟ್ಕೊ—ಆದರೆ ಜೋಪಾನವಾಗಿ ಇಟ್ಕೊ...ಬೇರೇನೂ ಇಲ್ವೇನು?"

"ಒಂದಿಷ್ಟು ಆಭರಣ. ಎರಡೆಳೆ ಸರ, ನಾಲ್ಕು ಪವನಿನ ಬಳೆ..."

"ಒಳ್ಳೇದಮ್ಮ. ಇಟ್ಕೊಕೋ."

ಅಮ್ಮಿಗೆ ತಾನು ಮಾರಿದ್ದ ಹೊಲದ ನೆನಪಾಗದಿರಲಿಲ್ಲ.

"ಇಷ್ಟಲ್ದೆ ಜೀವನಹಳ್ಳೀಲಿ ಒಂದೆಂಟ್ನೂರು ರೂಪಾಯಿ ಇದೆ."

"ಜೀವನಹಳ್ಳಿ—"

"ಹೌದು. ನಾನು ಹುಟ್ಟಿದ ಹಳ್ಳಿ."

"ಏನು, ಸಾಲ ಕೊಟ್ಟಿತ್ತೇನು?"

"ಇಲ್ಲವಪ್ಪ. ಹದಿಮೂರು ವರ್ಷ ಕಳೀತು ಆಗ್ಲೆ. ಹೊಲ ಮಾರಿದ್ದನ್ನ ಅಲ್ಲೇ, ನನ್ನ ಸ್ನೇಹಿತೆ ಕಾವೇರೀಂತ, ಆಕೆ ಕೈಲಿ—ಆಕೆ ತಂದೇ ಕೈಲಿ—ಬಿಟ್ಬಂದೆ."

"ಹದಿಮೂರು ವರ್ಷ ಕಳೀತೆ? ಆ ಹಣ ತರಿಸ್ಲೇ ಇಲ್ವೇನು?"

"ಆ ವಿಷಯ ಯೋಚಿಸ್ಬೇಕಾದ್ದೇ ಇಲ್ಲ. ಯಾವತ್ತು ಬೇಕಾದ್ರೂ ಸಿಗುತ್ತೆ."

ಈ ಸರಳತೆಯನ್ನೂ ಮುಗ್ಧತೆಯನ್ನೂ ಕಂಡು ಕೇಶವಮೂರ್ತಿಗೆ ಕೆಡುಕೆನಿಸಿತು.

"ಅದೇನೋ ಸರಿ. ಆದರೆ ಈ ಹಾಸನದಂಥ ಊರಲ್ಲಿ ಒಬ್ಬನಿಗೆ ಒಂದಾಣೆ ಕೊಟ್ಟರೂ ವಾಪಸು ಬರೋಲ್ಲ."

...ಅವರು ಆ ಕೊಠಡಿಗೆ ಬಾಡಿಗೆ ತೆಗೆದುಕೊಳ್ಳಲಿಲ್ಲ.

"ಎಳೆ ಮಗೂಗೆ ಒಂದು ವರ್ಷವಾದರೂ ಆಗಲಮ್ಮ. ಆಮೇಲೆ ಕೆಲಸಕ್ಕೆ ಹೋದೀಯಂತೆ."

...ಹೀಗೆ, ಮಿತವ್ಯಯದ ಸೂಕ್ಷ್ಮ ಜೀವನ ನಡೆಸಿ, ತನ್ನ ಆರೋಗ್ಯವನ್ನು ಜತನದಿಂದ ನೋಡಿಕೊಳ್ಳುತ್ತ, ಅಮ್ಮಿ ಆ ಮಕ್ಕಳನ್ನು ಸಾಕಿದಳು.

ಕೇಳಿದವರಿಗೆ ಕೇಶವಮೂರ್ತಿ ಹೇಳುತ್ತ ಬಂದ:

"ಸಾಗರ ಕಡೇವ್ರು. ಅವರ ತಂದೆ ಪರಿಚಿತರು. ಎರಡ್ನೇ ಮಗು ಹುಟ್ಟಿದ್ಮೇಲೆ ಆಕೆ ಗಂಡ ಸನ್ಯಾಸಿಯಾಗ್ತೀನೀಂತ ದೇಶಾಂತರ ಹೋದ, ಅನಾಥೆ. ಯಾರು ಯಾರ ಹಣೇಲಿ ಏನೇನು ಬರೆದಿದಾನೊ ಬ್ರಹ್ಮ!"

ಕುತೂಹಲ ಪಡುತ್ತ ಕೇಳಿದ ಹೆಂಗಸರಿಗೆ ಸಾವಿತ್ರಿಯೂ ಅದೇ ಉತ್ತರವಿತ್ತಳು.

ಅಮ್ಮಿ ನುಡಿಸಿದುದೂ ಅದೇ ಪಲ್ಲವಿ. ಆ ಸುಳ್ಳನ್ನು ಸಾವಿರ ಸಲ ಆಡಿ, ಅದು ಸತ್ಯವೇ ಏನೊ ಎನ್ನಿಸುವಂತಾಯಿತು.

ಯಾರಾದರೊಬ್ಬ ಹೆಂಗಸು ಕೇಳುತ್ತಿದ್ದಳು:

"ಗಂಡ ಊರು ಬಿಟ್ಹೋದರೂನೂ ಏನಾದರೂ ತೀರ್ಮಾನವಾಗೋವರೆಗೆ ಕುಂಕುಮ ಗಿಂಕುಮ ಇಟ್ಕೊಬಹುದು, ಅಲ್ವೇನ್ರಿ?"

"ಇದ್ದೆ ಏನು ? ಆದರೆ ಆಕೆಗೇನೊ ಕೊರಗು. ಗಂಡ ವಾಪಸು ಬರೋ ತನಕವೂ ಹೀಗೇ ಇರ್ತೀನಿ, ಅಲಂಕಾರವೇ ಬೇಡ, ಅನ್ತಾಳೆ."

ಗಂಡ ಹೆಂಡಿರು ತೀರಾ ಆಪ್ತರೊಡನೆಯೂ ನಿಜ ವಿಷಯ ಹೇಳಲಿಲ್ಲ. ಹಾಗೆ ಹೇಳಿದ್ದರೆ ಊರ ಜನ ಕೆಟ್ಟ ದೃಷ್ಟಿಯಿಂದ ತಮ್ಮನ್ನು ನೋಡುವರೆಂಬ ಭಯ. ದುರಾತ್ಮರು ಅಮ್ಮಿಯ ಮೇಲೆ ಕಣ್ಣಿಟ್ಟು ಆಕೆಯ ಜೀವನವನ್ನು ಅಸಹನೀಯಗೊಳಿಸುವರೆಂಬ ಭೀತಿ.

ರಾಮಶಾಸ್ತ್ರಿ ಕೇಶವಮೂರ್ತಿಗೆ ಬರೆದಿದ್ದ :

"ಬನಶಂಕರಿ ಒಳ್ಳೆಯವಳು. ಏನೇ ಆಗಲಿ, ಆಕೆಯನ್ನು ಬೀದಿಯ ಪಾಲು ಮಾಡಬಾರದು."

ಅಮ್ಮಿ ಬೀದಿಯ ಪಾಲಾಗಲಿಲ್ಲ. ಇನ್ನೂ ಸಾಕು ಸಾಕೆನ್ನುವಷ್ಟು ಸೌಂದರ್ಯವಿದ್ದರೂ ಯೌವನವಿದ್ದರೂ ಆ ರೀತಿಯ ಜೀವನ ಬಲು ಸುಲಭವಾಗಿದ್ದರೂ ಅಮ್ಮಿ ಜಾರಲಿಲ್ಲ. ನೋವು ನರಳಾಟದ ಮೂಸೆಯಲ್ಲಿ ಪುಟವಿಟ್ಟು ಬಂದಿದ್ದ ಆಕೆಯ ಹೃದಯ, ತನ್ನ ಮಕ್ಕಳನ್ನು ನೋಡುತ್ತ ನೋಡುತ್ತ, 'ಇನ್ನು ನನಗೆ ಬಯಕೆಗಳಿಲ್ಲ' ಎಂದಿತು. ನಿರ್ವಿಕಾರವಾದ ಮೌನದ ಮುಖ ಮುದ್ರೆ. ಎತ್ತರದ ನಿಲುವು, ಗಂಭೀರ ನಡಿಗೆ. ಜತೆಗೆ, ಕುಶಲ ಶಿಲ್ಪಿ ಕಡೆದಂತಿದ್ದ ಚಲಿಸುವ ಪುತ್ಥಳಿಗಳೆರಡು. ತೋರಿಕೆಗೆ, ಸಕಲಸುಖಸಂಪನ್ನೆಯಾದ ಮುತ್ತೈದೆಯೂ ಅಸೂಯೆಪಡುವ ಹಾಗಿತ್ತು ಆ ಚಿತ್ರ.

ಹಾಸನದ ದನಕರುಗಳ ಜಾತ್ರೆ ಬಲು ವಿಶೇಷ. ವರ್ಷವರ್ಷವೂ ಜನವರಿಯಲ್ಲಿ ನಡೆಯುತ್ತಿದ್ದ ಆ ಜಾತ್ರೆಗೆ ಸಹಸ್ರ ಸಹಸ್ರ ಜನ ಬೇರೆ ಊರುಗಳಿಂದ ಬಂದು ನೆರೆ ಯುತ್ತಿದ್ದರು—ಹಸು ಹೋರಿಗಳ—ಎಮ್ಮೆ ಕೋಣಗಳ ವ್ಯಾಪಾರಕ್ಕಾಗಿ. ವರ್ಷವೆಲ್ಲ ಹಳ್ಳಿಯ ರೈತರು ತಮ್ಮ ಮೂಕ ಸಹ ಬಾಂಧವರನ್ನು ಆರಿಸುವ ಕೊಳ್ಳುವ ಆ ಮಹಾ ದಿನಕ್ಕಾಗಿ ಸಿದ್ಧತೆ ಮಾಡುತ್ತಿದ್ದರು. ರಾಯನಹಳ್ಳಿ, ಜೀವನಹಳ್ಳಿ, ಬಾಳೆಮಣ್ಣೂರು ಎಲ್ಲವೂ ಅಷ್ಟೇ. ಅಲ್ಲಿಂದೆಲ್ಲ ಜನ ಬಂದರೂ ಬಂದರೇ...ಹೀಗಾಗಿ, ಆ ಸಂದರ್ಭದಲ್ಲಿ ಹಳೆಯ -ದೂರದ- ಪರಿಚಿತರ ಕಣ್ಣಿಗೆ ಬೀಳದ ಹಾಗೆ ಎಚ್ಚರವಿರುತ್ತಿದ್ದಳು.

ಅಮ್ಮಿ ಹಾಸನಕ್ಕೆ ಬಂದ ಅನಂತರದ ಮೊದಲ ಜಾತ್ರೆಗೆ ರಾಮಶಾಸ್ತ್ರಿ ಬಂದ. ಆತನಿಗೆ ತಾಯಿಮಕ್ಕಳ ಇರುವಿಕೆಯನ್ನು ನೋಡಿ ಸಮಾಧಾನವೆನಿಸಿತು, ಸಂತೋಷವಾಯಿತು. ಸ್ನೇಹಿತ ಕೇಶವಮೂರ್ತಿಯ ಬಗೆಗೆ ಆತನಿಗಿದ್ದ ಅಭಿಮಾನ ಇಮ್ಮಡಿಸಿತು.

ಅಮ್ಮಿ ತನ್ನ ಒಡಹುಟ್ಟಿದವನೇ ಬಂದನೆಂಬಷ್ಟು ಸಡಗರದಿಂದ ಓಡಿಯಾಡಿದಳು.

"ಒಬ್ಬರೇ ಬಂದಿರಾ ಅಣ್ಣ ? ಅಕ್ಕ—ಮಕ್ಕಳು ಚೆನ್ನಾಗಿದಾರಾ ? ಅವರನ್ನೂ ಕರಕೊಂಡು ಬರಬಾರ್ದಾಗಿತ್ತಾ ಅಣ್ಣ ?"

"ಈ ಸಾರೆ ಆಗ್ಲಿಲ್ಲ ಬನಶಂಕರಿ. ಎಷ್ಟೊಂದು ದೂರ ನೋಡು !"

"ಹೋಗಲಿ, ಅದಕ್ಕೂ ಭಾಗ್ಯ ಬೇಕು."

"ಇಲ್ಲಿ ಎಲ್ಲಾ ಅನುಕೂಲವಾಗಿದ್ಯೇನಮ್ಮ ?"

"ಯಾವ ತೊಂದರೆಯೂ ಇಲ್ಲಣ್ಣ. ನಿಮ್ಮ ಸ್ನೇಹಿತರು ದೇವತಾ ಮನುಷ್ಯ. ಅವರ ಹೆಂಡತಿಯೂ ಹಾಗೆಯೇ—ತುಂಬಾ ಒಳ್ಳೆಯವರು. ನನಗಿರೋದು ಒಂದೇ ಕೊರತೆ-ನನ್ನ ಅಕ್ಕ ಮತ್ತು ಅಣ್ಣ ಸಮೀಪದಲ್ಲಿಲ್ಲಾಂತ."

ಇಂಥ ಮಾತು ಕೇಳಿ, ಇಷ್ಟು ದಿನ ಊರಿನ ಧರ್ಮನಿಷ್ಠರ ಅಗ್ರಹಕ್ಕೆ ತಾನು ತುತ್ತಾದುದು ಸಾರ್ಥಕವಾಯಿತೆಂದು ರಾಮಶಾಸ್ತ್ರಿಗನ್ನಿಸಿತು.

ಅಮ್ಮಿಗೆ, ತಾನು ಹೊರಟ ಮೇಲೆ ಊರಲ್ಲಿ ಏನಾಯಿತೆಂದು ತಿಳಿಯುವ ಕುತೂಹಲ ವಿತ್ತು. ಆದರೆ ಹಾಗೆಂದು ಆಕೆ ಬಾಯಿಬಿಟ್ಟು ಏನನ್ನೂ ಕೇಳಲಿಲ್ಲ. ಅದನ್ನು ಊಹಿಸಿ ಕೊಂಡ ರಾಮಶಾಸ್ತ್ರಿಯೇ ಹೇಳಿದ :

"ಆ ಸ್ವಾಮಿಗಳು ಬಹಿಷ್ಕಾರ ಹಾಕಿ ಠುಸ್ ಪುಸ್ ಅಂತ ಹಾರಾಡಿದ್ದಾಯ್ತು. ಅಷ್ಟೆ. ನೀನು ಹೊರಟ್ಹೋದ್ಮೇಲೆ ರಾಯರ ಮೇಲಿದ್ದ ಸ್ವಾಮಿಗಳ ದ್ವೇಷವೂ ಕಡಿಮೆಯಾಯ್ತು. ಅವರ ಕೆಲಸ ಹೋಗ್ಲಿಲ್ಲ."

ಗಂಟಲು ಸರಿಪಡಿಸಿಕೊಳ್ಳುತ್ತ, ಬಲು ಕಷ್ಟಪಡುತ್ತ, ಅಮ್ಮಿ ನುಡಿದಳು :

"ಅವರು ಚೆನ್ನಾಗಿದಾರಾ ?"

"ಇಲ್ದೆ ಏನು ? ಚೆನ್ನಾಗಿಯೇ ಇದಾರೆ. ಗಾಡಿ ವಾಪಸಾದ್ಮೇಲೆ ನಮ್ಮನೆಗೆ ಬಂದ್ರು. ಶಂಕರಿ ಹಾಸನಕ್ಕೆ ಹೋದ್ಲಂತೆ, ನಿಮಗೆ ಗೊತ್ತಿತ್ತಂತೆ, ಬರೋದಿಲ್ವೆ ಇನ್ನು ಹಾಗಾದರೆ ?—ಎಂದರು. ಹಾಸನದಿಂದ ಬೇರೆಲ್ಲಿಗೋ ಹೋಗ್ತೀನಿ ಅಂದಿದ್ಲು ; ಹೋಗಲಿ ಬಿಡಿ, ಪಾಪ—ಎಂದೆ."

"ಏನಂದರು ?"

"ಸುಮ್ಮನಿದ್ದರು, ಅಷ್ಟೆ."

ನಾರಾಯಣರಾಯರ ಅಪಹೇಳನವನ್ನು ರಾಮಶಾಸ್ತ್ರಿಯ ಬಾಯಿಯಿಂದ ಕೇಳಲು ಅಮ್ಮಿ ಸಿದ್ಧಳಿರಲಿಲ್ಲ. ಅಂತಹ ಅವಹೇಳನವನ್ನು ಶಾಸ್ತ್ರಿಯೂ ಮಾಡಲಿಲ್ಲ. ತಾನು ಹೋದುದಕ್ಕೆ ನಾರಾಯಣರಾಯರು ವ್ಯಥೆಪಡಲಿಲ್ಲವೆಂದು ಬನಶಂಕರಿಗೆ ತುಸು ಅಸಂತೋಷ ವೆನಿಸಿದರೂ ಒಟ್ಟಿನಲ್ಲಿ ಸಮಾಧಾನವಾಯಿತು.

ಈ ವಿಚಾರ ಇನ್ನು ಸಾಕು, ಎನ್ನುವಂತೆ ಆಕೆ ನಿಟ್ಟುಸಿರುಬಿಟ್ಟಳು.

ಆದರೂ ಕೊನೆಯದಾಗಿ ಒಂದು ಮಾತೆಂದಳು :

"ಅವರು ಆರೋಗ್ಯವಾಗಿದಾರೆ ತಾನೆ ?"

"ಓಹೋ."

ಆ ಬಳಿಕ, ಬಲು ಗಹನವಾದುದೊಂದು ವಿಷಯವನ್ನು ತಿಳಿಸುವವರ ಹಾಗೆ ಸ್ವರ ತಗ್ಗಿಸಿ, ರಾಮಶಾಸ್ತ್ರಿ ಹೇಳಿದ :

"ಇಲ್ಲಿಂದ ವಾಪಸು ಹೋಗಿ ಪುಕಾರು ಹಬ್ಬಿಸ್ತೀನಿ—ಹಾಸನದಲ್ಲಿ ನಾಲ್ಕು ದಿನ ಇದ್ದು ಬನಶಂಕರಿ ಮೈಸೂರಿಗೆ ಹೋದಳೂಂತ. ಆಗದೆ ? ಇಲ್ಲಿ ನಿನ್ನನ್ನು ಹುಡುಕೋಕೆ ಬರೋವರ ಪೀಡೆ ತಪ್ಪುತ್ತೆ. ಈ ಊರಲ್ಲಿ ಕೆಟ್ಟ ನಾಲಿಗೆಗಳಿಗೆ ಅವಕಾಶಕೊಡದೆ ಸ್ವಲ್ಪ ನೆಮ್ಮದಿ ಯಾಗಿರ್ಬೌದು ನೀನು—ಅಲ್ಲವೆ ?"

"ಹೌದಣ್ಣ, ಹಾಗೇ ಮಾಡಿ...ಅಲ್ಲದೆ, ಮಕ್ಕಳು ಸ್ವಲ್ಪ ದೊಡ್ಡೋರಾಗೋವರೆಗೆ ಈ ಊರು ಬಿಟ್ಟು ಎಲ್ಲಿಗೂ ಹೋಗೋ ಹಾಗೂ ಇಲ್ಲ."

"ಮುಂದೆ ಏನ್ಮಾಡ್ಬೇಕೂಂತಿದೀಯಾ ?"

"ಮುಂದಿನ ಯೋಚ್ನೆ ! ಒಂದ್ಸಲವೂ ಆ ಯೋಚ್ನೆ ಮಾಡ್ದೇನೇ ಇಲ್ಲಿವರೆಗೆ ಬಂದಿದೀಸಲ್ಲ

ಅಣ್ಣ! ಆದರೆ ಇನ್ನು ಹಾಗಲ್ಲ. ಮಕ್ಕಳಿದಾರೆ. ಯೋಚಿಸ್ಲೇ ಬೇಕು. ನನ್ನ ಆಸೆ ಏನು ಗೊತ್ತೆ ಅಣ್ಣ? ರಾಜನ್ನ ಓದಿಸ್ಬೇಕು—ತುಂಬಾ ಓದಿಸ್ಬೇಕು. ಸುಶೀಲೆಗೂ ಓದಿಸ್ಬೇಕು...ನನಗೆ ಎಷ್ಟು ಕಷ್ಟವಾದರೂ ಸರಿ...ನನ್ನ ಮಕ್ಕಳು ಯಾವ ಕಾಲ್ದಲ್ಲೂ ಅಡವಿ ಪಾಲಾಗ್ಬಾರ್ದು. ಅದು ಸರಿಯಲ್ವೆ ಅಣ್ಣ?"

"ಹೌದು, ಸರಿ...ನೀನು ಕಷ್ಟಪಡೋಕೇ ಹುಟ್ಟಿದೀಯೋ ಏನೋ. ಈ ಮಕ್ಕಳ್ನ ಬೆಳೆಸಿ ದೊಡ್ಡೋರಾಗಿ ಮಾಡೋ ಕಷ್ಟವೇ ನಿನ್ನ ಪಾಲಿನ ಸುಖವೋ ಏನೋ!"

ರಾಮಶಾಸ್ತ್ರಿ ವಾಪಸು ಹೋದ ಮೇಲೆ, ಕೇಶವಮೂರ್ತಿಯ ಮೂಲಕ ಅಮ್ಮಿ ಗೊಂದು ಕಾಗದ ಬಂತು. ಸುಂದರಮ್ಮ ಗಂಡನ ಕೈಲಿ ಅದನ್ನು ಬರೆಸಿ ತಾನು ಸಹಿಹಾಕಿದ್ದಳು.

ಆ ಕಾಗದದಲ್ಲಿ ಒಂದೆಡೆ ಬರೆದಿದ್ದಳಾಕೆ:

"ನೀನು ತುಂಬಾ ಸೊರಗಿಹೋಗಿದ್ದೀಂತ ಅವರು ಹೇಳುತ್ತಾರೆ. ಯಾಕೆ ಸೊರಗಿ ಹೋಗಿದ್ದೀಯಾ! ಅಡುಗೆ, ಊಟ ಸರಿಯಾಗಿ ಮಾಡುತ್ತಿದ್ದೀಯೋ ಇಲ್ಲವೊ! ಅಥವಾ ಆ ಕಾಹಿಲೆಯೊ! ಸುಶೀಲೆ ಹೆರಿಗೆಯ ಹೊತ್ತಿಗೇ ನನಗೆ ಗೊತ್ತಾಗಿತ್ತು—ಈ ಪೀಡೆ ನಿನ್ನನ್ನು ಬಿಡೋದಿಲ್ಲಾಂತ. ಅದೇ ತಾನೆ? ನಮ್ಮ ತಾಯಿ ಮನೆಯ ಸಮೀಪದಲ್ಲಿ ಒಬ್ಬಳು ಬಹಳ ಕಷ್ಟಪಟ್ಟಳು. ಮುಟ್ಟು ದೋಷ ಅಂದರೆ ಯಾವಾಗಲೂ ಹಾಗೆಯೇ. ಏನಾದರೂ ಔಷಧಿ ಮಾಡಿಸು. ಸಂಕೋಚವಿಲ್ಲದೆ ಮ. ರಾ. ಕೇಶವಮೂರ್ತಿಯವರಿಗಾಗಲೀ ಸೌ. ಸಾವಿತ್ರಮ್ಮನಿಗಾಗಲೀ ಹೇಳು. ನಾನಿದ್ದರೆ ನಿನ್ನನ್ನು ಹೇಗೆ ನೋಡಿಕೊಳ್ಳುತ್ತಿದ್ದೆನೋ ಹಾಗೆಯೇ ಸಾವಿತ್ರಮ್ಮ ನಿನ್ನನ್ನು ನೋಡಿಕೊಳ್ಳುತ್ತಿದ್ದಾರೆಂದು ನಂಬಿದ್ದೇನೆ. ಈ ಮಣ್ಣೂರು ಯಾಕೋ ಬಲು ಬೇಸರ. ನಿನ್ನನ್ನು ನೋಡಬೇಕೂಂತ ಆಸೆಯಾಗ್ತದೆ. ಮುಂದಿನ ವರ್ಷವಲ್ಲ ದಿದ್ದರೆ ಆಚೆ ವರ್ಷ, ಯಾವುದಾದರೊಂದು ವರ್ಷ, ಜಾತ್ರೆಗೆ ಬರುತ್ತೇನೆ. ನನ್ನದೊಂದು ಮುದ್ದು ಹಸು ಕರುಗಳನ್ನು ಕರಕೊಂಡು ಓಡಿ ಹೋಗಿದೇಂತ ಹುಡುಕಿಕೊಂಡು ಬರುತ್ತೇನೆ."

ಕೆಳಗೆ 'ತಾಜಾ ಕಲಂ' ಎಂದು ಸುಂದರಮ್ಮನ ಪರವಾಗಿ ಇನ್ನೊಂದು ವಾಕ್ಯವಿತ್ತು:

"ನಿನಗೇನಾದರೂ ಅಡಚಣೆಯಾದರೆ ಖಂಡಿತ ಬರೆದು ತಿಳಿಸು; ಅಕ್ಕನಲ್ಲಿ ಮುಚ್ಚು ಮರೆ ಮಾಡುವುದು ಪಾಪ."

ಅಮ್ಮಿಯ ಪಾಲಿಗೆ ಆ ಕಾಗದ ಬಲು ದೊಡ್ಡ ಹಬ್ಬದೂಟವಾಗಿತ್ತು. ತಡೆತಡೆದು ನಿಂತು ಯೋಚಿಸುತ್ತ ಕಣ್ಣೊರೆಸಿಕೊಳ್ಳುತ್ತ ಅದನ್ನು ಆಕೆ ಓದಿದಳು. ಅಂತಹ ಸಖ್ಯ ಸುಖ ಸಾಧ್ಯವೆಂದೇ ಈ ಬದುಕು ಸ್ವಲ್ಪವಾದರೂ ಹಗುರವಾಗಿದೆ, ಎಂದುಕೊಂಡಳು.

ಕಾಗದದೊಡನೆ ಆಟವಾಡುತ್ತ ಕುಳಿತಿದ್ದ ತಾಯಿಯನ್ನೆ ಮಗು ರಾಜಣ್ಣ ನೋಡುತ್ತಿದ್ದ. ಅದನ್ನು ಗಮನಿಸಿ ಅಮ್ಮಿ ನಕ್ಕಳು.

"ಪೋಲಿ ಮುಂಡೇದೆ. ಯಾಕೊ ಹಾಗ್ನೋಡ್ತಿದೀಯಾ? ನಿಮ್ಮತ್ತೆ ಕಾಗದ ಬರೆದಿದಾಳೆ ಕಣೋ...ತಿಳೀತೇನೋ ನಿಂಗೆ?"

ಮಗು ನಕ್ಕಿತು. ಆ ಬಳಿಕ ಪೆಚ್ಚು ಪೆಚ್ಚಾಗಿ "ಮಾ...ಹಿ...ಹಿ..." ಎಂದಿತು:

"ಎತ್ಕೊಬೇಕೇನು?" ಎನ್ನುತ್ತ ಅಮ್ಮಿ ಮಗುವಿನ ಬಳಿ ಸಾರಿದಳು.

ಆಮೇಲೆ ನಾಲ್ಕು ತಿಂಗಳಲ್ಲೆ ಅಮ್ಮಿ ಊರಿನ ನ್ಯಾಯಾಧೀಶರ ಮನೆಯಲ್ಲಿ ಅಡುಗೆಯ ಕೆಲಸಕ್ಕೆ ಸೇರಿದಳು. ಊಟ ಮತ್ತು ತಿಂಗಳಿಗೆ ಹತ್ತು ರೂಪಾಯಿ ಸಂಬಳ.

ಬೆಳಿಗ್ಗೆ ದುಡಿತ; ಸಂಜೆ—ರಾತ್ರೆ ಒಂಭತ್ತು, ಹತ್ತು ಗಂಟೆಯುವರೆಗೂ ದುಡಿತ. ರಾಜಣ್ಣ ಸಾವಿತ್ರಮ್ಮನಿಗೆ ಅಂಟಿಕೊಂಡು ಮನೆಯಲ್ಲೇ ಉಳಿಯಲು ಕಲಿತ. ಸುಶೀಲೆಯನ್ನೆತ್ತಿಕೊಂಡು ಕೆಲಸಕ್ಕೆ ಹೋಗುತ್ತಿದ್ದ ಅಮ್ಮ ಮಧ್ಯಾಹ್ನದ ಬಿಡುವಿನಲ್ಲಿ ಮನೆಗೆ ಓಡಿಬಂದು ರಾಜಣ್ಣನನ್ನು ರಮಿಸುತ್ತಿದ್ದಳು.

"ಅತಿ ಮುದ್ದಿಸಬಾರ್ದು ಕಣೇ ಮಗೂನ," ಎನ್ನುತ್ತಿದ್ದಳು ಸಾವಿತ್ರಮ್ಮ—ಈ ಮಗು ತನ್ನದಲ್ಲವಲ್ಲಾ ಎಂಬ ಕ್ಷಮಾರ್ಹ ಅಸೂಯೆಯಿಂದ.

ಒಮ್ಮೊಮ್ಮೆ, "ನಾನಿಲ್ವೇನು ನೋಡ್ಕೊಳ್ಳೋಕೆ? ಕಾಗೆ ಕಚ್ಕೊಂಡ್ಹೋಗುತ್ತೇಂತ ಭಯವೇನೋ ಪಾಪ!" ಎಂದು ವ್ಯಂಗ್ಯವಾಗಿ ಗದರಿಸುತ್ತಿದ್ದಳು.

"ನನಗೆ ಯಾವ ಚಿಂತೆಯೂ ಇಲ್ಲ ಸಾವಿತ್ರಮ್ಮ...ರಾಜ ನಿಮ್ಮೆದುರಲ್ಲೇ ಬೆಳೆದು ದೊಡ್ಡೋನಾಗ್ಲಿ. ಆಮೇಲೆ ದೊಡ್ಡಮ್ಮನ್ನ ಜ್ಞಾಪಿಸ್ಕೊಂಡು ಒಳ್ಳೇ ಮಾತಾಡ್ಲಿ. ಹಾಗಾದರೆ ನನಗೆ ಸಂತೋಷವೇ—ಅಷ್ಟೇ ಸಾಕು ನನಗೆ; ಅಷ್ಟಾದರೆ ಸಾಕು."

## ೧೪

ಸುಶೀಲ ಅಳುತಳುತ ಬಂದು ಅಮ್ಮನಿಗೆ ದೂರು ಒಪ್ಪಿಸಿದಳು. ಆಗಲೆ ಐದು ದಾಟಿದ್ದ ಪುಟಾಣಿ ಹುಡುಗಿ. ಗುಂಗುರು ಕೂದಲು ಮಗುವಿನ ದುಂಡಗಿನ ಮುಖದ ಮೇಲಿಳಿದು ಆ ಸೊಬಗನ್ನು ಮತ್ತಷ್ಟು ಹೆಚ್ಚಿಸಿತ್ತು.

"ಅಮ್ಮಾ, ನೋಡಮ್ಮಾ, ಅಣ್ಣ ನನ್ಲಂಗಾನಾ ಹೆಂಗೆ ಕೊಳೆ ಮಾಡ್ದ ನೋಡಮ್ಮಾ..."

ರಾಜಣ್ಣ ಮಾವಿನ ಹಣ್ಣು ತಿಂದು ಮುಗಿಸಿ, ಬೇಕುಬೇಕೆಂದೇ ತಂಗಿಯ ಲಂಗಕ್ಕೆ ಕೈ ಒರೆಸಿದ್ದ. ಹೊಸತಾಗಿ ಹೊಲಿಸಿ ಹಾಕಿದ್ದ ಲಂಗ ಕೊಳೆಯಾಗಿತ್ತು.

"ಛಿ! ಛಿ!" ಎಂದಳು ತಾಯಿ. ಆಕೆಗೆ ನಿಜವಾಗಿಯೂ ರೇಗಿತ್ತು.

"ಇಲ್ಬಾರೋ ರಾಜಾ" ಎಂದು ಗಟ್ಟಿಯಾಗಿ ಕರೆದಳು.

ರಾಜಣ್ಣ ಬರಲೇ ಇಲ್ಲ. ತಂಗಿಗಷ್ಟೇ ಕಾಣಿಸುವಂತೆ ಹೊರಗೆ ನಿಂತುಕೊಂಡು ಆಕೆಯನ್ನು ಅಣಕಿಸಿದ.

"ನೋಡಮ್ಮಾ!" ಎಂದು ಮತ್ತೊಮ್ಮೆ ಸುಶೀಲ ರಾಗವೆಳೆದಳು.

ತಾಯಿ ಎದ್ದು ಹೋಗಿ ತಪ್ಪಿಸಿಕೊಳ್ಳಲೆತ್ನಿಸುತ್ತಿದ್ದ ತುಂಟನನ್ನು ಹಿಡಿದು ತಂದಳು. ಹೊಡೆಯಲು ಮನಸ್ಸು ಬರಲಿಲ್ಲ. ಬದಲು ನೀಳವಾಗಿ ಕೆಳಕ್ಕಿಳಿದಿದ್ದ ಆತನ ತಲೆಗೂದಲು ನೇವರಿಸಿ ಅವನನ್ನು ಬಿಗಿಯಾಗಿ ಅಪ್ಪಿಕೊಂಡಳು.

"ನನ್ರಾಜಾ...ಹುಂ...ಪೀಡಿಸ್ತೌದೇನೋ ತಂಗೀನಾ?"

ಆದರೆ ತಂಗಿಗೆ ಈ ದೃಶ್ಯ ಸಹನೆಯಾಗಲಿಲ್ಲ. ಅದನ್ನು ಗಮನಿಸಿದ ತಾಯಿ, ಕೈಚಾಚಿ ಸುಶೀಲಳನ್ನೆಳೆದುಕೊಂಡಳು. ಇಬ್ಬರನ್ನೂ ಬಾಚಿ ಎದೆಗವಚಿ ತಬ್ಬಿಕೊಂಡಳು—ಬಲವಾಗಿ. ತಾಯಿಯ ಆಲಿಂಗನದ ಆ ಬಿಗಿಹಿಡಿತದೊಳಗೇ ಎಳೆಯರಿಬ್ಬರಿಗೂ ಉಸಿರು ಕಟ್ಟಿದ ಹಾಗಾಯಿತು.

" ಅಮ್ಮೀ ನೋಯುತ್ತಲ್ಲೀ..."

" ನೋಯುತ್ತೆ ಅಮ್ಮೊ..."

ಆದರೆ ಅಮ್ಮಿಗೆ ಅದೊಂದೂ ಕೇಳಿಸುತ್ತಿರಲಿಲ್ಲ. ಅದೆಲ್ಲಿಯೋ ಸಂಚಾರ ಮಾಡುತ್ತಿತ್ತು ಆಕೆಯ ಮನಸ್ಸು. ಕಂಬನಿಯಷ್ಟೆ ಕಪೋಲಗಳ ಮೇಲಿಂದ ಕೆಳಕ್ಕಿಳಿಯುತ್ತಿತ್ತು.

ಅದನ್ನು ನೋಡಿದ ರಾಜಣ್ಣ ದುಗುಡದಿಂದ, "ಅಮ್ಮಿ, ಯಾಕಮ್ಮಿ ಅಳ್ತೀಯಾ?" ಎಂದ.

ಅಮ್ಮಿ ಆಲಿಂಗನವನ್ನು ಸಡಿಲಿಸಿದಳು. ಸುಶೀಲೆ ತಾಯಿಯ ಮುಖವನ್ನು ಮುದ್ದಿಸಿ " ಅಣ್ಣ, ನಮ್ಮಮ್ಮ ಅಳುತ್ತೆ" ಎಂದಳು.

" ಅಮ್ಮೊ, ಅಮ್ಮೊ ! " ಎಂದ ರಾಜಣ್ಣ, ತಾನೂ ಅಳತೊಡಗುತ್ತ,

ಅದನ್ನು ಕಂಡ ಅಮ್ಮಿ ಕಣ್ಣೊರೆಸಿಕೊಂಡು, ದುಗುಡ ತುಂಬಿದ ಧ್ವನಿಯಿಂದ ಅಂದಳು :

" ಜಗಳಾಡಬಾರದಪ್ಪ ನೀವು. ನನ್ನ ಹೊಟ್ಟೆ ಉರಿಸ್ಬಾರದಪ್ಪಾ... ದೇವರು ಏನಂದಾರು ನಿಮ್ಮನ್ನ ನೋಡಿದರೆ ? ನನ್ನಪ್ಪಾಯ್ತು ಅನ್ನಪ್ಪ ರಾಜಾ..."

" ನನ್ನಪ್ಪಾಯ್ತು."

" ಜಾಣ ಮರಿ, ಹಾಗೇ ಲಂಗದ ಕೊಳೆಗೆ ಒಂದಿಷ್ಟು ನೀರು ಹಾಕಿ ಒರೆಸ್ಬಿಡಪ್ಪ."

" ನಾನೇ ನೀರ್ಹಾಕ್ತೀನಿ," ಎಂದಳು ಸುಶೀಲ, ತಾಯಿಯನ್ನು ಸಂತೈಸುವ ಕಾರ್ಯದಲ್ಲಿ ಅಣ್ಣನೊಡನೆ ತಾನೂ ಭಾಗಿಯಾಗಬೇಕೆಂಬ ಆಸೆಯಿಂದ.

ಎಳೆಯರಿಬ್ಬರೂ ಕೈ ಕೈ ಹಿಡಿದು ಹೊರಹೋದುದನ್ನು ನೋಡುತ್ತ ಅಮ್ಮಿ, " ಹೀಗೇ ಎರಡು ಕಣ್ಣುಗಳನ್ನೂ ಸರಿಯಾಗಿ ಇಟ್ಟಿರು ದೇವರೇ," ಎಂದಳು.

ಅವರಿಬ್ಬರನ್ನೂ ಶಾಲೆಗೆ ಸೇರಿಸಬೇಕಾದ ವಯಸ್ಸು. ಆದರೆ ಅಮ್ಮಿಯ ಮನಸ್ಸು ಅಳುಕುತ್ತಿತ್ತು. ಅಲ್ಲಿ ಉಪಾಧ್ಯಾಯರು ಮಕ್ಕಳಿಗೆ ಹೊಡೆಯುವರೇನೋ ಎಂದು ಭಯವಾಗುತ್ತಿತ್ತು.

" ಹುಡುಗರ್ನ ಸ್ಕೂಲ್ಗೆ ಕಳಿಸ್ಬೇಕಮ್ಮ ಇನ್ನು," ಎನ್ನುತ್ತಿದ್ದ ಕೇಶವಮೂರ್ತಿ ಕೂಡಾ.

" ಕಳಿಸ್ತೀನಿ, ಕಳಿಸೋಣ," ಎಂತ ಅಮ್ಮಿ ದಿನ ತಳ್ಳುತ್ತಿದ್ದಳು.

ಆದರೆ ತನಗೆ ಬಿಡುವಿದ್ದಾಗಲೆಲ್ಲ ಆಕೆ, ಬಳಪದ ಕಲ್ಲು ಹಿಡಿಸಿ, ಆ ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸಿದಳು—ಇಪ್ಪತ್ತಮೂರು ವರ್ಷಗಳ ಹಿಂದೆ ತನ್ನಣ್ಣ ತನಗೆ ಕಲಿಸುತ್ತಿದ್ದ ಹಾಗೆ.

ಅಣ್ಣ ತಂಗಿ ಇಬ್ಬರಿಗೂ ತಕ್ಕಮಟ್ಟಿಗೆ ತೀಕ್ಷ್ಣ ಬುದ್ಧಿ ಇತ್ತು. ರಾಜಣ್ಣನದಂತೂ ಸಂದೇಹ ಪ್ರಕೃತಿ. ಏನು ಹೇಳಿದರೂ ಹಾಗೇಕೆ—ಹೀಗೇಕೆ ಪ್ರಶ್ನೆಗಳು ಆತನಲ್ಲಿ ಸಿದ್ಧ ವಾಗಿರುತ್ತಿದ್ದುವು.

ಒಂದು ದಿನ, ಅಮ್ಮಿ ಕೆಲಸದಿಂದ ಬಂದೊಡನೆ ರಾಜಣ್ಣ, " ಪಕ್ಕದ್ಮನೆ ಶ್ಯಾಮೂ ಇವತ್ತು ಏನಂದ ಗೊತ್ತೆ ಅಮ್ಮಿ ? " ಎಂದ.

ಧಸಕ್ಕೆಂದಿತು ಅಮ್ಮಿಯ ಎದೆ. ನಿರೀಕ್ಷಿಸುತ್ತಿದ್ದ ಗಂಡಾಂತರಗಳು ಬರತೊಡಗಿದು ವೇನೋ ಎಂದು ಆಕೆಗೆ ಭಯವಾಯಿತು.

ಎಲ್ಲ ಭಾವನೆಗಳನ್ನೂ ಮರೆಸಲು ಯತ್ನಿಸುತ್ತ ಅಮ್ಮಿ ಕೇಳಿದಳು :

" ಏನಂದ ? "

"ನಿಮ್ಮಪ್ಪ ಎಲ್ಲೀಂತ ಕೇಳ್ದ. ಯಾವ ಅಪ್ಪ ಅಂದೆ. ಅಯ್ಯೊ ಬೆಪ್ಪ, 'ಅಪ್ಪ' ಇಲ್ದೆ ಮಕ್ಕಳಾಗ್ತಾರೇನೋ, ಎಂದ. ಹ್ಯಾಗ್ಗೊತ್ತು, ನಿಂಗೆ, ಅಂದೆ. ನಮ್ಮಪ್ಪ ನಮ್ಮಮ್ಮನ್ಜತೆ ರಾತ್ರೆ ಆಟವಾಡೋದ್ನ ನೋಡಿದೀನಿ, ಅಂದ. ನಾನು, ದೊಡ್ಡೋರು ಆಟವಾಡಲ್ಲ ಥೂ—ಅಂದೆ. ನಿಮ್ಮಮ್ಮನ್ನೇ ಹೋಗಿ ಕೇಳು ಬೇಕಾದ್ರೆ ಅಂದ ಶ್ಯಾಮೂ. ಹೌದೇನಮ್ಮ ? ನಮಗೂ ಒಬ್ಬ 'ಅಪ್ಪ' ಇದಾನಾ ?"

ಅಮ್ಮ ಮೆಲ್ಲಮೆಲ್ಲನೆ ಉಸಿರು ಬಿಟ್ಟಳು. ಉತ್ತರಿಸದೆ ತಪ್ಪಿಸಿಕೊಳ್ಳುವುದು ಸಾಧ್ಯ ವಿರಲಿಲ್ಲ.

"ನಿಮ್ಮ 'ಅಪ್ಪಯ್ಯ' ಇದಾರೆ ರಾಜ."

"ಮತ್ಯಾಕಮ್ಮ ಮನೇಗ್ಬರೊಲ್ಲ ಅಪ್ಪಯ್ಯ ?"

ಕಣ್ಣೆವೆಗಳನ್ನು ಒತ್ತಿಕೊಂಡು ಅಮ್ಮ ಎಂದಳು :

"ನಿಮ್ಮಪ್ಪಯ್ಯ ದೂರ ತೀರ್ಥಯಾತ್ರೆಗೆ ಹೋಗಿದಾರೆ."

ಆ ಉತ್ತರದಿಂದ ರಾಜಣ್ಣನಿಗೆ ಸಮಾಧಾನವಾಯಿತು. ತಮಗೊಬ್ಬ ಅಪ್ಪನಿರುವ ಸಂತೋಷದ ಸುದ್ದಿಯನ್ನಾತ ತಂಗಿಗೂ ತಿಳಿಸಿದ. ಆದರೆ ಪಕ್ಕದ ಮನೆ ಶ್ಯಾಮೂಗೆ ಆ ಉತ್ತರದಿಂದ ತೃಪ್ತಿಯಾಗಲಿಲ್ಲ.

"ಹಾಗಾದ್ರೆ ಹೆಸ್ರೇನೊ ನಿಮ್ಮಪ್ಪನ್ದು ? ನಮ್ಮಪ್ಪನ್ನ ಚಂದ್ರಶೇಖರಯ್ಯ ಅಂತಾರೆ. ನಿಮ್ಮಪ್ಪನ್ನ ?"

ರಾಜ ಮತ್ತೆ ಅಮ್ಮಗೇ ಆ ಪ್ರಶ್ನೆ ಕೇಳಬೇಕಾಯಿತು.

"ನಾರಾಯಣರಾಯರೂಂತ ರಾಜ ನಿಮ್ಮಪ್ಪಯ್ಯನ ಹೆಸರು."

"ನಾರಾಯಣರಾಯರು—ಹೆಸರು ಚೆನ್ನಾಗಿದೆ ಅಲ್ವ ಅಮ್ಮ ?"

ನಗಬೇಕೋ ಅಳಬೇಕೋ ತಿಳಿಯಲಿಲ್ಲ ಅಮ್ಮಗೆ.

"ಹೌದು. ಹೆಸರು ಚೆನ್ನಾಗಿದೆ," ಎಂದಳು.

ಮಕ್ಕಳಿಗೆ ತಾಯಿ, ಲವಕುಶರ ಕತೆ ಹೇಳಿದಳೊಂದು ದಿನ. ಸೀತೆಯನ್ನು ಅಡವಿಗೆ ಅಟ್ಟಿದ್ದು. ಲವಕುಶರ ಜನನ. ಮಕ್ಕಳನ್ನು ನೋಡಲು ರಾಮ ಬರದೇ ಇದ್ದದ್ದು...

ನಡುವೆ ಬಾಯಿ ಹಾಕಿ, 'ಥೂ! ರಾಮ ಕೆಟ್ಟೋನು. ಅಲ್ವೆ ಅಮ್ಮ ?' ಎಂದ ರಾಜು. 'ಆತ ನಮ್ಮಪ್ಪಯ್ಯನ ಹಾಗೇ ಅಲ್ವಾ ?—ಹೆಂಡತಿ ಮಕ್ಕಳ್ನ ಬಿಟ್ಬಿಡೋದು—ಥೂ !'

"ಹಾಗನ್ಬಾರ್ದಪ್ಪಾ. ರಾಮ - ಸೀತೆ ದೇವರು. ನಾವು ಮನುಷ್ಯರು."

"ಹಾಗಾದ್ರೆ ದೇವರೂ ಅಷ್ಟು ಕೆಟ್ಟೋನೆ ?"

ಅಮ್ಮಗೆ ನಗು ಬಂತು.

"ಕುತರ್ಕ ವಾಚಸ್ಪತಿ ಕಣೋ ನೀನು. ನಿನಗಿನ್ನು ಕತೆ ಹೇಳೊಲ್ಲ," ಎಂದಳು.

"ಹೇಳಮ್ಮ, ಹೇಳಮ್ಮ. ಲವಕುಶರು ಹೋಗಿ ರಾಮನ್ನ ಕಂಡಿದ್ದನ್ನ ಹೇಳಮ್ಮ."

ಅಣ್ಣನಿಗೆ ಬೆಂಬಲವಾಗಿ ಪುಟ್ಟ ಸುಶೀಲೆಯೂ ರಾಗವೆಳೆದಳು :

"ಹೇಳೇ, ಹೇಳೇ..."

ಅಮ್ಮ ಮುಂದಿನ ಕತೆ ಹೇಳಿದಳು. ಸೀತಾದೇವಿಗೆ ಅನ್ಯಾಯವಾದುದನ್ನು ಆಕೆ

ಎಂದೂ ಸಹಿಸಿರಲಿಲ್ಲ. ಸೀತೆಯ ಬಗೆಗೆ ತನಗಿದ್ದ ಪಕ್ಷಪಾತದ ಧ್ವನಿಯನ್ನು ಸ್ಫುಟಗೊಳಿಸುತ್ತಲೆ ಆಕೆ ಆ ಕತೆ ಹೇಳಿದಳು.

...ಅಮ್ಮಿ ಮಕ್ಕಳನ್ನು ಬೆಳೆಸುವ ರೀತಿ ಸಾವಿತ್ರಿಗೆ ಹಿಡಿಸುತ್ತಿರಲಿಲ್ಲ.

"ಅವು ಏನೂ ತಿಳೀದ ಮುಕ್ಕಗಳಾಗಿ ಇರ್ಬೇಕೇನು ? ಶಾಲೆ ಇರೋದ್ಯಾತಕ್ಕತ್ತೆ ?"

"ಕಳಿಸೋಣ ಸಾವಿತ್ರಮ್ಮ."

"ಅಲ್ಲ, ಅಮ್ಮಿ ಅಮ್ಮಿಂತ ಅವು ನಿನ್ನನ್ನ ಕೂಗ್ತಾವಲ್ಲ. ಚೆನ್ನಾಗಿರುತ್ತೆ ಅಂತೀನಿ ಕೇಳೋವ್ರಿಗೆ!"

"ಅದರಲ್ಲೇನಮ್ಮ ತಪ್ಪು ? ನಾನು ಅಮ್ಮಿ, ನೀವು ದೊಡ್ಡಮ್ಮ."

"ಅಮ್ಮ ಅಂತ ಅನ್ಬಾರ್ದೇನೊ ನಿನ್ನ ?"

"ಅಮ್ಮಿ ಅನ್ನೋದು ನಾನು ಹುಟ್ಟಿದ್ಮನೆ ಹೆಸ್ರು. ಅಜ್ಜಿ-ಅಣ್ಣ ಇಟ್ಟದ್ದು. ಮಕ್ಕಳೂ ಹಾಗೇ ಕೂಗ್ತಾ ಇದ್ರೆ, ನನಗೆ ಬೇಕಾದೋರೆಲ್ಲ ಕೂಗಿದ ಹಾಗೆ ಇಂಪಾಗಿರುತ್ತೆ."

"ಸರಿ, ಸರಿ."

ಆದರೆ ಅಮ್ಮಿ ಇಲ್ಲದೆ ಇದ್ದಾಗ ಸಾವಿತ್ರಿ ಮಕ್ಕಳಿಬ್ಬರನ್ನೂ ಸಾಕು ಸಾಕೆನಿಸುವಷ್ಟು ಮುದ್ದಿಸುತ್ತಿದ್ದಳು. ಅಮ್ಮಿ ಬಂದೊಡನೆ ಮಕ್ಕಳು ಆಕೆಗೆ ಅಂಟಿಕೊಳ್ಳುವುದನ್ನು ಕಂಡಾಗ, ಎಷ್ಟಾದರೂ ಅವು ತನ್ನವಲ್ಲ ಎಂದು 'ಒಂದು ತರಹೆ'ಯಾಗುತ್ತಿತ್ತು. ಆಗ ಏನಾದರೂ ಕುಟುಕು ಮಾತನ್ನಾಡಬೇಕು ಎನ್ನಿಸುತ್ತಿತ್ತು ಆಕೆಗೆ.

ಮೊದಲು ಅಮ್ಮಿಗೆ ಆ ವರ್ತನೆ ಅರ್ಥವಾಗಿರಲಿಲ್ಲ, ಅದು ಸ್ಪಷ್ಟವಾದಾಗ ಆಕೆಯ ಹೃದಯ ಹಗುರವಾಗಿತ್ತು. ಆಮೇಲೆ ಸಾವಿತ್ರಿ ಹಾಗೆ ಮಾತನಾಡಿದಾಗಲೆಲ್ಲ ಅಮ್ಮಿ ನಗುನಗುತ್ತ ಹರ್ಷಚಿತ್ತಳಾಗಿಯೇ ಇರುತ್ತಿದ್ದಳು.

ಅಂತೂ ಕೊನೆಗೊಮ್ಮೆ ಮಕ್ಕಳನ್ನು ಶಾಲೆಗೆ ಕಳಿಸಲು ಅಮ್ಮಿ ತೀರ್ಮಾನಿಸಿದ್ದಾಯಿತು. ಅದಕ್ಕಾಗಿ ಅಮ್ಮಿ ನಡೆಸುತ್ತಿದ್ದ ಸಂಭ್ರಮವನ್ನು ಕಂಡು ಕೇಶವಮೂರ್ತಿ ನಕ್ಕ.

"ಅಲ್ಲ ಬನಶಂಕರಿ. ಹುಡುಗರ್ನ ಓದೋಕೇಂತ ಬೆಂಗಳೂರಿಗೆ ಕಳಿಸ್ತೀಯೇನು ? ಆಚೆ ಬೀದಿ ಕೊನೇಲಿರೋ ಸ್ಕೂಲಿಗೆ ಕಳಿಸೋದಕ್ಕೇ ಇಷ್ಟೊಂದು ಸಡಗರವೆ ? ಈಗ್ಲೇ ಇಷ್ಟಾದರೆ—"

ಅಂತಹ ನಗೆಮಾತು ಕೇಳಿ ಅಮ್ಮಿ ನಾಚಿಕೊಳ್ಳುತ್ತಿದ್ದರೂ ಆ ಮಾತಿನಿಂದ ಆಕೆಗೆ ಸಂತೋಷವಾಗುತ್ತಿತ್ತು.

ಶಾಲೆಯಲ್ಲಿ ಮುಖ್ಯೋಪಾಧ್ಯಾಯರು, 'ಹುಡುಗರ ತಂದೆ ನಾರಾಯಣರಾಯ' ಎಂದು ದಾಖಲೆಮಾಡಿದರು.

"ನಮ್ಮಮ್ಮನ ಹೆಸರೂ ಬರ್ಕೊಳ್ಳಿ," ಎಂದ ರಾಜಣ್ಣ, ಧೈರ್ಯವಾಗಿ.

"ಅಪ್ಪನ್ದೊಂದೇ ಸಾಕು ಕಣೋ," ಎಂದರು ಮುಖ್ಯೋಪಾಧ್ಯಾಯರು ನಗುತ್ತ.

...ಮನೆಯಲ್ಲಿ ರಾಜಣ್ಣ ಅಮ್ಮಿಗೆ ವರದಿಯೊಪ್ಪಿಸಿದ :

"ನೋಡಮ್ಮಿ, ನಿನ್ಹೆಸ್ರು ಬೇಡಾಂದ್ಬಿಟ್ರು. ಅಪ್ಪನ್ದೊಂದೇ ಸಾಕೂಂತಂದ್ರು. ಅದನ್ನೇ ಬರಕೊಂಡ್ರು."

ಅಮ್ಮಿಗೆ ನಗು ಬಂತು.

" ಹೆಣ್ಣು ಹೆಂಗಸು ಯಾರಿಗೆ ಬೇಕು ಹೇಳು ? " ಎಂದಳು.

ಹುಡುಗರನ್ನು ಶಾಲೆಗೆ ಕರೆದುಕೊಂಡು ಹೋಗಿದ್ದುದು ಕೇಶವಮೂರ್ತಿ. ಶಾಲೆಯಲ್ಲಿ ನಡೆದುದೆಲ್ಲವನ್ನೂ ರಾಜ ಹೇಳಿದ.

" ಮಾವ ಏನಂದ್ರು ಗೊತ್ತೆ ಅಮ್ಮ ? ಮಕ್ಕಳು ಒಳ್ಳೇವು, ಆದ್ರೆ ಪಾಪ ಬಡವು—ಅಂತ."

ಸುಶೀಲ ಹೇಳಿದ್ದು ಇನ್ನೊಂದು ಮಹತ್ವದ ವಿಷಯ.

" ಸ್ಕೂಲ್ನಲ್ಲಿ ಇದ್ರಲ್ಲಮ್ಮ...ಅವರ ಮೂಗಿನ್ಮೇಲಿ ದಪ್ಪದ ಗಾಜಿನ ಕನ್ನಡಕ. ತಲೆ ಮೇಲೆ ದೊಡ್ಡ ರುಮಾಲು... ! "

ಆ ಸಂಜೆ ಮನೆಯಲ್ಲಿ ರಾಜಣ್ಣ ಮತ್ತು ಸುಶೀಲ, ' ಮೇಸ್ಟ್ರ ಆಟ ' ಆಡಿದರು. ತಾಯಿಯ ಸೀರೆಯನ್ನು ತಲೆಗೆ ಸುತ್ತಿ ರಾಜಣ್ಣ ಮೇಸ್ಟ್ರಾದ, ಸುಶೀಲೆ ಕೈ ಕಟ್ಟಿ ನಿಂತ ವಿದ್ಯಾರ್ಥಿನಿಯಾದಳು. " ಹೊಡೀಕೂಡ್ದು " ಎನ್ನುವ ಶರತದ ಮೇಲೆಯೆ ಆಕೆ ಆ ಆಟಕ್ಕೆ ಒಪ್ಪಿದ್ದು. ಅಮ್ಮ ಮಕ್ಕಳ ಆಟವನ್ನು ನೋಡುತ್ತ ಬಿದ್ದುಬಿದ್ದು ನಕ್ಕಳು.

" ಲೇವಡಿ ಮಾಡ್ತೀರೇನೋ ಮೇಸ್ಟ್ರನ್ನ... ತಪ್ಪಾಯ್ತು ಅನ್ನಿ. ಹೀಗೇನೆ ಏನು ನೀವು ಪಾಠ ಕಲಿಯೋದು ? "

ಹಾಗಲ್ಲ, ಚೆನ್ನಾಗಿಯೆ ಅಣ್ಣ - ತಂಗಿ ಪಾಠ ಕಲಿತರು.

ಶಾಲೆಗೆ ಹೋಗುವ ಮಕ್ಕಳಿಗೆ ಮನೆಯಲ್ಲಿ ತಾನಿಲ್ಲದೆ ತೊಂದರೆಯಾಗಬಾರದೆಂದು ಅಮ್ಮ ಅಡುಗೆಯ ಕೆಲಸ ಬಿಟ್ಟುಬಿಡುವ ಯೋಚನೆಯನ್ನೂ ಮಾಡಿದಳು. ಆದರೆ ಆ ಸಂಪಾದನೆಯನ್ನು ಕಳೆದುಕೊಳ್ಳುವ ಧೈರ್ಯವಾಗಲಿಲ್ಲ. ಬದಲು ಜತೆಯಲ್ಲೆ, ಮುಂದಿನ ವೆಚ್ಚಕ್ಕಾಗಿ ಹಣ ಕೂಡಿಡಲೆಂದು, ಇನ್ನೊಂದು ಮನೆಯಲ್ಲಿ ಬೆಳಿಗ್ಗೆ ಸ್ವಲ್ಪ ಹೊತ್ತು ಮುಸುರೆ ತಿಕ್ಕುವ ಕೆಲಸವನ್ನೂ ಆಕೆ ವಹಿಸಿಕೊಂಡಳು.

ಎಲ್ಲಿಯೋ ಸೀರೆ ಹರಿಯಿತು. ರವಕೆ ಬಿರುಕು ಬಿಟ್ಟಿತು. ಅಮ್ಮ ಸೂಜಿ - ದಾರ ಹಿಡಿದು ಹೊಲಿದಳು.

ಇದ್ದೊಂದು ತಾಮ್ರದ ತಪ್ಪಲೆಗೆ ನಾಲ್ಕು ತೂತು ಬಿದ್ದುವು. ಅದನ್ನು ಮಾರಿ ಅಮ್ಮ ಆ ಹಣವನ್ನು ಭದ್ರವಾಗಿಟ್ಟು, ಬದಲಿಗೆ ಪುಡಿಕಾಸು ಕೊಟ್ಟು ಮಣ್ಣಿನ ಮಡಕೆ ತಂದಳು.

ದಿನಗಳು ಕಳೆದುವು. ಅಮ್ಮಯ ಮಕ್ಕಳು ಓದಿದರು.

...ಒಂದು ದಿನ, ತಾಯಿಯ ಎದುರು ತಿಂಡಿ ತಿನ್ನುತ್ತಾ ಕುಳಿತಿದ್ದಾಗ ರಾಜಣ್ಣ ಫಟಕ್ಕನೆ, " ಅಮ್ಮ ! ನಿನ್ತಲೇಲಿ ಬಿಳೀ ಕೂದಲು ! ಒಂದು—ಎರಡು—ಮೂರು ! " ಎಂದ.

" ಬಿಳೀ ಕೂದ್ಲು ಬಂದ್ರೆ ಮುದುಕರಾಗ್ತಾರಂತೆ, ಅಲ್ವೆ ಅಮ್ಮ ? " ಎಂದಳು ಸುಶೀಲ.

ತಾಯಿ ಮುಗುಳ್ನಕ್ಕಳು, ಮೂವತ್ತೈದು ಕಳೆದಿತ್ತು ಆಕೆಗೆ. ಅಗಲೆ ಬಿಳಿಕೂದಲು... ಜೀವನದಲ್ಲಿ ಅಷ್ಟೊಂದು ಸಂಕಟ ಅನುಭವಿಸಿದವರಿಗೆ ಹಾಗಾಗುವುದೇನೂ ಆಶ್ಚರ್ಯದ ವಿಷಯವಾಗಿರಲಿಲ್ಲ. ನೋಡುವವರ ದೃಷ್ಟಿಯಲ್ಲಿ ತಾನಿನ್ನು ವಯಸ್ಸಾದ ಹೆಂಗಸು...ಅನು ಕೂಲವೇ ಆಯಿತು ಅದರಿಂದ.

"ಅಮ್ಮಿ, ಕನ್ನಡಿ ತರ್ಲಾ ಅಮ್ಮಿ? ದೊಡ್ಡಮ್ಮ ಆಗಾಗ್ಗೆ ಕೀಳ್ತಾ ಇರ್ತಾರೆ. ನಾನೂ ಕಿತ್ಬಿಡ್ಲೇನಮ್ಮ ಆ ಬಿಳೀ ಕೂದಲ್ನ ?"

"ಬೇಡವಪ್ಪಾ. ಕೂದಲು ಬೆಳ್ಳಗಿದ್ರೇ ಚೆನ್ನ."

"ಹಾಗಾದ್ರೆ ನಂಗೂ ಬಿಳೀ ಕೂದ್ಲೇ ಬೇಕು," ಎಂದು ಸುಶೀಲ ಅಂದಳು.

ಈ ಮಕ್ಕಳಿಗೆ ಮಾತು ಮಾತಿಗೂ ಸಮಾಧಾನ ಹೇಳಿ ಪೂರೈಸುವ ಹಾಗೆಯೇ ಇರಲಿಲ್ಲ.

...ಮುಸುರೆ ತಿಕ್ಕುವ ಕೆಲಸವನ್ನು ಅಮ್ಮಿ ಬಿಡಬೇಕಾಗಿ ಬಂತು.

"ಯಾವಾಗ್ಲೂ ಅವಸರ್ದಲ್ಲೇ ಬಂದು ಹೋಗ್ತೀಯಲ್ಲಾ," ಎನ್ನುತ್ತಿದ್ದಳು ಮನೆ ಯೊಡತಿ.

"ಇನ್ನೊಂದ್ಮನೇಲಿ ಅಡುಗೆ ಕೆಲ್ಸ ಇದೇಮ್ಮ."

"ಅಷ್ಟು ದೊಡ್ಡೋಳು ಈ ಕೆಲ್ಸ ಒಪ್ಕೋಬಾರ್ದಾಗಿತ್ತು."

ಆಗಲೆ ಅದನ್ನು ಬಿಟ್ಟುಬಿಡಬೇಕೆನಿಸಿತ್ತು ಅಮ್ಮಿಗೆ. ಆದರೆ ಮನೆಯ ಯಜಮಾನರು ಒಳಗಿಂದ "ಇದ್ಕೊಳ್ಳಿ ಬಿಡೇ. ಎರಡು ಮಕ್ಕಳ ತಾಯಿ. ಬಡವರು...ಪಾಪ!" ಎಂದರು. ಯಜಮಾನಿ ಆ ಮಾತು ಕೇಳಿ ತನ್ನ ಗಂಡನನ್ನು ದುರದುರನೆ ನೋಡಿದಳೇ ಹೊರತು ಎದುರಾಡಲಿಲ್ಲ.

ಆ ಗಂಡಸು ತೋರಿದ ಕನಿಕರದ ಸ್ವರೂಪವೆಂಥದೆಂಬುದು ಅಮ್ಮಿಗೆ ಬೇಗನೆ ಅರ್ಥ ವಾಯಿತು.

ಒಂದು ದಿನ ಬೆಳಿಗ್ಗೆ ಅಲ್ಲಿಗೆ ಬಂದಾಗ ಬಾಗಿಲು ತೆರೆದವರು ಯಜಮಾನರು. ಅವರೆಂದರು :

"ಆಕೆಗೆ ಜ್ವರ ನಿನ್ನೆಯಿಂದ. ಮಲಕ್ಕೊಂಡಿದ್ದಾಳೆ."

"ಏನಾದರೂ ಕಷಾಯ ಕುದಿಸಿ ಕೊಡ್ಲೇನು ?"

"ಏನೂ ಬೇಡ. ನಾನೇ ಔಷಧಿ ತರ್ತೀನಿ ಆಮೇಲೆ."

ಅಡುಗೆ ಮನೆಯತ್ತ ಅಮ್ಮಿ ಹೋದೊಡನೆಯೆ, ಆ ಯಜಮಾನರು ಆಕೆಯನ್ನು ಹಿಂಬಾಲಿಸಿದರು. ಸ್ವಲ್ಪ ಗಾಬರಿಯಾದರೂ, ಅಮ್ಮಿ ತೋರಿಸಿಕೊಳ್ಳಲಿಲ್ಲ.

ಆ ಯಜಮಾನರ ಆಸೆಯು ಅಂಜಿಕೆಯ ಸ್ವರ ಕೇಳಿಸಿತು :

"ನೋಡು, ಆಕೆಗೆ ಜ್ವರಾಂತ ಸುಳ್ಳು ಹೇಳ್ದೆ, ಆಕೆ ಮಕ್ಕಳ್ನ ಕರಕೊಂಡು ನಿನ್ನೆಯೇ ದೊಡ್ಡ ಮಗಳ ಮನೆಗೆ ಹೋದ್ಲು."

'ಓ! ಯಾಕೆ ಸುಳ್ಳು ಹೇಳಿದ್ರಿ ಹಾಗಾದರೆ ?'

"ನೀನು ಹಾಗಿಂದ ಹಾಗೇ ಹೊರಟ್ಹೋಗ್ತಿಯೇನೋಂತ."

"ಸರಿ. ಈಗ ಬಂದಿದೀನಲ್ಲ. ಮುಸುರೆ ಪಾತ್ರೆ ಎತ್ಕೋಬೇಕು. ಸ್ವಲ್ಪ ಹೊರಕ್ಕೆ ಹೋಗಿ."

ಆ ಮನೆಯ ಯಜಮಾನ ಅಷ್ಟು ಸುಲಭವಾಗಿ ತೊಲಗುವ ಪ್ರಾಣಿಯಾಗಿರಲಿಲ್ಲ! ಆತ ಅಮ್ಮಿಯ ಕೈ ಹಿಡಿದರು. ಸೆರಗೆಳೆಯಲು ಯತ್ನಿಸಿದರು. "ನಿನಗೇನು ಬೇಕಾದ್ರೂ ಕೊಡ್ತೀನಿ," ಎಂದರು.

ಅಮ್ಮಿ ಚೀರಾಡಿ ಅಕ್ಕಪಕ್ಕದವರನ್ನು ಎಬ್ಬಿಸುವ ಹಾಗಿರಲಿಲ್ಲ. ಹಾಗೆ ಮಾಡಿ, ತನ್ನ

ಬಗೆಗೆ ಬೀದಿಯಲ್ಲಿ ಜನರು ಆಡಿಕೊಳ್ಳುವಂತಾದರೆ ಮುಂದಿನ ಜೀವನ ಆ ಊರಲ್ಲಿ ಬಲು ಕಷ್ಟವಾಗುತ್ತಿತ್ತು.

ಒಮ್ಮೆಲೆ ಅಮ್ಮಿ, ಆತನ ಕೈ ಕಚ್ಚಿದಳು. ತನ್ನ ಬಲಗೈಯಿಂದ ಹತ್ತಿರದಲ್ಲೆ ಇದ್ದ ಮೆಟ್ಟುಗತ್ತಿಯನ್ನೆತ್ತಿಕೊಂಡಳು. ಆ ಗಂಡಸು "ಅಯ್ಯೊ!" ಎನ್ನುತ್ತ ಹಿಂದೆ ಸರಿದೊಡನೆಯೇ, ಅಮ್ಮಿ ಬಾಗಿಲ ಬಳಿಗೆ ಓಡಿ, ಮೆಟ್ಟುಗತ್ತಿಯನ್ನೆಸೆದು, ಹಿಂತಿರುಗಿ ನೋಡದೆಯೇ ಹೊರಬಿದ್ದಳು.

ಆತನ ಕೈನೆತ್ತರಿನ ಚರ್ಮ ಮಾಂಸದ ರುಚಿ ಕಳೆಯಲೆಂದು ಅಮ್ಮಿ ಬೀದಿಯುದ್ದಕ್ಕೂ ಥೂ ಥೂ ಎಂದು ಉಗುಳಿದಳು.

'ಸದ್ಯಃ ಪಿಶಾಚಿ ಕೈಯಿಂದ ಪಾರಾದೆನಲ್ಲಾ'—ಎಂದು ಸಮಾಧಾನದ ನಿಟ್ಟುಸಿರು ಬಿಟ್ಟಳು.

ಅಮ್ಮಿ ಮತ್ತೆ ಆ ಮನೆಯೊಳಕ್ಕೆ ಕಾಲಿಡಲಿಲ್ಲ. ಸಂಬಳ ಪಡೆಯುವುದಕ್ಕೂ ಹೋಗಲಿಲ್ಲ. ಆ ಯಜಮಾನ ಪುಕ್ಕಲು ಪ್ರಾಣಿಯಾಗಿದ್ದುದರಿಂದ ಆತನಿಂದ ಆಮೇಲೆ ಅಮ್ಮಿಗೆ ತೊಂದರೆಯಾಗಲೂ ಇಲ್ಲ.

ಆ ಸಂದರ್ಭದಲ್ಲಿ ಆಕೆಗಾದ ಒಂದು ದೊಡ್ಡ ನಷ್ಟವೆಂದರೆ ಉಟ್ಟಿದ್ದ ಸೀರೆ. ಆತ ಸೆರಗು ಹಿಡಿದೆಳೆದ ರಭಸಕ್ಕೆ ಅದು ಹತ್ತಾರು ಕಡೆ ಬಾಯ್ತೆರೆದು ಆರ್ತನಾದ ಮಾಡಿತ್ತು. ಅದನ್ನು ಹೊಲಿದು ಸರಿಪಡಿಸುವ ಹಾಗಿರಲಿಲ್ಲ. ಮಕ್ಕಳಿಗಾಗಿ ಬಟ್ಟೆ ಚಿಂದಿಗಳನ್ನು ಸೇರಿಸಿ ಸೇರಿಸಿ ಹೊಲಿದು ಮಾಡಿದ್ದ ಹಾಸುಗೆಯ ಮೇಲೆ ಆ ಸೀರೆಯನ್ನು ಅಮ್ಮಿ ಹಾಸಿದಳು.

ಯೌವನ ಮರೆಯಾಗುತ್ತಲಿದ್ದರೂ ಕೂದಲಲ್ಲಿ ಬಿಳುಪು ತಲೆದೋರುತ್ತಿದ್ದರೂ ಸದಾ ಕಾಲವೂ ಪೀಡಿಸುತ್ತಿದ್ದ ಮುಟ್ಟು ದೋಷದಿಂದ ದೇಹ ಕ್ಷೀಣವಾಗಿದ್ದರೂ ಕೆಲವು ಗಂಡಸರಿಗಿನ್ನೂ ತಾನು ಬೇಕಾಗಿದ್ದಳಲ್ಲ? ಎಷ್ಟೊಂದು ತ್ರಾಸದಾಯಕ ಈ ಒಂಟಿ ಜೀವನ! ಬೆಳಗಾದ ದಿನ ಕತ್ತಲಾಗಲು, ಆ ಕತ್ತಲು ಕಳೆದು ಬೆಳಗಾಗಲು, ಅನುಭವಿಸಬೇಕಾದ ಬಾಳುವೆಯ ಸಂಕಟ ಎಷ್ಟೊಂದು!

ಅಮ್ಮಿಗನಿಸುತ್ತಿತ್ತು ಮಕ್ಕಳನ್ನು ಬೆಳೆಸಿ ದೊಡ್ಡವರಾಗಿ ಮಾಡುವುದೊಂದು ಮಹಾ ಯಜ್ಞವೇ ಸರಿ. ಆ ಯಜ್ಞದಲ್ಲಿ ತನ್ನ ಆತ್ಮಾರ್ಪಣವಾದರೂ ತಪ್ಪಿಲ್ಲ. ಅಂತೂ ಮಕ್ಕಳು ದೊಡ್ಡವರಾಗಬೇಕು. ಯಾರಿಗೂ ಅಂಜದೆ ಅವರು ಬಾಳುವಂತಾಗಬೇಕು...

ಬೆಳೆಯುತ್ತಲಿದ್ದ ಎಳೆಯರನ್ನು 'ನಾಳೆ'ಗಾಗಿ ಅಮ್ಮಿ ಸಿದ್ಧಗೊಳಿಸುತ್ತಿದ್ದಳು:

"ರಾಜಣ್ಣ, ಯಾರಾದರೂ ನಿಮ್ಮಪ್ಪಯ್ಯ ಎಲ್ಲೀಂತ ಕೇಳಿದ್ರೂಂತಿಟ್ಕೊ. ಆಗ ಏನಂತೀಯಾ?"

"ಅದೇ—ತೀರ್ಥಯಾತ್ರೆಗೆ ಹೋಗಿದಾರೆ, ಅಂತೀನಿ."

"ಇಷ್ಟು ದಿವಸವಾದ್ರೂ ಯಾಕೆ ಬರಲಿಲ್ಲ, ಅಂದ್ರೆ?"

"ಬಹಳ ದೂರ ಹೋಗಿದಾರೆ ಇನ್ನೇನು ಬಂದ್ಬಿಡ್ತಾರೆ—ಅಂತೀನಿ."

"ಆ ಪ್ರಶ್ನೆ ಕೇಳ್ದೋರು, ನಿಮ್ಮಪ್ಪ ಇನ್ನು ಬರೋದೇ ಇಲ್ಲಾಂತ ಅಂದ್ರೆ?"

"ಯಾಕಮ್ಮಿ ಹಾಗೆ ಹೇಳ್ತೀಯಾ?"

"ಸುಮ್ನೆ. ಒಂದ್ಮಾತಿಗಂದೆ. ಹಾಗೆ ಯಾರಾದ್ರೂ ಅಂದ್ರೂಂತಿಟ್ಕೊ."

" ಹಾಗಾದರೆ ನಮ್ಮಪ್ಪ ಬರೋದೇ ಇಲ್ವೇನಮ್ಮಿ ? "

" ಥೂ ಹೋಗೋ. ಪ್ರಶ್ನೆಗೆ ಉತ್ತರ ಕೊಡೂ ಅಂದ್ರೆ..."

" ಹೂಂ. ಕೊಡ್ತೀನಿ. ಯಾರಾದರೂ ಹಾಗೆ ಕೇಳಿದ್ರೆ, ನಿಮಗ್ಯಾತಕ್ರಿ ಅದೆಲ್ಲ—ಅಂತ ದಬಾಯಿಸ್ತೀನಿ."

" ಭೇಷ್."

ಅಮ್ಮಿ ಮತ್ತೂ ಅಂದಳು :

" ರಾಜಣ್ಣ, ಯಾರಾದರೂ ನಿಮ್ಮಮ್ಮ ಹೆಸರೇನು ಅಂತ ಕೇಳಿದ್ರೆ— ? "

" ಅಮ್ಮಿ ಅಂತೀವಿ," ಎಂದರು ಮಕ್ಕಳಿಬ್ಬರೂ.

" ಥೂ ಹಾಗನ್ಬಾರ್ದು. ಬನಶಂಕರಮ್ಮ ಅಂತ ಅನ್ಬೇಕು."

" ಆದರೆ ನಮಗೆ ಮಾತ್ರ ನೀನು ಅಮ್ಮಿನೆ ಅಲ್ವಾ ? " ಎಂದಳು ಸುಶೀಲ, ಆ ಪ್ರಶ್ನೆಗೆ 'ನ'ಕಾರ ಉತ್ತರ ಬರಲಾರದೆಂಬ ನಂಬಿಕೆಯಿಂದ.

" ಹೌದು ! "

" ಹಾಗೇ ಹೇಳ್ತೀವಮ್ಮಿ."

" ನಿಮ್ಮಮ್ಮ ಏನ್ಮಾಡ್ತಾರೇಂತ ಯಾರಾದ್ರೂ ಅಂದ್ರೆ— ? "

" ಅಡುಗೆ ಕೆಲಸ ಮಾಡ್ತಾಳೇಂತ ಅನ್ನೋದು."

" ತಾಯಿ ಕೆಲಸದವಳು ಅನ್ನೋಕೆ ಬೇಸರ ಆಗಲ್ವೆ ? "

" ಬೇಸರ ಯಾಕಮ್ಮಿ ? ಬಡವ್ರಲ್ವಾ ನಾವು ? ಬಡವ್ರು ಯಾವಾಗ಼್ೂ ದುಡೀದೆ ಇದ್ರೆ ಬದುಕೋಕಾಗುತ್ತಾ ? "

ಏನೋ ಆಸೆ ಅಮ್ಮಿಗೆ. ಒಂದಲ್ಲ ಒಂದು ದಿವ ತಮ್ಮ ಬಡತನ ನೀಗಬೇಕು. ಯಾವುದರ ಕೊರತೆಯೂ ಇಲ್ಲದೆ ಸಮೃದ್ಧವಾಗಿ ಮಕ್ಕಳು ಬಾಳಬೇಕು...ಎಲ್ಲರ ಗೌರವಕ್ಕೆ ಅವರು ಪಾತ್ರರಾಗಬೇಕು. ವಿಧವೆಯ ಮಕ್ಕಳು, ತಂದೆ ಇಲ್ಲದವರು, ಅನ್ನಾನ್ನಗತಿಕರು— ಎನಿಸಿಕೊಳ್ಳಬಾರದು. ತಾನು ಬದುಕಿನಲ್ಲಿ ಅನುಭವಿಸದ ಸುಖ ಅವರ ಸ್ವತ್ತಾಗಬೇಕು...

" ಏನಮ್ಮಿ ಯೋಚಿಸ್ತಿದೀಯಾ ? "

" ರಾಜಣ್ಣ, ನೀನು ದೊಡ್ಡೋನಾದ್ಮೇಲೆ ಏನ್ಮಾಡ್ತೀಯೆ ? "

" ಚೆನ್ನಾಗಿ ಕೆಲಸ ಮಾಡಿ ಸಂಪಾದಿಸ್ತೀನಿ ಅಮ್ಮಿ. ಹಾಗೆ ಸಂಪಾದ್ಸಿ, ನೀನು ಯಾರ ಮನೆಗೂ ಕೆಲಸಕ್ಕೆ ಹೋಗದೆ ನಮ್ಮನೇಲೆ ಇರೋ ಹಾಗ್ಮಾಡ್ತೀನಿ."

" ಒಳ್ಳೆಯವನು ನನ್ಕಂದ. ಆಗ ಸುಶೀ ಏನಾಗಿರ್ತಾಳೆ ಗೊತ್ತೆ ? "

" ಸೀರೆ ಉಟ್ಕೊಂಡಿರ್ತಾಳೆ. ನಮಗಿಬ್ರಿಗೂ ಅಡುಗೆ ಮಾಡಿ ಬಡಿಸ್ತಾಳೆ. ನಂಗೊತ್ತಿಲ್ವಾ ? "

" ಇಲ್ಲ ರಾಜಣ್ಣ, ಸುಶೀ ಗಂಡನ ಮನೆಗೆ ಹೊರಟ್ಹೋಗಿರ್ತಾಳೆ—ಅಷ್ಟೊತ್ತಿಗೆ..."

ರಾಜಣ್ಣ ಸಂತೋಷದಿಂದ ಕೈ ತಟ್ಟುತ್ತ ಸುಶೀಲೆಯನ್ನು ನೋಡುತ್ತ " ಓಹ್ಹೋ ! " ಎಂದ.

" ನಾನು ಹೋಗಲ್ಲ—ಹೋಗಲ್ಲ...ಅಮ್ಮೀ ! ನಾನು ಹೋಗಲ್ಲಮ್ಮಿ... ! " ಎಂದು ಅಳತೊಡಗಿದಳು ಸುಶೀಲ.

ತಾಯಿ ಸಂತೈಸಿದಳು :

" ಸುಮ್ನೆ ತಮಾಷೆಗಂದೆ ಚಿನ್ನ. ನಾವೆಲ್ಲ ಜತೇಲೆ ಇರೋಣ—ಜತೇಲೆ ! "

ಆದರೆ ತಾಯಿ ಮಕ್ಕಳ ಆ ಸಂತೋಷದ ಬೆಳದಿಂಗಳಿಗೆ ಆಗಾಗ್ಗೆ ಗ್ರಹಣ ಹಿಡಿಯುತ್ತಿತ್ತು.

ಯಾರೋ ಏನೋ ಕೆಟ್ಟ ಮಾತು ಅಂದರೆಂದು ಮಕ್ಕಳಿಬ್ಬರೂ ಮುಖಬಾಡಿಸಿಕೊಂಡು ಮನೆಗೆ ಬರುತ್ತಿದ್ದರು. ಅದೇನೆಂದು ಕೇಳಿ ತಿಳಿದಾಗ ಅಮ್ಮಿಯ ಮುಖವೂ ಕಪ್ಪಿಡುತ್ತಿತ್ತು. ಆಕೆ ಅಧೀರಳಾಗುತ್ತಿದ್ದಳು. ತಮ್ಮನ್ನು ಹಾಗೆ ಹಿಂಸಿಸಿ ಸಂತೋಷಪಡುತ್ತಿದ್ದವರನ್ನು ಪಿಶಾಚಿಗಳೆಂದು ಆಕೆ ಶಪಿಸುತ್ತಿದ್ದಳು. ' ಇಂಥ ಶಿಕ್ಷೆಯನ್ನೂ ನೀನು ಕೊಡಬಹುದೇ ದೇವರೆ! ' ಎಂದು ಮನಸ್ಸಿನಲ್ಲೆ ಪ್ರಲಾಪಿಸುತ್ತಿದ್ದಳು.

ಅಮ್ಮಿ ಬೀದಿಯಲ್ಲಿ ನಡೆದು ಹೋಗುತ್ತಿದ್ದಾಗ ಯಾರೋ ಒಬ್ಬ ಹೆಂಗಸು ಒಮ್ಮೆ ಅಂದಳು :

" ಗಂಡ ಬಿಟ್ಹೋಗಿದ್ರೂನೂ ಎಂಥ ಧಿಮಾಕು ! "

ಯಾವಾಗಲೂ ಸಪ್ಪಗಿರುತ್ತಿದ್ದ ಮುಖ ; ತಲೆಬಾಗಿಯೇ ಸಾಗುತ್ತಿದ್ದ ನಡಿಗೆ, ಆದರೂ ಕೆಲವರ ಕಣ್ಣಿಗೆ ಅದು ' ಧಿಮಾಕೆ 'ಂದು ತೋರುತ್ತಿತ್ತು.

ಅಂತಹ ಮಾತು ಕೇಳಿ ಅಮ್ಮಿಗೆ ಅಷ್ಟೇನೂ ವ್ಯಥೆಯಾಗುತ್ತಿರಲಿಲ್ಲ. ಬದಲು, ತನ್ನ ನಿಜವಾದ ಕತೆ ಈ ಜನಕ್ಕಿನ್ನೂ ತಿಳಿದಿಲ್ಲವಲ್ಲಾ ಎಂದು ಸಮಾಧಾನವೆನಿಸುತ್ತಿತ್ತು.

ಯಾರಾದರೊಮ್ಮೆ ಕೇಳುತ್ತಿದ್ದರು :

" ಏನಾದರೂ ಕಾಗದ ಗೀಗದ ಬಂದಿದೆಯೊ ? ಯಾವೂರಲ್ಲಿ ಇದಾರಂತೆ ಈಗ ? "

" ಬಂದಿದೆ...ಅದೆಂಥದೋ ಹೆಸರು ಬರೆದಿದಾರಪ್ಪಾ. ಉತ್ತರ ಹಿಂದೂಸ್ಥಾನದ್ದು ಯಾವುದೋ ಊರು..."

" ಪ್ರಯಾಗವೆ ? "

" ಹೌದು ; ಹೌದೂಂತ ಕಾಣುತ್ತೆ."

ಸುಳ್ಳು ಹೇಳುತ್ತಿರುವೆನೆಂದು ಆಕೆಯ ಮನಸ್ಸಾಕ್ಷಿ ಕುಟುಕುತ್ತಿತ್ತು. ಆದರೆ ಬದುಕ ಬೇಕಾದರೆ ಬೇರೆ ಮಾರ್ಗವೇ ಇಲ್ಲ—ಎಂಬುದನ್ನೂ ಆಕೆ ತಿಳಿದಿದ್ದಳು.

ತಾನೋ—ತಿಳಿವಳಿಕೆ ಇದ್ದವಳು. ಎಚ್ಚರಿಕೆಯಿಂದಿದ್ದು, ಮಾತನ್ನು ಬಿಗಿಹಿಡಿದು, ದಿನ ತಳ್ಳುವುದು ಸಾಧ್ಯವಿತ್ತು. ಆದರೆ ಆ ಮಕ್ಕಳು ? ಅವರನ್ನು ಹಾದಿಯಲ್ಲಿ ಹಿಡಿದು ನಿಲ್ಲಿಸಿ ಕಾಡುವವರಿಗೆ ಕೊರತೆ ಇತ್ತೆ ?

ಒಮ್ಮೆ ಶಾಲೆಯಲ್ಲೇನೋ ಕ್ಷುಲ್ಲಕ ಕಾರಣಕ್ಕಾಗಿ ಜಗಳವಾಯಿತು. ಹತ್ತಾರು ಹುಡುಗರು ಪರಸ್ಪರ ಕೈ ಮಿಲಾಯಿಸಿದರು. ತನ್ನ ಸ್ಲೇಟು ಪುಸ್ತಕಗಳನ್ನು ತಂಗಿಯ ಕೈಗೆ ಕೊಟ್ಟು ರಾಜಣ್ಣನೂ ಆ ಗುಂಪು ಸೇರಿದ್ದ.

ಅದನ್ನು ನೋಡಿದ ಎದುರು ಕಡೆಯ ಹುಡುಗನೊಬ್ಬ ರಾಜಣ್ಣನನ್ನು ಉದ್ದೇಶಿಸಿ " ಸೂಳೇ ಮಗನೆ ! ನೀನೂ ಬಂದಿಯೇನೋ ? " ಎಂದು ನುಡಿದು, ರಾಜಣ್ಣನ ಮೇಲೆ ಹರಿಹಾಯ್ದ.

ಸೂಳೆ ಎನ್ನುವುದು ಕೆಟ್ಟ ಪದವೆಂಬುದು ರಾಜಣ್ಣನಿಗೆ ಗೊತ್ತಿತ್ತು. ಆತನ ಕಿವಿ

ಮುಖ ಅವಮಾನದಿಂದ ಕೆಂಪಗಾದುವು.

"ಏನೋ ನೀನಂದಿದ್ದು ?" ಎಂದ, ಕಿವಿ ಕಿವುಡಾಗುವ ಸ್ವರದಲ್ಲಿ.

"ಅದನ್ನೇ ಅಂದಿದ್ದು—ಸೂಳೇ ಮಗನೇ ಅಂತ."

ಕತ್ತಿಗೆ ಕತ್ತು, ಕಿವಿ ಮುಖಗಳ ಮೇಲೆ ಕೈಕೈಗಳು, ಜುಟ್ಟಿಗೆ ಜುಟ್ಟು...ಇಬ್ಬರೂ ಒಬ್ಬರನ್ನೊಬ್ಬರು ಬಿಡದೆ, ನೆಲದ ಮೇಲೆ ಉರುಳಾಡಿದರು. ಆ ಹುಡುಗರ ಮೂಲ ಜಗಳ ನಿಂತೇ ಹೋಯಿತು. ಈ ಇಬ್ಬರ ಕಲಹದ ಕಾರಣ ತಿಳಿಯದೇ ಹೋದರೂ ಹುಡುಗರು ಎರಡು ಗುಂಪುಗಳಾಗಿ ಹಿಡಿ, ಕೊಡು, ಬಡಿ—ಹೂಂ, ಎನ್ನುತ್ತ ಪಕ್ಷ ವಹಿಸಿದರು. ಸುಶೀಲ "ಅಣ್ಣಾ—ಅಣ್ಣಾ !" ಎನ್ನುತ್ತ ಕೂಗಿಕೊಂಡು, ನೆಲದ ಮೇಲೆ ಕುಸ್ತಿ ನಡೆಸಿದ ಆ ಇಬ್ಬರಿಗೂ ಸುತ್ತು ಬಂದಳು. ಹಾಗೆ ಸುತ್ತುತ್ತ ತಮ್ಮನ್ನು ಅವಮಾನಿಸಿದ್ದ ಆ ಹುಡುಗನ ತಲೆ ದೊರೆತಾಗ ಎಡಗೈಯಿಂದ ತಾನೂ ಗುದ್ದಿದಳು—

"ಬಿಡು ! ನನ್ನಣ್ಣ ಬಿಡು !" ಅಂತ.

ಆ ಸಂಜೆ ಮನೆಗೆ ಮರಳಿದವನು ವೀರ ಯೋಧ ರಾಜಣ್ಣ—ಅಬಲೆಯ ಆ ಸಂತಾನ ಸೋತಿರಲಿಲ್ಲ. ನಿಂದಿಸಲು ಬರುವವರು ಮುಂದೆ ಎಚ್ಚರದಿಂದಿರಬೇಕು, ಎಂಬುದನ್ನಷ್ಟೆ ಆತ ತೋರಿಸಿಕೊಟ್ಟಿದ್ದ.

ಎಲ್ಲವನ್ನೂ ಕೇಳಿ ತಿಳಿದ ಅಮ್ಮಿ ಅಳಲಿಲ್ಲ, ಗೋಳಾಡಲಿಲ್ಲ. ಮಗನ ಗಾಯಗಳಿಗೆ ಎಣ್ಣೆ ಸವರಿ ಬಿಸಿ ನೀರು ಕಾಯಿಸಿ ಸ್ನಾನಮಾಡಿಸಿದಳು. ಮಗನಿಗೆ ತುಂಬಾ ನೋವಾಯಿತೇನೋ ಎಂಬ ಕಾತರವಿತ್ತಾದರೂ ಕೆಟ್ಟವರಿಗೆ ತನ್ನ ಕೂಸು ಮಣಿಯಲಿಲ್ಲವಲ್ಲ—ಎಂಬ ಅಭಿಮಾನದಿಂದ ಆಕೆಯ ಹೃದಯದಲ್ಲಿ ನೆಮ್ಮದಿ ನೆಲೆಸಿತು.

ಎರಡು ದಿನ ರಾಜಣ್ಣ ಶಾಲೆಗೆ ಹೋಗಲಿಲ್ಲ ; ಸುಶೀಲೆಯೂ ಹೋಗಲಿಲ್ಲ. ಮೂರನೆಯ ದಿನ ಅವರಿಬ್ಬರೂ ಹೋದಾಗ ತರಗತಿಯ ಹಲವು ಜನ ಹುಡುಗರು ಅವರಿಬ್ಬರನ್ನೂ ಸ್ನೇಹದಿಂದ ಮಾತನಾಡಿಸಿದರು.

"ಒಳ್ಳೇ ಕೆಲ್ಸ ಮಾಡ್ದೆ ರಾಜಣ್ಣ. ಅವನೇನು ಕೊಬ್ಬಿದ್ದಾಂತ...ಅವನು ಸ್ಕೂಲ್ಗೇ ಬರಲ್ವಂತೆ ಇನ್ನು. ಅವನಪ್ಪ ಅವನನ್ನ ಮೈಸೂರ್ಗೊ ಎಲ್ಗೊ ಕಳಿಸ್ತಾರಂತೆ...ನೀನೇನೂ ಯೋಚಿಸ್ಬೇಡ...ನಾವಿದ್ದೀವಿ."

ಉಪಾಧ್ಯಾಯರಿಗೆ ವಿಷಯ ತಿಳಿದಿತ್ತು. ಅವರು ಅದರ ವಿಚಾರಣೆ ನಡೆಸಲಿಲ್ಲ. ರಾಜಣ್ಣನನ್ನು ದಂಡಿಸಲಿಲ್ಲ. ರಾಜಣ್ಣನ ತಾಯಿ ತನ್ನ ಮಕ್ಕಳೊಡನೆ ಬಾಳ್ವೆ ನಡೆಸುತ್ತಿದ್ದ ಪರಿಸ್ಥಿತಿಯ ಸೂಕ್ಷ್ಮವನ್ನು ಸ್ವಲ್ಪ ಮಟ್ಟಿಗೆ ತಿಳಿದುಕೊಂಡಿದ್ದ ಅವರು ಆ ಎಳೆಯರ ಮನಸ್ಸು ನೋಯಿಸುವಂತಹ ವಿಚಾರವನ್ನೇ ಪ್ರಸ್ತಾಪಿಸಲಿಲ್ಲ.

ವರ್ಷಗಳುರುಳಿದುವು.

ಆಗಲೇ ನಿವೃತ್ತರಾಗಿದ್ದ ನ್ಯಾಯಾಧೀಶರು ಬೆಂಗಳೂರಿಗೆ ಹೊರಟು ಹೋದರು. ಅಷ್ಟು ವರ್ಷಗಳ ಕಾಲ ಅವರ ಮನೆಯವರೊಡನೆ ಅಡುಗೆಯವಳಾಗಿ ಬಹುಮಟ್ಟಿಗೆ ಆತ್ಮೀಯತೆಯಿಂದ ಬೆರೆತಿದ್ದ ಅಮ್ಮಿಗೆ ದುಃಖವಾಯಿತು.

ನ್ಯಾಯಾಧೀಶರ ಹೆಂಡತಿ ಗಂಡನ ಜತೆಯಲ್ಲಿ ತಮ್ಮ ಮಗ ಉದ್ಯೋಗದಲ್ಲಿದ್ದ ಬೆಂಗಳೂರಿಗೆ ಹೊರಟು ನಿಂತಾಗ, ಅಮ್ಮಿಯ ಮಕ್ಕಳಿಗೆ ಉಡುಗೆ ತೊಡುಗೆಯನ್ನೂ ಅಮ್ಮಿ

ಗೊಂದು ಸೀರೆ ಎರಡು ರವಕೆ ಕಣಗಳನ್ನೂ ಕೊಡಿಸಿದರು. ನ್ಯಾಯಾಧೀಶರು ಐವತ್ತು ರೂಪಾಯಿ ಕೊಟ್ಟರು.

ಅವರ ಮನೆಯಲ್ಲಿ ಅಮ್ಮಿಯ ಕೊನೆಯ ಅಡುಗೆಯೊಂದು ದೊಡ್ಡ ಹಬ್ಬವಾಗಿತ್ತು. ಮನೆಯೊಡತಿಯ ಅಪೇಕ್ಷೆಯಂತೆ ತನ್ನ ಮಕ್ಕಳನ್ನೂ ಕರೆದುಕೊಂಡು ಅಮ್ಮಿ ಆ ದಿನ ಅಲ್ಲಿಗೆ ಹೋದಳು.

ಒಂದು ಮೂಲೆಯಲ್ಲಿ ತಮ್ಮತಮ್ಮೊಳಗೇ ಗಂಭೀರವಾಗಿ ಮಾತನಾಡುತ್ತ ಕುಳಿತಿದ್ದ ರಾಜಣ್ಣ—ಸುಶೀಲೆಯರನ್ನು ಕಂಡು ನ್ಯಾಯಾಧೀಶರ ಕಿರಿಮಗಳು ಕೇಳಿದಳು :

" ನೀವೂ ಬರ್ತೀರೇನೊ ಬೆಂಗಳೂರ್ಗೆ ? "

ತಮ್ಮಿಬ್ಬರ ಪರವಾಗಿಯೂ ರಾಜಣ್ಣ ಉತ್ತರವಿತ್ತ :

" ದೊಡ್ಡೋರಾದ್ಮೇಲೆ ಬರ್ತೀವಿ."

## ೧೫

ಸೀರೆಯುಟ್ಟಿದ್ದ ಸುಶೀಲೆಯೂ ಅಂಗಿ ಚಡ್ಡಿ ತೊಟ್ಟು ಕರಿಯ ಟೋಪಿ ಧರಿಸಿದ್ದ ರಾಜಣ್ಣನೂ ಶಾಲೆ ಬಿಟ್ಟು ದೂರದಿಂದ ಬರುತ್ತಿದ್ದುದನ್ನು ಕೇಶವಮೂರ್ತಿಯ ಮನೆಯ ಎದುರು ಬಾಗಿಲಲ್ಲಿ ನಿಂತು ಅಮ್ಮಿ ನೋಡುತ್ತಲಿದ್ದಳು. ಮಗಳನ್ನು ನೋಡುತ್ತ, " ಸುಶೀ ದೊಡ್ಡವಳಾದಳು " ಎಂದುಕೊಂಡಳು. ಸುಶೀಲೆಯ ಆ ವಯಸ್ಸಿನಲ್ಲಿ ಅಮ್ಮಿಗೆ ವೈಧವ್ಯ ಪ್ರಾಪ್ತವಾಗಿ ಆರು ತಿಂಗಳಾಗಿತ್ತು. ಅದು ಆಗಿನ ಕಾಲ. ಈಗಲಾದರೋ ಸುಶೀಲೆಗೆ ಮದುವೆಯೆಂದರೇನೆಂಬುದರ ಸರಿಯಾದ ಕಲ್ಪನೆಯೇ ಇರಲಿಲ್ಲ. ಮುಗ್ಧ ಹುಡುಗಿ...

ಅವರು ನಗುನಗುತ್ತ ಬಂದರು, ಅಣ್ಣ—ತಂಗಿ.

ಮಾತಿನ ಮಲ್ಲಿ ಸುಶೀಲ ಸಮೀಪಕ್ಕೆ ಬಂದೊಡನೆ ಅಂದಳು :

" ಅಮ್ಮಾ, ಇವತ್ತೇನಾಯ್ತು ಗೊತ್ತೆ ? ಕನ್ನಡ ಪಂಡಿತ್ರು ' ಚಂಡೀರಾಣೀಂ 'ತ ಒಂದು ಕಥೆ ಪುಸ್ತಕ ತಂದಿದ್ರು, ಬಂಗಾಳೀದು, ಅದರ ವಿಷಯ ಹೇಳ್ತಾ ಹೇಳ್ತಾ ನನ್ನ ' ಶೀಲಾರಾಣೀಂ 'ತ ಪಂಡಿತ್ರು ಕೂಗಿದ್ರಮ್ಮಿ."

" ಶೀಲಾರಾಣಿ—ಹೆಸರು ಚೆನ್ನಾಗಿದೆ ಅಲ್ವೆ ಅಮ್ಮಿ ? " ಎಂದ ರಾಜಣ್ಣ.

ಉತ್ತರವೀಯಲು ಅಮ್ಮಿಗೆ ಆಸ್ಪದ ಕೊಡದೆಯೇ ಸುಶೀಲ ಅಂದಳು.

" ಚೆನ್ನಾಗಿಲ್ದೆ...ನೀನು ಬರೇ ರಾಜ. ನಾನು ಶೀಲಾ-ರಾಣಿ...ಗೊತ್ತೊ ? "

" ಹೋಗೇ, ಸಾಕು ಜಂಭ. ಅದಕ್ಕೇ ಮಾರ್ಕು ಕಡಿಮೆ ಬಂದಿರೋದು ನಿಂಗೆ."

" ನೋಡಮ್ಮಿ , ನಂಗೆ ಮಾರ್ಕು ಕಡಿಮೆ ಬಾತೂಂತ ಎಷ್ಟು ಸಂತೋಷವಾಗಿದೆ ಅಣ್ಣಂಗೆ."

ಅಮ್ಮಿ ಇಬ್ಬರನ್ನೂ ಮನೆಯೊಳಕ್ಕೆ ಕರೆದೊಯ್ಯುತ್ತ ಹೇಳಿದಳು :

" ಪರವಾಗಿಲ್ಲ ಸುಶೀ. ನಿಂಗೆ ನಾಲ್ಕು ಮಾರ್ಕು ಕಡಿಮೆ ಬಂದ್ರೆ ಏನಂತೆ ? ನೀನೇನು ಕೆಲ್ಸ ಮಾಡಿ ಸಂಪಾದಿಸ್ಬೇಕೆ ? ಗಂಡನ ಮನೆಗೆ ಹೋಗೋಳಿಗೆ ಏನಾದ್ರೇನಮ್ಮ ನಿಂಗೆ ? "

ಸುಶೀಲೆಗೆ ಸ್ವಲ್ಪ ಲಜ್ಜೆ ಎನಿಸಿತು. ರಾಜಣ್ಣ, "ಕೇಳಿದ್ಯೇನೆ ?" ಎಂದ, ತಂಗಿಯನ್ನು ಲೇವಡಿ ಮಾಡುತ್ತ.

ಆ ತಂಗಿಯೆಂದಳು :

"ತಾಳು. ಈ ಸಲ ಪರೀಕ್ಷೇಲಿ ತೋರಿಸ್ತೀನಿ. ನಿನಗಿಂತ ಹೆಚ್ಚು ಮಾರ್ಕು ಬರದೇ ಇದ್ದರೆ ನನ್ಹೆಸರು ಸುಶೀಲಾನೇ ಅಲ್ಲ !"

"ಸುಶೀಲ ? ಯಾವ ಸುಶೀಲಾನೆ ? ಶೀಲಾರಾಣಿ ಅಲ್ವೇನೇ ನೀನು ?"

ಮದುವೆಯ ಪ್ರಸ್ತಾಪವನ್ನೇನೋ ಯಾವ ಯೋಚನೆಯೂ ಇಲ್ಲದೆ ಮಾಡಿದ್ದಳು ಅಮ್ಮಿ. ಆದರೆ ಅದು ಎಷ್ಟೊಂದು ಗಂಭೀರ ವಿಷಯವಾಗಿತ್ತು ! 'ಈಗ ಯಾಕೆ ಯೋಚ್ನೆ ? ಮಗಳು ದೊಡ್ಡೋಳಾಗ್ಲಿ. ಆಮೇಲೆ ನೋಡ್ಕೊಳ್ಳೋಣ,' ಎಂದು ಪ್ರತಿ ಸಾರೆಯೂ ಆ ವಿಷಯವನ್ನು ಅಮ್ಮಿ ಮುಂದಕ್ಕೆ ತಳ್ಳುತ್ತಿದ್ದಳು.

ಈ ಕೆಲವು ವರ್ಷಗಳಲ್ಲಿ ಅಮ್ಮಿಯ ನಿತ್ಯ ಜೀವನದಲ್ಲಿ ಬದಲಾವಣೆಯಾಗಿತ್ತು. ನ್ಯಾಯಾಧೀಶರು ನಿವೃತ್ತರಾಗಿ ಊರು ಬಿಟ್ಟಮೇಲೆ ಅಮ್ಮಿ ಬೇರೆಲ್ಲಿಗೂ ಅಡಿಗೆ ಕೆಲಸಕ್ಕೆ ಹೋಗಲಿಲ್ಲ. ಆಕೆ ಖಾರದ ಅಪ್ಪಳ, ಸಂಡಿಗೆ ಮಾಡಿ ಮಾರಿದಳು. ಚಟ್ನಿಪುಡಿ ತಯಾರಿಸಿದಳು. ಮೈ ಬಗ್ಗದ ಅಥವಾ ಅನನುಭವಿಗಳಾದ ಆಧುನಿಕರ ಮನೆಯಲ್ಲಿ ಉಪ್ಪಿನಕಾಯಿ ಹಾಕಿಕೊಟ್ಟಳು. ಆಕೆ ಕಟ್ಟಿದ ಬೀಡಾಗಳನ್ನು ಹೊಸದಾಗಿ ಆರಂಭವಾಗಿದ್ದ ಎರಡು ಮೂರು ಹೋಟೆಲುಗಳಿಗೆ ರಾಜಣ್ಣ ಒಯ್ದು ಕೊಡುತ್ತಿದ್ದ. ಅಂತೂ ಸ್ವಲ್ಪ ದುಡ್ಡು ಸಂಪಾದನೆಯಾಗುತ್ತಿತ್ತು. ಒಂದೆರಡು ಹಸು-ಎಮ್ಮೆ ಕಟ್ಟಿಕೊಳ್ಳಲೇ ಎನಿಸುತ್ತಿತ್ತು ಅಮ್ಮಿಗೆ ಒಮ್ಮೊಮ್ಮೆ. ಆದರೆ ಆ ಮನೆಯಲ್ಲಿ ಅದಕ್ಕೆ ಸಾಕಷ್ಟು ಅನುಕೂಲವಿರಲಿಲ್ಲ. ಅದಕ್ಕಿಂತಲೂ ಮುಖ್ಯವಾಗಿ, ಆ ಕೆಲಸಕ್ಕೆ ಬೇಕಾದಷ್ಟು ಶಕ್ತಿ ಇರಲಿಲ್ಲ ಅವಳಲ್ಲಿ.

ರಾಮಶಾಸ್ತ್ರಿ ಆ ನಡುವೆ ಎರಡು ಮೂರು ಸಾರೆ ಬಂದಿದ್ದ.

ಒಮ್ಮೆ ಬಂದಾಗ ಅವನು ಕೆಟ್ಟ ಸುದ್ದಿ ತಂದಿದ್ದ : ತನ್ನ ಮೊದಲ ಮಗುವಿನ ಮರಣದ ಸುದ್ದಿ. ಅದನ್ನು ಕೇಳಿದ ಅಮ್ಮಿಯ ಹೃದಯ ಸೀದುಹೋಯಿತು. ಹಳೆಯ ದಿನಗಳಲ್ಲಿ ಸುಂದರಮ್ಮ ಮತ್ತು ತನ್ನ ನಡುವೆ ಮಧುರ ಬಾಂಧವ್ಯದ ಗಾರೆ ಬಳೆದಿದ್ದ ಮಗು. ಸುಂದರಮ್ಮನ ಆಗ್ರಹಕ್ಕೆ ಸೋತು, ಕಾವೇರಿಯ ಧರ್ಮಾವರ ಸೀರೆಯನ್ನುಟ್ಟು, ನೋಡುತ್ತಿದ್ದವರ ಕಣ್ಣಿನ ಕಸವಾಗಿ ಜಾತ್ರೆಗೆ ಹೋಗಿದ್ದಾಗ ಅಮ್ಮಿ ಆ ಮಗುವನ್ನೆತ್ತಿಕೊಂಡಿದ್ದಳು...

ಎಷ್ಟು ಬೇಡವೆಂದರೂ ನಾರಾಯಣರಾಯರ ನೆನಪಾಗುತ್ತಿತ್ತು ಅಮ್ಮಿಗೆ ಒಮ್ಮೊಮ್ಮೆ. ಅವರನ್ನು ಕೆಟ್ಟವರೆಂದು ಜರೆಯಲು ಅಮ್ಮಿ ಸಿದ್ಧಳಿರಲಿಲ್ಲ. ಕೆಟ್ಟವರ ಮುಂದೆ ಅವರು ಸೋಲನ್ನೊಪ್ಪಿಕೊಂಡರು ನಿಜ. ಆದರೆ ತನ್ನ ಬಾಳ್ವೆಯ ಮಧುರತಮ ದಿನಗಳನ್ನು ದೊರಕಿಸಿಕೊಟ್ಟವರು ಅವರಲ್ಲವೆ ?

ಆದರೂ ರಾಮಶಾಸ್ತ್ರಿ ಬಂದಾಗ ಬಾಯಿ ಬಿಟ್ಟು ಅವರ ಬಗೆಗೆ ಏನನ್ನೂ ಅಮ್ಮಿ ಕೇಳುತ್ತಿರಲಿಲ್ಲ.

ಒಮ್ಮೆ ಕೇಶವಮೂರ್ತಿಯೊಂದು ಸುದ್ದಿ ತಂದ. ಹುಡುಗರಿಲ್ಲದೆ ಇದ್ದ ಸಂದರ್ಭ ನೋಡಿ ಆತ ಅಮ್ಮಿಗೆ ಹೇಳಿದ :

"ಬನಶಂಕರಿ ! ಇವತ್ತು ನಾರಾಯಣರಾಯರ್ನ ನೋಡ್ದೆ."

" ಏನು ! ? "

ಹೃದಯದ ಬಡಿತ ಅರೆಕ್ಷಣ ನಿಂತು ಹೋದರೂ ಆ ಉದ್ಗಾರದ ಪ್ರಶ್ನೆ ಅಮ್ಮಿಯ ಮುಖದಿಂದ ಹೊರಬಿತ್ತು.

" ಮಾತ್ನಾಡ್ಸೋಣ ಅಂತಿದ್ದೆ. ಅಷ್ಟಾಗಿ ನನಗೆ ಅವರ ಹೆಚ್ಚಿನ ಪರಿಚಯವೇನೂ ಇಲ್ಲ. ಅಲ್ದೆ, ನಿಮ್ಮನ್ನ ನೆನಸಿಕೊಂಡು ಸುಮ್ಮನಾದೆ."

" ಯಾಕೆ ಬಂದಿದ್ದಾರೆ ? "

" ಕೋರ್ಟಿನಲ್ಲಿದ್ರು. ಏನೋ ಕೋರ್ಟು ಕೆಲಸವಿರಬಹುದು."

' ಹ್ಯಾಗಿದ್ದಾರೆ ? '—ಎಂಬ ಪ್ರಶ್ನೆ ಅಮ್ಮಿಯ ನಾಲಗೆಯ ತುದಿವರೆಗೂ ಬಂತು. ಆದರೂ ಅದನ್ನು ಅಲ್ಲೆ ಕರಗಿಸಿಕೊಂಡಳು. ಅದನ್ನು ಊಹಿಸಿಯೊ ಊಹಿಸದೆಯೊ ಕೇಶವಮೂರ್ತಿ ಮಾತು ಮುಂದುವರಿಸಿದ :

" ತುಂಬಾ ಇಳಿದ್ಹೋಗಿದಾರೆ. ಕೂದಲೆಲ್ಲಾ ಬೆಳ್ಳಗಾಗಿದೆ."

" ಒಬ್ಬರೇ ಇದ್ರೇನು ? "

" ಇನ್ಯಾರೋ ಜತೇಲಿದ್ರು. ದೇವಸ್ಥಾನ್ದವರೋ ಮಠದವರೋ ಇರ್ಬೇಕು."

ನೂರು ನೆನಪುಗಳ ಯೋಚನೆಗಳ ತುಮುಲ ನಡೆಯಿತು ಅಮ್ಮಿಯ ಮೆದುಳಿನೊಳಗೆ. ಆ ತುಮುಲಕ್ಕೆ ತಾಳ ಬಡೆಯಿತು ಹೃದಯ.

" ಅವರ್ನ ನೋಡ್ತೀಯೇನು ನೀನು ? "

ಆ ಪ್ರಶ್ನೆ ಅಮ್ಮಿಗೆ ಕೇಳಿಸಲೇ ಇಲ್ಲ. " ಏನು ? " ಎಂದಳಾಕೆ ಯಾಂತ್ರಿಕವಾಗಿ.

" ನಾರಾಯಣರಾಯರ್ನ ನೋಡ್ತೀಯೇನು—ಅಂದೆ."

" ಇಲ್ಲವಪ್ಪ ! " ಎಂದಳು ಅಮ್ಮಿ.

ಅಲ್ಲಿಗೆ ಮಾತು ನಿಂತಿತು. ಆದರೆ ಅಮ್ಮಿಯ ಹೃದಯದ ಅಶಾಂತಿ ನಿಲ್ಲಲಿಲ್ಲ. ಮಕ್ಕಳು—ಮಕ್ಕಳಿಗೆ ಗೊತ್ತಾದರೆ ಎಷ್ಟೊಂದು ಸಂತೋಷವಾಗಲಿಕ್ಕಿಲ್ಲ ! ತಮ್ಮ ' ಅಪ್ಪಯ್ಯ' ನನ್ನು ಆ ಎಳೆಯರು ನೋಡಕೂಡದೆ ? ' ಅವರಿ ' ಗಾದರೂ ತನ್ನ ಮಕ್ಕಳನ್ನು ಅನಿರೀಕ್ಷಿತವಾಗಿ ಕಂಡು ಸಂತೋಷವಾಗದೆ? ಮಕ್ಕಳು ಅವರ ಪಾದಕ್ಕೆ ನಮಿಸುವಂತೆ ಮಾಡಿ, " ನೋಡಿದಿರಾ? ನಿಮ್ಮ ಪ್ರಸಾದ. ಹ್ಯಾಗೆ ಬೆಳಸಿದೀನಿ ! " ಎಂದು ಕೇಳಬೇಕೆಂಬ ಆಸೆ ಅಮ್ಮಿಗಾಯಿತು. ಆದರೆ ವಿವೇಕ ಹೇಳಿತು : " ಛುಚ್ಛ ! ಈಗ ಹ್ಯಾಗೋ ಒಂದು ರೀತಿಯಲ್ಲಿ ಜೀವನ ಸಾಗಿದೆ. ಮತ್ತೆ ಗಲಾಟೆ ಮಾಡಬೇಡ. ನಿನ್ನ ಕಾಲ ಮೇಲೆ ನೀನೇ ಕಲ್ಲು ಎತ್ತಿ ಹಾಕಬೇಡ. ಸುಮ್ಮನಿರು. ಅತ ಹಾಸನಕ್ಕೆ ಬಂದೇ ಇಲ್ಲವೆಂದು ಭಾವಿಸಿಕೋ."

ಹಾಗೆಯೇ, ನಾರಾಯಣರಾಯರು ಹಾಸನಕ್ಕೆ ಬಂದೇ ಇಲ್ಲವೆಂದು ಅಮ್ಮಿ ಭಾವಿಸಿಕೊಂಡಳು. ಎರಡು ದಿನ...ಮೂರು ದಿನ...

ಮಕ್ಕಳಿಬ್ಬರೂ ಕೇಳಿದರು :

" ಯಾಕಮ್ಮೀ ನಿಮ್ಮುಖ ಬಿಳಿಚಿಕೊಂಡಿದೆ ? ಮೈ ಚೆನ್ನಾಗಿಲ್ವೆ ಅಮ್ಮಿ ? "

" ಏನೂ ಇಲ್ಲ, ಚೆನ್ನಾಗಿದೀನಿ." ಎಂದಷ್ಟೆ ಅಮ್ಮಿ ಉತ್ತರವಿತ್ತಳು.

ನಾಲ್ಕನೇ ದಿನ ರಾತ್ರೆ ಕೇಶವಮೂರ್ತಿ ಬಂದು, " ವಿಚಾರಿಸ್ದೆ. ಅವರು ನಿನ್ನೇನೆ ಹೊರಟುಹೋದ್ರಂತೆ," ಎಂದ ಮೇಲೆ, ಅಮ್ಮಿಯ ಮನಸ್ಸು ಸ್ವಸ್ಥವಾಯಿತು.

ಸುಶೀಲೆಯ ಮದುವೆ, ರಾಜಣ್ಣನ ವಿದ್ಯಾಭ್ಯಾಸ, ಎರಡೂ-ತನ್ನ ಜವಾಬ್ದಾರಿಯೇ ಆಗಿತ್ತಲ್ಲವೆ ? ತನ್ನದೊಬ್ಬಳದೇ ಆಗಿತ್ತಲ್ಲವೆ ?

...ಆ ದಿನ ಸ್ನಾನವಾದ ಮೇಲೆ ಅಮ್ಮಿ, ಮಕ್ಕಳಿಬ್ಬರೂ ಶಾಲೆಗೆ ಹೋಗಿದ್ದ ಹೊತ್ತು, ಸುಶೀಲೆ ಉಪಯೋಗಿಸುತ್ತಿದ್ದ ಪುಟ್ಟ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡಳು.

—ಗಲ್ಲ ಇಳಿದಿತ್ತು. ಕಣ್ಣುಗಳು ಯಾವುದೋ ಆಳದಿಂದ ಇಣಿಕಿ ನೋಡುತ್ತಿದ್ದುವು. ತುಟಿಗಳು ಒಣಗಿದ್ದುವು. ತಲೆಗೂದಲು ಅರ್ಧಕ್ಕರ್ಧ ಬಿಳುಪಾಗಿತ್ತು. ತನ್ನ ಪ್ರತಿಬಿಂಬ ನೋಡಿ ನಗು ಬಂತು ಅಮ್ಮಿಗೆ...ಹೇಗಿದ್ದಳು ಬನಶಂಕರಿ ? ಹಿಂದೆ ಆ ತುಂಬುಕೆನ್ನೆಗಳನ್ನೆ ಗಲ್ಲವನ್ನೆ ನಾರಾಯಣರಾಯರು ಮುಟ್ಟಿದ್ದರಲ್ಲವೆ? ಈ ಬನಶಂಕರಿಯನ್ನೆ ನೋಡಿ, "ಸುಂದರಮ್ಮ ನಾನು. ಸುಂದರಿ ನೀವು" ಎಂದಿರಲಿಲ್ಲವೆ ಆ ಅಕ್ಕ ?

ತನ್ನ ಗುರುತುಗಳನ್ನಷ್ಟೆ ಹಿಂದೆ ಬಿಟ್ಟು ಕಾಲ ಮುಂದೋಡುತ್ತಿತ್ತು.

...ಮತ್ತೆಯೊಂದು ವರ್ಷವಾದ ಮೇಲೆ ಸುಶೀಲ ಶಾಲೆ ಬಿಟ್ಟಳು. ಆ ವರೆಗೂ ಅಣ್ಣನ ಸಹಪಾಠಿಯಾಗಿದ್ದ ತಂಗಿ ಮನೆಯಲ್ಲುಳಿದಳು. ಓದು ನಿಲ್ಲಿಸಿದಾಗ ಆ ಹುಡುಗಿಗೆ ದುಃಖವಾಯಿತು. ಆದರೆ ಬೇರೆ ಹಾದಿ ಇರಲಿಲ್ಲ. ಎದ್ದರೆ ಕುಳಿತರೆ 'ನಿಶ್ಶಕ್ತಿ' ಎನ್ನ ತೊಡಗಿದ ತಾಯಿಗೆ ನೆರವಾಗದೆ, ಬೇರೆ ಹಾದಿ ಇರಲಿಲ್ಲ.

ರಾಜಣ್ಣನೊಬ್ಬನೇ ಓದಿದ. ಬೇಗ ಬೇಗನೆ ಓದಿ, ಕೆಲಸಕ್ಕೆ ಸೇರಿ, ದುಡ್ಡು ಸಂಪಾದಿಸಿ, ತಾಯಿಯ ಸಂಕಷ್ಟವನ್ನು ದೂರಗೊಳಿಸಬೇಕೆಂಬ ದೃಢ ನಿರ್ಧಾರದಿಂದ ಓದಿದ. ಆತನೇನೂ ತರಗತಿಯ ಹಿರೇ ಮಣಿಯಾಗಿರಲಿಲ್ಲ. ಯಾರ ತಂಟೆಗೂ ಹೋಗದೇ ಇದ್ದ ಸರಳ ಸ್ವಭಾವದ ಸಾಮಾನ್ಯ ವಿದ್ಯಾರ್ಥಿ—ಆದರೆ ಈ ವಿದ್ಯಾರ್ಥಿ ಒಮ್ಮೆಯೂ ಫೇಲಾಗಲಿಲ್ಲ.

ಈಗೀಗ ರಾಜಣ್ಣ ಯಾವಾಗಲೂ ಹೇಳುತ್ತಿದ್ದ :

"ಇನ್ನೆರಡೇ ವರ್ಷವಮ್ಮಿ ಹೈಸ್ಕೂಲಲ್ಲಿ... ಮೆಟ್ರಿಕ್ ಆಗ್ಬಿಡುತ್ತೆ."

"ದೇವರು ಹಾಗೇ ಮಾಡಲಪ್ಪಾ ರಾಜಾ."

ಆ ವರ್ಷ ರಾಜಣ್ಣ ಪರೀಕ್ಷೆಗೆ ಕುಳಿತುಕೊಳ್ಳುವ ಹೊತ್ತಿಗೆ ಅಮ್ಮಿಯ ಬೆನ್ನಿನಲ್ಲೊಂದು ಕುರವೆದ್ದಿತು. 'ಏನೋ, ಹುಣ್ಣಾಗಿ ಒಡೆದು ಹೋಗುತ್ತೆ' ಎಂದು ಅಲಕ್ಷ್ಯ ಮಾಡಿದರೆ, ಬೆನ್ನೆಲ್ಲ ಊದಿಕೊಂಡು ಪರಿಸ್ಥಿತಿ ಉಲ್ಬಣವಾಯಿತು. ಸುಶೀಲ, ಅಣ್ಣನಿಗೆ ಯಾವ ತೊಂದರೆಯೂ ಆಗಬಾರದೆಂದು, ತಾನೊಬ್ಬಳೇ ತಾಯಿಯ ಆರೈಕೆ ಮಾಡಿದಳು.

ರಾಜಣ್ಣನ ಪರೀಕ್ಷೆ ಮುಗಿಯುವ ಹೊತ್ತಿಗೆ ಅಮ್ಮಿಯ ಪರಿಸ್ಥಿತಿ ಮತ್ತಷ್ಟು ಕೆಟ್ಟಿತು.

ಮಕ್ಕಳಷ್ಟೇ ಅಲ್ಲ. ಕೇಶವಮೂರ್ತಿಯೂ ಸಾವಿತ್ರಿಯೂ ಕಾತರರಾದರು.

ಇದೇ ಕೊನೆಯೇನೊ ಎಂಬ ಸಂದೇಹ ಅಮ್ಮಿಯನ್ನು ಬಾಧಿಸಿತು.

"ಸದ್ಯಃ ಈಗ ಕಾಹಿಲೆ ಬಿದ್ದೆ. ನಿನಗೂ ಬೇಸಗೆ ರಜಾ. ಒಂದು ತಿಂಗಳ ಹಿಂದೇನೇ ನಾನು ಮಲಕೊಂಡಿದ್ರೆ ಸುಮ್ಸುಮ್ನೆ ತೊಂದರೆಯಾಗ್ತಿತ್ತು, ಅಲ್ವಾ ರಾಜಣ್ಣ ?" ಎಂದು ಅಮ್ಮಿಗೆ ಮಗನನ್ನುದ್ದೇಶಿಸಿ ಅಂದಳು, ತನ್ನ ನೋವನ್ನು ಮರೆಯಲೆತ್ನಿಸುತ್ತಾ.

ರಾಜಣ್ಣ ತಾಯಿಗೆ ಧೈರ್ಯದ ಮಾತು ಹೇಳುತ್ತಿದ್ದ.

"ಹೆದರ್ಬೇಡ ಅಮ್ಮಿ. ಗುಣವಾಗುತ್ತೆ ಬೇಗ್ನೆ...ನಾವಿಬ್ರಿಲ್ವಾ ನೋಡ್ಕೊಳ್ಳೋಕೆ ?"

ನೋಡಿಕೊಳ್ಳಲು ಅವರಿಬ್ಬರು. ಔಷಧಿಗೆ ವೈದ್ಯರು. ಆ ಕಾಹಿಲೆ ಏನೆಂದು

ಹೇಳುವುದು ವೈದ್ಯರಿಂದಾಗಲಿಲ್ಲ. ಆದರೂ ಅವರು ತೇದು ಹಚ್ಚಲು, ಕುದಿಸಿ ಕುಡಿಯಲು, ಒಂದೇ ಸಮನೆ ಔಷಧಿ ಕೊಟ್ಟರು.

ತಾಯಿಗೆ ಧೈರ್ಯ ಹೇಳಿದ್ದ ರಾಜಣ್ಣನಿಗೆ ಸ್ವಲ್ಪ ಹೆದರಿಕೆಯಾಯಿತು. 'ಬಾಲ್ಯದಲ್ಲೇ ತಂದೆ ತಾಯಿಯರನ್ನು ಕಳೆದುಕೊಂಡಿದ್ದ ಅಂಥವರು ಇಂಥವರು—' ಎಂದು ಎಷ್ಟೊಂದು ಸಾರೆ ಆತ ಪುಸ್ತಕಗಳಲ್ಲಿ, ಕತೆ ಕಾದಂಬರಿಗಳಲ್ಲಿ ಓದಿರಲಿಲ್ಲ! ಅಂತಹ ನಾಯಕರ ಸಂಕಷ್ಟ ಗಳಿಗಾಗಿ ಎಷ್ಟೊಂದು ಸಾರೆ ಪರಿತಪಿಸಿರಲಿಲ್ಲ! ತಂಗಿಯ ಮತ್ತು ತನ್ನ ಗತಿಯೂ ಹೀಗಾಗು ವುದೇ ಎಂದು ಆತನಿಗೆ ಭಯವಾಯಿತು.

ಸುಶೀಲ, ತಾಯಿಗೆ ತಿಳಿಯದಂತೆ ಮರೆಯಲ್ಲಿ ಅಳುತ್ತಿದ್ದಳು. ರಾಜಣ್ಣ ತಾಯಿಗೆ ಕೇಳಿಸದಂತೆ ಪಿಸುದನಿಯಲ್ಲಿ ಆಕೆಯನ್ನು ಸಂತೈಸುತ್ತಿದ್ದ.

ದುಡಿಯುವ ಜೀವ ಮಲಗಿದ್ದರೂ ಮನೆಯಲ್ಲಿ ದುಡಿಮೆ ನಿಲ್ಲುವ ಹಾಗಿರಲಿಲ್ಲ. ಖಾಯಂ ಗಿರಾಕಿಗಳಿಗೆ ಹಪ್ಪಳ ಸಂಡಿಗೆ ತಲಪದೇ ಹೋದರೆ, ಬೇರೆ ಯಾರಾದರೊಬ್ಬ ಬಡ ಹೆಂಗಸಿನಿಂದ ಅವರು ಅದನ್ನು ಪಡೆದುಕೊಳ್ಳುವರಲ್ಲ? ಹಾಗಾದರೆ ಗಿರಾಕಿಗಳೂ ಕೈಬಿಟ್ಟು ಹೋಗು ವರಲ್ಲ? ಆ ಕಾರಣದಿಂದ, ತಾಯಿಯ ಕೆಲಸವನ್ನು ಮಗಳು ಮಾಡಿದಳು. ರಾಜಣ್ಣ ಕೊಳ್ಳುವವರ ಮನೆಗೆ ಆ ಸಾಮಗ್ರಿಗಳನ್ನು ಒಯ್ದು ಮುಟ್ಟಿಸಿದ. ಆ ಮನೆಗಳಲ್ಲಿ, ತಾಯಿಗೆ ಕಾಯಿಲೆ ಎಂದಾತ ಹೇಳಲಿಲ್ಲ. ಹಾಗೆ ಹೇಳಿದರೆ, ಆ ಹಪ್ಪಳ ಸಂಡಿಗೆಗಳ ರುಚಿಯಲ್ಲಿ ವ್ಯತ್ಯಾಸ ಕಂಡುಕೊಳ್ಳುವವರು ಕೊಡುವ ಹಣ ಕಡಿಮೆಯಾಗಬಹುದೆಂಬ ಭಯವಿತ್ತು ರಾಜಣ್ಣನಿಗೆ.

ಕೇಶವಮೂರ್ತಿಯೊಬ್ಬನನ್ನು ಕರೆದು ಅಮ್ಮಿ ಒಂದು ಮಾತೆಂದಳು :

" ನನ್ನದೊಂದು ಆಸೆ ಇದೆ. ನಡಸ್ಕೊಡ್ಬೇಕು."

ಅಮ್ಮಿಯ ಮಾತಿನಲ್ಲಿದ್ದ ಅಸಹಾಯತೆಯ ಧ್ವನಿಯನ್ನು ಗುರುತಿಸಿ ಕೇಶವಮೂರ್ತಿಗೆ ದುಃಖವಾಯಿತು.

" ಹೇಳು ಬನಶಂಕರಿ."

" ಈ ವಾರದೊಳಗೇ ಹ್ಯಾಗಾದರೂ ಮಾಡಿ ರಾಜಣ್ಣಂಗೊಂದು ಉಪನಯನ ಮಾಡಿಸ್ಬಿಡಿ."

" ಆಗಲಿ " ಎಂದು ಕೇಶವಮೂರ್ತಿ ಕಾರ್ಯೋನ್ಮುಖನಾದ. ಹತ್ತು ಹದಿನೈದು ರೂಪಾಯಿಗಳ ವೆಚ್ಚದಲ್ಲೇ ರಾಜಣ್ಣನಿಗೆ ಬ್ರಹ್ಮೋಪದೇಶ ಮಾಡಿಸಿದ್ದಾಯಿತು.

ಇನ್ನುಳಿದುದು ಸುಶೀಲೆಯ ಮದುವೆ. ಮಗನ ಕೊರಳಲ್ಲಿ ಯಜ್ಞೋಪವೀತ ಕಂಡು ಆತ ಸಂಧ್ಯಾವಂದನೆ ಮಾಡುತ್ತಿದ್ದುದನ್ನು ನೋಡಿದಾಗ ತಾಯಿಗೆ ಸಂತೋಷವಾಗುತ್ತಿದ್ದರೂ ಮಗಳ ಕೊರಳಿಗೆ ಮಾಂಗಲ್ಯಸರ ಬೀಳಲಿಲ್ಲವೆಂದು ಅವಳಿಗೆ ದುಃಖವಾಗುತ್ತಿತ್ತು.

ಸುಶೀಲ ಅಳುತ್ತಳುತ್ತ ಅಂದಿದ್ದಳು :

" ನಮ್ಮ ಅಪ್ಪಯ್ಯ ಈಗಲಾದರೂ ಬರೊಲ್ವೆ ಅಮ್ಮಿ ?"

ಆ ಅಪ್ಪಯ್ಯನ ಆಸೆ ಬಿಟ್ಟುಬಿಡಬೇಕೆಂದು ಮಕ್ಕಳಿಗೆ ತಾನು ಹೇಳಬೇಕು. ಎಂದಾದರೂ ಮುಂದೆ ಹೇಳೋಣವೆಂದು ದಿನ ತಳ್ಳುತ್ತ ಬಂದಿದ್ದಳಲ್ಲ? ಈಗ ಅದನ್ನು ಹೇಳಲೇ ಬೇಕು....

ಎರಡು ಮೂರು ಸಾರೆ ಅಮ್ಮಿ ಅದಕ್ಕಾಗಿ ಸಿದ್ಧತೆ ಮಾಡಿಕೊಂಡಳು. ಆದರೆ ಅವ ರಿಬ್ಬರೂ ಬಳಿಯಲ್ಲಿ ಕುಳಿತಿದ್ದರೆ ಮಾತೇ ಹೊರಡುತ್ತಿರಲಿಲ್ಲ.

ಮಗ್ಗುಲಿಗೆ ಒರಗಿಕೊಂಡು, ಎದುರಿಗಿದ್ದ ಮಕ್ಕಳಿಬ್ಬರನ್ನೂ ನೋಡುತ್ತ, ಆ ಯೋಚನೆಯಲ್ಲಿ ಇದ್ದ ಅಮ್ಮಿಗೆ ಅಳು ತಡೆಯಲಾರದೆ ಹೋಯಿತು.

"ಅಳಬೇಡವಮ್ಮಿ...ನಾವೂ ಅಳ್ತೀವಿ ನೋಡು...ಅಮ್ಮಿ...!"

ಇಲ್ಲದ ಧೈರ್ಯವನ್ನು ತಂದುಕೊಂಡು ಅಮ್ಮಿ ಅಂದೇ ಬಿಟ್ಟಳು:

"ರಾಜಾ, ಸುಶೀ,...ನಾನು ನಿಮಗೊಂದು ಸುಳ್ಳು ಹೇಳಿದ್ದೆ..."

ಮಕ್ಕಳಿಗೇನೂ ಅರ್ಥವಾಗಲಿಲ್ಲ.

"ನಿಮ್ಮ ತಂದೆ ತೀರ್ಥಯಾತ್ರೆ ಹೋಗಿದಾರೆ ಅಂದಿದ್ದೆ..."

"ಹೋಗಿಲ್ಲವೇ ಅಮ್ಮಿ ?"

"ಇಲ್ಲ ಚಿನ್ನಾ. ಅವರು ಬಾಳೆಮಣ್ಣೂರಲ್ಲಿದಾರೆ...ದೊಡ್ಡವರು...ದೇವಸ್ಥಾನದ ಫಾರುಪತ್ಯಗಾರರು..."

"ಓ! ಚಿಕ್ಕಮಗಳೂರಿನ ಆಚೆಗೊಂದು ಬಾಳೆಮಣ್ಣೂರಿದೆ, ಅದೇನಾ ಅಮ್ಮಿ ?"

"ಹೂಂ ಮಗು...ಅವರು ನಮ್ಮನ್ನ ಬಿಟ್ಬಿಟ್ರು..."

ರಾಜಣ್ಣನ ಮುಖ ಗಂಭೀರವಾಯಿತು.

"ಅಯ್ಯೆ! ಅದ್ಯಾಕೊ ?"

"ಅವರಿಗೆ ಬೇರೆ ಹೆಂಡತಿ ಇದಾರೆ ರಾಜ... ಹೆಂಡತಿ ಮತ್ತು ಮಕ್ಕಳು."

ಸುಶೀಲ ಕೇಳಿದಳು:

"ಎರಡ್ನೇ ಮದುವೆ ಮಾಡ್ಕೊಂಡ್ನೇನು ನಮ್ಮಪ್ಪ ?"

ಅಮ್ಮಿ ಉತ್ತರ ಕೊಡದೆಯೇ ಬಿಕ್ಕಿ ಬಿಕ್ಕಿ ಅತ್ತಳು. ಆ ಅಳುವಿನ ನಡುವೆ, ಮಕ್ಕಳೆದುರು ಅಕ್ಷಮ್ಯ ತಪ್ಪನ್ನೊಪ್ಪಿಕೊಳ್ಳುವ ಹಾಗೆ, ಅವಳೆಂದಳು:

"...ನಾನು...ನಿಮ್ಮಪ್ಪನ್ನ...ಮದ್ವೆ ಮಾಡ್ಕೊಂಡಿರ್ಲಿಲ್ಲ...!"

ಇದೊಂದು ಒಗಟಾಗಿ ತೋರಿತು ಸುಶೀಲೆಗೆ...ತಾಯಿಯ ಮಾತಿನ ಅರ್ಥವೇನು? ತಮಗೆ ತಿಳಿಯದಂತಹ ವಿಷಯವೇನಾಗಿತ್ತು, ಆಕೆಯ ಬದುಕಿನಲ್ಲಿ?

ಹುಡುಗ ರಾಜಣ್ಣ ಉಗುಳುನುಂಗುತ್ತ ಅಂದ:

"ಅಳಬೇಡವಮ್ಮಾ...ಅಪ್ಪ ಬರದಿದ್ರೆ ಅಷ್ಟೇ ಹೋಯಿತು. ಅದಕ್ಕೆಲ್ಲಾ ಅಳ್ಬೇಕೇನು? ನೀನು ಸುಮ್ನಿರು."

ಒಂದಿಷ್ಟು ಕಣ್ಣೀರು ಹರಿದ ಮೇಲೆ, ಮಕ್ಕಳ ದೃಷ್ಟಿಯಲ್ಲಿ ತಾನು ಅಪರಾಧಿಯಲ್ಲ ಎಂಬುದು ಮನವರಿಕೆಯಾದ ಮೇಲೆ, ಅಮ್ಮಿಗೆ ಮಾತು ಸುಲಭವಾಯಿತು.

ಅಮ್ಮಿ ತನ್ನ ಬಾಲ್ಯದ, ಯೌವನದ, ಕತೆ ಹೇಳಿದಳು. ಸಂಜೆಯಾದರೂ ದೀಪ ಹಚ್ಚದೆಯೇ ಕತ್ತಲಲ್ಲೇ ಕತೆ ಸಾಗಿತು. ತನಗೆ ತಿಳಿವಳಿಕೆ ಬಂದಂದಿನಿಂದ, ತನ್ನ ಮಕ್ಕಳಿಗೆ ತಿಳಿವಳಿಕೆ ಬಂದ ಅವಧಿಯವರೆಗೆ...ತಾನು ಬಾಲ ವಿಧವೆಯಾದುದು—ಅಣ್ಣನ ಸಾವು—ಅಜ್ಜಿಯೊಡನೆ ಹಳ್ಳಿ ಬಿಟ್ಟುದು—ಬಾಳೆಮಣ್ಣೂರಲ್ಲಿ ಅನುಭವಿಸಿದ ಹಿಂಸೆ—ಅಜ್ಜಿಯ ಮರಣದ ಬಳಿಕ ನಾರಾಯಣರಾಯರು ನೀಡಿದ ರಕ್ಷಣೆ—ಆಕೆಗೆರಡು ಬಂಗಾರದಂತಹ ಮಕ್ಕಳು ದೊರೆತುದು—ಘಟಶ್ರಾದ್ಧದ ಮಾತು—ಅದರ ಬದಲು ನಡೆದ ಬಹಿಷ್ಕಾರ—ಹಾಸನಕ್ಕೆ ಬಂದು ನಿಜವಾದ ಕಥೆಯನ್ನು ಜನರಿಂದ ಮರೆಸಿ ಜೀವನ ನಡೆಸಿದ್ದು...

ಸುಶೀಲ, ತಾಯಿಯ ಮೊಣಕಾಲಿನ ಮೇಲೆ ತಲೆಯಿಟ್ಟು, ತನ್ನ ಕಣ್ಣೀರಿನಿಂದ ಅಮ್ಮಿಯ ಸೀರೆಯನ್ನು ತೋಯಿಸುತ್ತ, ತಾಯಿಯ ಕತೆಗೆ ಕಿವಿಗೊಟ್ಟಳು. ರಾಜ ಕಲ್ಲಾಗಿ ಕುಳಿತ, ತಾಯಿಯ ಪ್ರತಿಯೊಂದು ಮಾತನ್ನೂ ತನ್ನೊಳಗಿನ ಆಳ ಆಳಕ್ಕೆ ಇಳಿಸಿಕೊಂಡ.

ಕತೆ ಮುಗಿದು ಮೌನ ನೆಲೆಸಿತು.

ರಾಜ ವಯಸ್ಸಿಗೆ ಮೀರಿದ ಗಾಂಭೀರ್ಯದಿಂದ ಎದ್ದು ಮೆಲ್ಲನೆ ಚಲಿಸುತ್ತ ಕಡ್ಡಿ ಕೊರೆದು ದೀಪ ಉರಿಸಿದ.

ನಿಜಸ್ಥಿತಿಯನ್ನು ತಿಳಿದು ಮಕ್ಕಳ ಮೇಲಾಗಿರುವ ಪರಿಣಾಮಃವೇನೆಂಬುದನ್ನು ನೋಡಲು ಅಮ್ಮಿಗೆ ಆತುರ. ಮಕ್ಕಳ ಮೃದು ಹೃದಯ ಮುರಿದು ಹೋಗದಿರಲೆಂಬುದೊಂದೇ ಅವಳ ಹಾರೈಕೆ.

ಆ ಹೃದಯಗಳು ಮುರಿದಿರಲಿಲ್ಲ; ಬದಲು ಉಕ್ಕಾಗಿದ್ದುವು.

ರಾಜ ತಾಯಿಯ ತಲೆಯ ಬಳಿ ಕುಳಿತು, ಆಕೆಯ ಕೆದರಿದ ಕೂದಲನ್ನು ನೇವರಿಸಿದ. ತಾಯಿಯ ಹಣೆಗೆ ಮುದ್ದಿಟ್ಟು, "ಅಮ್ಮೀ! ನನ್ನಮ್ಮೀ!" ಎಂದ.

ಅಣ್ಣನಿಗಿಂತ ತಾನು ವಾತ್ಸಲ್ಯದಲ್ಲಿ ಎಳ್ಳಷ್ಟೂ ಕಡಿಮೆ ಇಲ್ಲವೆನ್ನುವಂತೆ ಸುಶೀಲ, ತಾಯಿಯ ಮೊಣಕಾಲುಗಳೆರಡನ್ನೂ ಬಲವಾಗಿ ಅಪ್ಪಿಕೊಂಡಳು.

ತಾನು ಇಷ್ಟು ದಿನ ಬದುಕಿದ್ದು ಸಾರ್ಥಕವಾಯಿತೆನಿಸಿತು ಅಮ್ಮಿಗೆ.

...ರಾಜಣ್ಣ ಹೇಳಿದ:

"ಒಬ್ಬರು ಹೊಸ ಡಾಕ್ಟರು ಬಂದಿದಾರೆ ಅಮ್ಮಿ. ಅವರ ಔಷಧಿ ತಗೋಬೇಕು ನೀನು. ಖಂಡಿತ ಗುಣವಾಗುತ್ತೆ."

"ಸೀಮೆ ಔಷಧೀನೇನೊ? ನಂಗ್ಬೇಡ ರಾಜಾ. ಅದಕ್ಕೆ ಏನೇನು ಹಾಕಿರ್ತಾರೊ?"

"ಅಯ್ಯೊ! ಅದಕ್ಕೇನ್ಹಾಕ್ತಾರಮ್ಮೀ? ಒಳ್ಳೊಳ್ಳೇ ಬ್ರಾಹ್ಮಣರೇ ಕುಡೀತಾರಂತೆ."

ಒಳ್ಳೊಳ್ಳೇ ಬ್ರಾಹ್ಮಣರು...ಸೂಕ್ಷ್ಮವ್ಯಂಗ್ಯವಿತ್ತು ಆ ಮಾತಿನಲ್ಲಿ...ತನ್ನ ಮಗನೇ ಅಲ್ಲವೆ ಹಾಗೆ ಅಂದದ್ದು?

"ಏನೋಪ್ಪಾ ರಾಜ, ನಿನ್ನಿಷ್ಟ..."

ಕೇಶವಮೂರ್ತಿ ಮನೆಗೆ ಬರುವುದಕ್ಕೆ ಮುಂಚೆಯೇ, ರಾಜ ಆ ಹೊಸ ಡಾಕ್ಟರನ್ನು ಕರೆದುಕೊಂಡು ಬಂದ. ಆ ಯುವಕ ಅಮ್ಮಿಯನ್ನು ನಿಧಾನವಾಗಿ ಪರೀಕ್ಷಿಸಿ ನೋಡಿದರು. ಮನೆಯ ಸ್ಥಿತಿಗತಿಯನ್ನು ಸೂಕ್ಷ್ಮವಾಗಿ ಊಹಿಸಿಕೊಂಡರು. ರಾಜನನ್ನು ತಮ್ಮ ಔಷಧಾಲಯಕ್ಕೆ ಕರೆದುಕೊಂಡು ಹೋಗಿ ಲೇಪನಕ್ಕೆ ಮುಲಾಮನ್ನೂ ಸೇವಿಸಲು ಔಷಧಿಯನ್ನೂ ನಿದ್ದೆ ಬರಲು ಮಾತ್ರೆಗಳನ್ನೂ ಕೊಟ್ಟರು. ಆ ಔಷಧಿಗಳನ್ನು ನೋಡುತ್ತಾ, ತಾಯಿಗೆ ಗುಣವಾಗಿಯೇ ಬಿಟ್ಟಿತೇನೊ ಎನ್ನುವಷ್ಟು, ರಾಜಣ್ಣ ಸಂತುಷ್ಟನಾದ. ಕೃತಜ್ಞತೆಯಿಂದ ಮಾತೇ ಹೊರಡಲಿಲ್ಲ ಆತನಿಗೆ. ಡಾಕ್ಟರರ ಮೇಜಿನ ಮೇಲೆ ಆತ ಎರಡು ರೂಪಾಯಿಗಳನ್ನಿಟ್ಟ.

ಆ ಹೊಸ ಡಾಕ್ಟರು ರೂಪಾಯಿಗಳನ್ನು ರಾಜಣ್ಣನ ಜೇಬಿಗೇ ವಾಪಸು ಹಾಕಿದರು. ಮೃದುವಾಗಿ ರಾಜಣ್ಣನ ಭುಜ ತಟ್ಟಿದರು.

"ಮೊದಲು ನಿಮ್ಮ ತಾಯಿಗೆ ಗುಣವಾಗಲಪ್ಪ...ಆಕೆ ಎದ್ದು ಓಡಾಡೋ

ಹಾಗಾಗಲಿ..."

ಶಾಲೆಯಲ್ಲಿ ಉಪಾಧ್ಯಾಯರೊಬ್ಬರು 'ಥ್ಯಾಂಕ್ಸ್' ಎಂಬ ಪದವನ್ನು ಬಳಕೆಗೆ ತಂದಿದ್ದರು. ಇಲ್ಲಿ ಆ ಪದವನ್ನು ಉಪಯೋಗಿಸಬಹುದಾಗಿತ್ತು. ಆದರೆ ರಾಜಣ್ಣನ ಗಂಟಲು ಕಟ್ಟಿಹೋಗಿತ್ತು.

ಔಷಧಿಗಳೊಡನೆ ರಾಜ ಓಡುತ್ತೋಡುತ್ತ ಮನೆಗೆ ಬಂದ.

ಮಕ್ಕಳ ಆ ಸಂಭ್ರಮ ಅಮ್ಮಿಯ ಪಾಲಿಗೆ ಆಪ್ಯಾಯನಕರವಾಯಿತು. ಅಮ್ಮಿ ತಮ್ಮ ಜೀವನದ ನಿಜಪರಿಚಯ ಮಾಡಿಕೊಟ್ಟಂದಿನಿಂದ, ಆ ಮೂರು ಜೀವಗಳೂ ಹಿಂದಿಗಿಂತ ಹೆಚ್ಚು ಆತ್ಮೀಯವಾಗಿ ಬೆಸುಗೆಗೊಂಡಿದ್ದುವು. ಮೌನವೇ ಮಾತಾಗಿತ್ತು ಈಗ ಅವರೊಳಗೆ; ಕಣ್ಣಿನ ಬರಿಯ ನೋಟವೇ ಸಂದೇಶ...

ಅಮ್ಮಿಗೆ ಬದುಕಿ ಉಳಿಯುವ ಆಸೆಯಾಯಿತು. ಆ ಸುಖ ಸೌಖ್ಯದ ಸೌಭಾಗ್ಯವನ್ನು ಕಳೆದುಕೊಂಡು ಸಾಯುವುದು ಸಾಧ್ಯವೆನಿಸಲಿಲ್ಲ. ತನ್ನೆರಡು ಅಂಶಗಳೂ ದೊಡ್ಡವಾಗಿ ಬೆಳೆಯುವುದನ್ನು, ತಮಗಾದ ಅನ್ಯಾಯಕ್ಕೆ ಪ್ರತಿಯಾಗಿ ಮೆರೆಯುವುದನ್ನು, ತಾನು ನೋಡ ಬೇಡವೆ? ಎಳೆಯರು ಹಾಗೆ ಮಾರ್ಪಡಲು ತಾನು ನೆರವಾಗಬೇಡವೆ?

ಔಷಧಿ ಅಮ್ಮಿಯ ಮೇಲೆ ಒಳ್ಳೆಯ ಪರಿಣಾಮ ಮಾಡಿತು. ರಾಜಣ್ಣನ ರಜೆ ಮುಗಿದು ಶಾಲೆ ಆರಂಭವಾಗುವ ಹೊತ್ತಿಗೆ ಅಮ್ಮಿ ಎದ್ದು ಕುಳಿತಳು. ಮಳೆಗಾಲಕ್ಕೆ ಮುಂಚೆಯೇ ಬೆನ್ನು ನೋವು ಪೂರ್ತಿ ವಾಸಿಯಾಯಿತು.

ಆಕೆ ಸಂಕಟದಿಂದ ಸಾಯಲಿಲ್ಲ. ಮಕ್ಕಳಿಗಾಗಿ ಬದುಕಿದಳು.

ಆ ಬಡ ಕುಟುಂಬ ಡಾಕ್ಟರನ್ನು ಮರೆಯಲಿಲ್ಲ.

ಒಂದು ದಿನ ರಾಜಣ್ಣ, ಹೊಸದೊಂದು ಬುಟ್ಟಿ ತುಂಬ ಹಪ್ಪಳ ಸಂಡಿಗೆಯನ್ನೂ ಒಂದು ಪುಟ್ಟ ಭರಣಿ ತುಂಬ ಚಟ್ನಿಪುಡಿಯನ್ನೂ ಹೊತ್ತುಕೊಂಡು, ಸುಶೀಲೆಯನ್ನು ಜತೆ ಯಲ್ಲೇ ಕರೆದುಕೊಂಡು ಡಾಕ್ಟರರ ಮನೆಗೆ ಹೋದ. ಅದೇ ಆಗ ಹೊಸತಾಗಿ ಗಂಡನ ಮನೆಗೆ ಬಂದಿದ್ದ ಡಾಕ್ಟರರ ಹೆಂಡತಿ, ಬುಟ್ಟಿ, ಭರಣಿಗಳನ್ನು ಒಳಗಿಟ್ಟು, ಬಂದವರಿಬ್ಬರಿಗೂ ಕಾಫಿ ಕೊಟ್ಟರು. ರಾಜಣ್ಣ ಮುಂದಿಟ್ಟ ರೂಪಾಯಿಯ ಐದು ನಾಣ್ಯಗಳನ್ನು ಮಾತ್ರ ಡಾಕ್ಟರು ಮುಟ್ಟಲಿಲ್ಲ.

"ಸ್ಕೂಲಿಗೆ ಸರಿಯಾಗಿ ಹೋಗ್ತಾ ಇದ್ದೀ ತಾನೆ? ಮುಂದೆ ನೀನೂ ಡಾಕ್ಟ್ರಾಗ ಬಹುದು," ಎಂದರು ಆ ಡಾಕ್ಟರು, ಸಲಿಗೆಯಿಂದ ರಾಜಣ್ಣನ ಭುಜ ಕುಲುಕುತ್ತ.

ಅವರು ಮೆಲ್ಲನೆ ರಾಜಣ್ಣನ ಜುಟ್ಟನ್ನು ಮುಟ್ಟಿ, "ಇದೇನಪ್ಪಾ ಇದು? ಛೆ! ಛೆ! ಗಂಡಸರಿಗೆ ಜುಟ್ಟಿದ್ರೆ ಜ್ವರ ಬರುತ್ತೆ. ತೆಗೆದ್ಹಾಕ್ಬಿಟ್ಟು ನನ್ನ ಹಾಗೆ ಕ್ರಾಪು ಬಿಡಿಸ್ಕೊ" ಎಂದರು, ತಮ್ಮ ಹೆಂಡತಿಯನ್ನು ನೋಡಿ ನಗುತ್ತ.

ರಾಜಣ್ಣನಿಗೆ ನಾಚಿಕೆಯಾಯ್ತು. "ಬರ್ತೀನಿ ಸಾರ್" ಎನ್ನುತ್ತ ಡಾಕ್ಟರಿಗೆ ಕೈಮುಗಿದು, ತಂಗಿಯೊಡನೆ ಬೇಗಬೇಗನೆ ಅಲ್ಲಿಂದ ಹೊರಬಿದ್ದ. ಈ ಸಾರೆಯೂ "ಥ್ಯಾಂಕ್ಸ್" ಎನ್ನಲು ಆತನಿಗೆ ನೆನಪಾಗಲಿಲ್ಲ.

ಬೀದಿ ನಡೆಯುತ್ತಿದ್ದಾಗ ಸುಶೀಲ, ಪಕ್ಕದಲ್ಲಿದ್ದವಳು, ಅಣ್ಣನನ್ನೇ ನೋಡುತ್ತಿದ್ದಳು.

ಮನೆ ಸಮೀಪಿಸುತ್ತಿದ್ದಂತೆ, ರಾಜಣ್ಣ ಸ್ವರವೇರಿಸುತ್ತ "ಅದೇನೇ ಹಾಗೆ ನನ್ನನ್ನು

ನೋಡ್ತಿದೀಯಾ ? " ಎಂದ.

"ನಿನ್ನ ಎಲ್ನೋಡ್ದೆ ? ಜುಟ್ನ ನೋಡ್ತಾ ಇದ್ದೆ ಅಷ್ಟೆ !" ಎಂದಳು ಸುಶೀಲ ನಗುತ್ತಾ.

ಅಣ್ಣ ಹೊಡೆಯಲು ಕೈ ಎತ್ತುವುದರೊಳಗಾಗಿ, "ಅಮ್ಮನಿಗೆ ಹೇಳ್ತೀನಿ," ಎನ್ನುತ್ತ ಸುಶೀಲ ಮನೆಯೊಳಕ್ಕೆ ಓಡಿಹೋದಳು.

ಡಾಕ್ಟರಲ್ಲಿಂದ ಹಿಂತಿರುಗಿ ಮಕ್ಕಳಾಡಿದ ಮಾತು ಅಮ್ಮಿಗೆ ತಮಾಷೆಯಾಗಿ ತೋರಿತು. ರಾಜಣ್ಣ ಬೆಳೆದು ದೊಡ್ಡವನಾಗುವ ಚಿತ್ರ. ಎತ್ತರದ ನಿಲುವು, ಕೆಂಪು ಕೆಂಪನೆಯ ಮುಖ, ಕುಡಿಮೀಸೆ; ಭದ್ರಾ ಸೇತುವೆ ಕಟ್ಟಿದಾಗ ಎಂಜಿನಿಯರು ಬಂದಿದ್ದರಲ್ಲ, ಅದು ತೊಟ್ಟು ಕೊಂಡಿದ್ದರಲ್ಲಾ—ಅದೇನೋ ಅಂತಾರಲ್ಲಾ—ಸೂಟು ; ತಲೆಯ ಮೇಲೆ ಜರೀ ಪೇಟ; ಅದರೊಳಗೆ ಪಿಳ್ಳಂಜುಟ್ಟು—ಜುಟ್ಟು ಮೇಲು—ಇಲ್ಲವೆ ಕ್ರಾಪು...ಡಾಕ್ಟರೊ ವಕೀಲರೊ ಅಮಲ್ದಾರರೊ, ಅಂತೂ ದೊಡ್ಡದೊಂದು ಕೆಲಸ...

—ವಯಸ್ಸಾಗುತ್ತಿರುವ ತನ್ನ ಈ ಕಣ್ಣುಗಳಿಂದಲೇ ತಾನದನ್ನು ನೋಡುವಂತಾದರೆ...

ರಾಜಣ್ಣನೀಗ ಹೈಸ್ಕೂಲು ಕೊನೆಯ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿ. ಅವನ ಸಾಲಿನವರು, ಶಾಲೆಯ ಇತರ ಹುಡುಗರಿಗೆಲ್ಲ ಹಿರಿಯಣ್ಣಂದಿರು. ಅವರು ಹಾಕಿದ್ದೇ ಆ ಶಾಲೆಗೆ ಮೇಲ್ಪಂಗ್ತಿ.

ಹೊಸತಾಗಿ ಅಲ್ಲಿಗೆ ವರ್ಗವಾಗಿ ಬಂದಿದ್ದ ಯುವಕ ಉಪಾಧ್ಯಾಯರೊಬ್ಬರ ಸೊಗಸಾದ ಕ್ರಾಪು ಶಾಲೆಯ ವಿದ್ಯಾರ್ಥಿಗಳಲ್ಲಿ ಜುಟ್ಟು ಕತ್ತರಿಸುವ ಚಳವಳಿಯನ್ನೇ ಪ್ರಚೋದಿಸಿತು.

ಅಣ್ಣನ ಪರ ವಕೀಲಿ ವಹಿಸಿ ಸುಶೀಲ ತಾಯಿಯನ್ನು ಕೇಳಿದಳು :

"ರಾಜಣ್ಣ ಕ್ರಾಪು ಬಿಡಿಸ್ಕೊಳ್ಲಿ, ಆಗ್ದೇನಮ್ಮೀ ? ಅವನ ಕ್ಲಾಸಲ್ಲೆಲ್ರೂ ಬಿಡಿ ಸ್ಕೊಂಡ್ರಂತೆ."

ಮಗಳು ಬಹಳ ಕಾಡಿದ ಮೇಲೆ ತಾಯಿ ಒಪ್ಪಿದಳು.

ಮಗನನ್ನು ಕರೆದು—

"ಶಾಸ್ತ್ರಕ್ಕೆ ಒಂದಿಷ್ಟು ಪಿಳ್ಳಂಜುಟ್ಟು ಇರಿಸ್ಕೊಂಡು ಮುಂದ್ಗಡೆ ಕ್ರಾಪು ಬಿಡಿಸ್ಕೊಳ್ಳೋ..." ಎಂದಳು.

ರಾಜಣ್ಣ "ಹೂಂ" ಎಂದ. ಆದರೆ ಅಣ್ಣ ತಂಗಿ ಒಬ್ಬರನ್ನೊಬ್ಬರು ನೋಡಿ ಮುಸಿಮುಸಿ ನಕ್ಕರು. ತಮ್ಮಿಬ್ಬರ ನಿರ್ಧಾರ ಬೇರೆಯೇ ಎಂಬುದನ್ನು ಆ ಅಣ್ಣ-ತಂಗಿ ತಾಯಿಗೆ ಹೇಳಲಿಲ್ಲ.

ರಾಜಣ್ಣ ಪೂರ್ತಿ ಜುಟ್ಟು ಕತ್ತರಿಸಿಕೊಂಡು ಬಂದಾಗ ಅಮ್ಮಿಗೆ ಸ್ವಲ್ಪ ಕೆಡುಕೆನಿಸಿತು. ಆದರೂ ಅದನ್ನು ತೋರಿಸಿಕೊಳ್ಳದೆ, ಮಗನಿಗೆ ನೀರು ಎರೆದು ಸ್ನಾನ ಮಾಡಿಸಿ, ಅದೇ ವರ್ಷ ಕೊಂಡು ಇಟ್ಟಿದ್ದ ದಂತದ ಹೊಸ ಬಾಚಣಿಗೆಯಿಂದ ಮಗನ ಮೊದಲ ಕ್ರಾಪನ್ನು ತಪ್ಪುತಪ್ಪಾಗಿ ತಾನೇ ಬಿಡಿಸಿದಳು.

ಹಳೆಯ ಕಾಲದ ತಾಯಿಗೆ ಏನೂ ತಿಳಿಯದೆಂಬಂತೆ, ಆಧುನಿಕಳಾದ ಮಗಳು ತಾಯಿ ಬಿಡಿಸಿದ್ದ ಕ್ರಾಪನ್ನು ತಾನು ತಿದ್ದಿದಳು.

ಅವೆರಡೂ ಸರಿಹೋಗಲಿಲ್ಲವೆನ್ನುವಂತೆ ಸ್ವತಃ ರಾಜಣ್ಣನೇ ತನ್ನ ಕ್ರಾಪಿನ ಮೇಲೆ ಹಣಿಗೆಯೋಡಿಸಿದ.

ಶಾಲೆಯ ಉಪಾಧ್ಯಾಯರು ತರಗತಿಯಲ್ಲೊಮ್ಮೆ ಕೇಳಿದರು :

"ಈ ವರ್ಷ ಪಾಸಾದ್ಮೇಲೆ ಕಾಲೇಜಿಗೆ ಹೋಗೋರು ಎಷ್ಟು ಜನ ಇದೀರ?—ಕೈ ಎತ್ತಿ."

ದುಡ್ಡಿನವರಾಗಿದ್ದ ನಾಲ್ಕೇ ನಾಲ್ಕು ಜನ ಕೈಯೆತ್ತಿದರು.

"ಹಾಗಾದ್ರೆ ನೀವು ಪಾಸಾಗ್ಬೇಕು ; ಚೆನ್ನಾಗಿ ಓದಿ!" ಎಂದರು ಉಪಾಧ್ಯಾಯರು, ನಗುತ್ತ.

ರಾಜಣ್ಣ ಏನೂ ತೋಚದೆ ಸುಮ್ಮನೆ ಕುಳಿತ.

ಸಂಜೆ ಮನೆಗೆ ಹೊರಟಾಗ ಅದೇ ಉಪಾಧ್ಯಾಯರು ರಾಜಣ್ಣನನ್ನು ಕೇಳಿದರು :

"ಯಾಕೆ ರಾಜಣ್ಣ, ಮುಂದೆ ಓದೋಕೆ ಇಷ್ಟ ಇಲ್ವೇನು ?"

"ಇದೆ ಸಾರ್, ಆದರೆ ನಾವು ಬಡವರು—"

"ಏನಾದರೂ ಮಾಡ್ಬೇಕಪ್ಪ."

ಏನನ್ನು ?—ಅದು ರಾಜಣ್ಣನಿಗೆ ತಿಳಿದಿರಲಿಲ್ಲ.

ಕೇಶವಮೂರ್ತಿಯೂ ರಾಜಣ್ಣನ ತಾಯಿಯೊಡನೆ ಅದನ್ನೇ ಹೇಳಿದ :

"ಮುಂದಕ್ಕೆ ಓದಿಸ್ಬೇಕಮ್ಮ. ಹಣಕ್ಕಾಗಿ ಏನಾದರೂ ಮಾಡ್ಬೇಕು."

ಏನನ್ನು ?—ಅದು ಅಮ್ಮಿಗೆ ತಿಳಿದಿರಲಿಲ್ಲ.

ರಾಜಣ್ಣ ಪರೀಕ್ಷೆಗೆ ಕುಳಿತುದಾಯಿತು. ಕೊನೆಯ ಘಳಿಗೆಯವರೆಗೂ ತಾನೂ ಉತ್ತೀರ್ಣನಾಗಲಾರೆನೆಂದು ಸಂಕಟಪಟ್ಟುಕೊಳ್ಳುತಿದ್ದ ರಾಜಣ್ಣ ಪ್ರಶ್ನೆ ಪತ್ರಿಕೆಗಳು ಕೈಗೆ ಬಂದೊಡನೆಯೇ ಪ್ರತಿ ವಿಷಯದಲ್ಲೂ ಚೆನ್ನಾಗಿಯೇ ಉತ್ತರಿಸಿದ.

...ಈಗ ಊರೂರಿಂದ ಧೂಳೆಬ್ಬಿಸುತ್ತ ಬರುತ್ತಿದ್ದ ಮೋಟಾರು ಗಾಡಿಯಲ್ಲಿ ಕುಳಿತು ರಾಮಶಾಸ್ತ್ರಿಯೊಂದು ಸಂಜೆ ಹಾಸನಕ್ಕೆ ಬಂದಿಳಿದ.

"ನೂರು ವರ್ಷ ಆಯುಸ್ಸು ಅಣ್ಣ ನಿಮಗೆ. ಈ ಒಂದು ವಾರವೆಲ್ಲಾ ನಿಮ್ಮ ಯೋಚ್ನೇನೆ ಮಾಡ್ತಿದ್ದೆ."

"ಯಾಕೆ—ಆಯುಸ್ಸು ನೂರಕ್ಕಿಂತ ಜಾಸ್ತಿ ಸಾಧ್ಯವೇ ಇಲ್ವೇನು ?"

"ಅಕ್ಕ ಚೆನ್ನಾಗಿದಾರಾ ? ಮಗಳ ಮದುವೆ ಯಾವತ್ತು ?"

"ನೋಡಮ್ಮ ಬನಶಂಕರಿ. ನನ್ನನ್ನು ಬಯ್ಬೇಡ. ಅಕೆ ಕಾಗ್ದ ಬರೀತೀನಿ ಅಂದಿದ್ಲು. ಆದರೆ ಹೊತ್ತಿಗೆ ಸರಿಯಾಗಿ ಕಾಯಿಲೆ ಬಿದ್ಲು."

"ಏನು ಸಮಾಚಾರ ?"

"ಶಕುಂತಳೆ ಮದುವೆ ಆಗ್ಹೋಯ್ತು ಅವತ್ತೇ !"

"ಓ!" ಎಂದಳು ಅಮ್ಮಿ. ಆಕೆಗೆ ಸಂತೋಷವಾಯಿತು. ಆದರೆ ತನಗೆ ತಿಳಿಯದೆಯೇ ಆ ಶುಭಸಮಾರಂಭ ನಡೆದುಹೋಯಿತೆಂದು ಸ್ವಲ್ಪ ಖೇದವೆನಿಸಿತು.

"ಆಗಲೆ ಹತ್ತೊಂಭತ್ತು ಆಗಿರ್ಲಿಲ್ವೆ? ಸ್ವಲ್ಪ ಸಣಕಲಾಗಿದ್ಲೂಂತ ಇಷ್ಟು ದಿನ ತಳ್ಳೋದಕ್ಕಾಯಿತು. ಒಳ್ಳೆಯ ವರ ಅಂತ ಎಷ್ಟು ಹುಡುಕೋಕಾಗುತ್ತೆ ಹೇಳು ?"

"ಅಂತೂ ದುಷ್ಯಂತ ಮಹಾರಾಜನನ್ನೇ ಹುಡುಕಿದ್ರಿ ಅನ್ನಿ."

"ಮಹಾರಾಜನೋ ಮಹಾರಾಯನೋ, ಇನ್ನು ನಾಲ್ಕು ತಿಂಗ್ಳಲ್ಲೇ ರಾಣಿ ಹೆರಿಗೆಗೇಂತ

ತಪರ್ಮನೆಗೆ ಬರದಿದ್ರೆ ಮತ್ತೆ ಹೇಳು!"

ಅಮ್ಮಿ ನಕ್ಕಳು. "ಅಕ್ಕ ಹ್ಯಾಗಿದಾರೇಂತ ಹೇಳ್ಲೇ ಇಲ್ಲ ನೀವು."

"ಚೆನ್ನಾಗಿದಾಳಮ್ಮಾ. ನಿನ್ನಷ್ಟು ತಲೆ ಕೂದಲು ನರೆತಿಲ್ಲ. ನನ್ನಕಣ್ಣಿಗಂತೂ ಸುಂದರಿಯಾಗೇ ಇದಾಳೆ!"

ಸುಶೀಲ, ತನಗೆ ಅಪರಿಚಿತರಾಗಿದ್ದ ಶಕುಂತಳೆಯ, ಸುಂದರಮ್ಮನ ವಿಷಯ ಕೇಳುತ್ತ ಅಲ್ಲಿ ಕುಳಿತಿದ್ದಳು.

ರಾಮುಶಾಸ್ತ್ರಿ ಗಂಟು ಬಿಚ್ಚಿ, ಸುಶೀಲೆಗೆ ಬಿಸ್ಕತ್ತಿನ ಪೊಟ್ಟಣ ಕೊಟ್ಟ.

"ಅಯ್ಯೋ, ಸುಶೀಲೆಯೇನು ಚಿಕ್ಕಗೂನೆ ಬಿಸ್ಕತ್ತು ತಿನ್ನೋಕೆ?"

"ಪರವಾಗಿಲ್ಲ ಬಿಡು. ಇನ್ನೂ ಒಂದೆರಡು ವರ್ಷ ಬಿಸ್ಕತ್ತು ತಡಕೋತಾಳೆ" ಎಂದು ರಾಮುಶಾಸ್ತ್ರಿ ನಕ್ಕ.

ಸುಶೀಲೆ ನಾಚಿ ಒಳಕ್ಕೆ ಓಡಿದಳು.

ಬನಶಂಕರಿ, ತನ್ನ ತಲೆ ತಿನ್ನುತ್ತಿದ್ದ ಯೋಚನೆಯ ವಿಷಯ ಹೇಳಿದಳು. ರಾಮುಶಾಸ್ತ್ರಿಗೂ ಆಸೆಯಿತ್ತು ರಾಜಣ್ಣ ಮುಂದೆಯೂ ಓದಬೇಕೆಂದು. ತನ್ನ ಗಂಡು ಮಗು ಹೆಚ್ಚು ಹೆಚ್ಚು ಓದಬೇಕೆಂದು ತಾನೇ ಎಷ್ಟೊಂದು ಆಸೆ ಪಟ್ಟಿರಲಿಲ್ಲ!

ರಾಮುಶಾಸ್ತ್ರಿ ಹೇಳಿದ :

"ಮುಂದಿನ್ತಿಂಗಳು ಬೆಂಗಳೂರಿಗೆ ಹೋಗೋ ಕೆಲ್ಸ ಇದೆ. ಆಗ ನೋಡಿ ವಿಚಾರಿಸ್ಕೊಂಡು ಬರ್ತೀನಿ. ಇಲ್ಲಿದ್ರಲ್ಲಾ ಆ ನ್ಯಾಯಾಧೀಶರು? ಅವರನ್ನೂ ನೋಡ್ತೀನಿ. ಐದಾರು ರೂಪಾಯಿ ಬಾಡಿಗೆಗೆ ಒಂದು ಮನೆ ಸಿಕ್ಕಿದ್ರೆ ಅಷ್ಟೇನೂ ಕಷ್ಟವಾಗೋಲ್ಲ. ಆದಷ್ಟು ಬೇಗ್ನೆ ಸುಶೀಲನ್ನ ದಾಟಿಸ್ಬಿಟ್ರೆ ಸುಲಭವೇ ಆಗುತ್ತೆ. ರಾಜಣ್ಣ ಬುದ್ಧಿವಂತ. ಅಲ್ಲಿ ಇಲ್ಲಿ ಒಂದಿಷ್ಟು ಪಾಠ ಹೇಳಿ ಸಂಪಾದಿಸ್ತಾನೆ. ಫೀಜೂ ಮಾಫಿಯಾಗ್ಬೌದು...ನೀನೇನೂ ಯೋಚ್ನೆ ಮಾಡ್ಬೇಡ ಬನಶಂಕರಿ...ಏನಾದರೂ ಮಾಡಿ ಬರ್ತೀನಿ..."

"ನಿಮ್ಮನೇ ಮಗೂಂತಾನೇ ತಿಳಕೊಂಡು ಏನಾದರೂ ಮಾಡಿ ಅಣ್ಣ."

ಸ್ವಲ್ಪ ಹೊತ್ತಿನಲ್ಲೆ, ಹೊರಹೋಗಿದ್ದ ರಾಜಣ್ಣ ಬಂದ.

"ಏನಯ್ಯಾ, ಕಾಲೇಜಿಗ್ಹೋದ್ಮೇಲೆ ನನ್ನನ್ನ ಮರೆತ್ಬಿಟ್ಟೀಯಾ ಎಲ್ಲಾದರೂ?"

"ಓ! ಇವತ್ತು ಬಂದ್ರಾ?" ಎಂದ ರಾಜಣ್ಣ ಸಂತೋಷದಿಂದ.

"ಹೂನಪ್ಪಾ. ನಿನ್ನಮ್ಮ ಇದೇ ಈಗ ಹೇಳ್ತಾ ಇದ್ಲು—ನಿನ್ನ ಪರೀಕ್ಷೆ ಫಲಿತಾಂತ ಬಂದ್ಕೂಡ್ಲೆ ಬೆಂಗಳೂರಿಗೆ ಹೊರಟ್ಹೋಗ್ತೀವೀಂತ."

"ಓ! ಹೌದೆ ಅಮ್ಮಿ?"

ಅಮ್ಮಿ ನಕ್ಕು ರಾಮುಶಾಸ್ತ್ರಿಯನ್ನು ಕೇಳಿದಳು :

"ರಾಜಣ್ಣನ ಕ್ರಾಪು ನೋಡಿದ್ರಾ?"

"ನೋಡಿದ್ನಪ್ಪಾ...ಆಗ಼್ೇ ನೋಡ್ದೆ...ನಂಗೊತ್ತಿಲ್ವೆ - ನಮ್ಕಾಲ ಆಗೋಯ್ತೂಂತ?"

ರಾಜಣ್ಣನೂ ನಕ್ಕು, ತಂಗಿಯನ್ನು ಹುಡುಕುತ್ತ, ಒಳಹೋದ.

ಹಾಸನದಲ್ಲಿ ನಡಸಿದ್ದ ಹದಿನೇಳು ವರ್ಷಗಳ ಬಾಳ್ವೆ ಮುಕ್ತಾಯವಾಗುವ ಹೊತ್ತು ಬಂದಿತ್ತು. ನಿಜವಾಗಿಯೂ ಇಷ್ಟು ವರ್ಷ ತಾನು ಬದುಕಿದೆನೆ? ತನ್ನೆದುರಲ್ಲೇ ಈ

ಮಕ್ಕಳು ದೊಡ್ಡವಾದುವೆ? ಮಕ್ಕಳ ವಿಷಯವಾಗಿ ತಾನು ಕಟ್ಟಿಕೊಂಡಿದ್ದ ಆಸೆಗಳು ಕೈಗೂಡುವುದು ಸಾಧ್ಯವೆ?...ಇದೆಲ್ಲವೂ ಕನಸೇನೋ ಎನ್ನುವ ಹಾಗಾಗುತ್ತಿತ್ತು ಆಕೆಗೆ.

ತನ್ನ ಗಂಡ ತೀರ್ಥಯಾತ್ರೆಗೆ ಹೊರಟುಹೋದನೆಂದು ಹೇಳಿದ್ದಳು ಮೊದಲು. "ತೀರ್ಥ ಯಾತ್ರೆ ಏನ್ಬಂತು? ಗಯ್ಯಾಳೀಂತ ಬಿಟ್ಬಿಟ್ಟೇ ಹೋದ್ನೇನೊ? ಅದಕ್ಕೇ ವೈರಾಗ್ಯ ತೋರಿಸ್ತಿದಾಳೆ—ಹಣೆಗೆ ಕುಂಕುಮ ಕೂಡಾ ಇಟ್ಟುಕೊಳ್ಳದೆ ವಿಧವೆಯ ಹಾಗೆ—" ಎಂದೆಲ್ಲ ಆಡಿಕೊಂಡಿದ್ದರು.

ಕೆಲಕೆಲವರಿಗೆ ಗೊತ್ತಾಗಿತ್ತೇನೊ? ಗೊತ್ತಾಗಿದ್ದರೂ ಇರಬಹುದು...ಎಂತಲೇ ಮಕ್ಕಳು ಆಗಾಗ್ಗೆ ಅಪನಿಂದೆಗೆ ಗುರಿಯಾಗುತ್ತಿದ್ದರು...ಆದರೆ ಎರಡು ಮಕ್ಕಳ ತಾಯಿಯಾದ ತನಗೆ, ವಯಸ್ಸಾದವಳಿಗೆ, ತೊಂದರೆ ಕೊಡುವುದನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಯಾರೂ ಪೀಡಿಸಿರಲಿಲ್ಲ.

ಅಂತೂ ಅಮ್ಮಿ ಅಷ್ಟು ವರ್ಷ ಬದುಕಿದ್ದಳು ಮಕ್ಕಳೊಡನೆ.

ರಾಜಣ್ಣನ ಪರೀಕ್ಷೆಯ ಫಲಿತಾಂಶ ಬಂತು. ಆತ ಪಾಸಾಗಿದ್ದ.

ರಾಮಶಾಸ್ತ್ರಿ ಬಂದು, ಬೆಂಗಳೂರಲ್ಲಿ ತಾನು ಮಾಡಿದ್ದ ಏರ್ಪಾಟನ್ನು ವಿವರಿಸಿದ. ತಾನೂ ಜತೆಯಲ್ಲೆ ಬಂದು ಒಂದು ದಿನವಿದ್ದು ಬರುವುದಾಗಿ ಹೇಳಿದ.

ತಾಯಿ ಮತ್ತು ಮಕ್ಕಳು ಹೊರಡುವ ಸಿದ್ಧತೆ ಮಾಡಿದರು.

ರಾಜಣ್ಣ ಎಲ್ಲ ಉಪಾಧ್ಯಾಯರನ್ನೂ ಸ್ನೇಹಿತರನ್ನೂ ಬೀಳ್ಕೊಟ್ಟು ಬಂದ. ತಾಯಿಯನ್ನು ತನಗಾಗಿ ಬದುಕಿಸಿ ಕೊಟ್ಟ ಡಾಕ್ಟರಲ್ಲಿಗೆ ಹೋಗಿ, "ಗುಡ್ ಬೈ" ಹೇಳಿದ.

ಕೇಶವಮೂರ್ತಿಯಿಂದ "ನಿಮಗೆ ಶುಭವಾಗಲಿ!" ಎಂಬ ಆಶೀರ್ವಾದ ಬಂತು.

ಆಗಲೆ ವೃದ್ಧೆಯಾಗಿದ್ದ ಸಾವಿತ್ರಮ್ಮ ಗೋಳೋ ಎಂದು ಅತ್ತಳು.

ಹೊರಡಲು ರಾಮಶಾಸ್ತ್ರಿಯೇ ಒಂದು ಮುಹೂರ್ತ ಗೊತ್ತು ಮಾಡಿದ್ದ—ಆ ಊರಿಗೆ ಅರಸೀಕೆರೆಯಿಂದ ರೈಲುಗಾಡಿ ಬರುವ ಹೊತ್ತು!

ರಾಮಶಾಸ್ತ್ರಿಯೊಡನೆ, ಮನೆಯ ಸಾಮಾನುಗಳ ಸಹಿತ, ತಾಯಿ ಮತ್ತು ಮಕ್ಕಳು ರೈಲುಗಾಡಿಯಲ್ಲಿ ಕುಳಿತರು. ರೈಲು ಮೈಸೂರಿಗೆ ಹೊರಟಿತು.

"ಮೈಸೂರ್ನಲ್ಲಿ ರಾತ್ರೆ ಕೂತರೆ ಬೆಳಗಾಗೋ ಹೊತ್ತಿಗೆ ಬೆಂಗಳೂರಲ್ಲಿರ್ತೀವಿ" ಎಂದ ರಾಮಶಾಸ್ತ್ರಿ.

ಕಣ್ಣಿಗೇನೋ ಕಸ ಬಿತ್ತೆಂದು ಅಮ್ಮಿ ಸೆರಗಿನ ತುದಿಯಿಂದ ಕಣ್ಣು ಮುಚ್ಚಿಕೊಂಡಳು.

ರಾಜಣ್ಣ ಮತ್ತು ಸುಶೀಲ ಉಗುಳು ನುಂಗುತ್ತ ಒಬ್ಬರನ್ನೊಬ್ಬರು ನೋಡಿದರು.

## ೧೬

ಅಂತೂ ದಾರ ಕಡಿದ ಗಾಳಿಪಟ, ಗಾಳಿಯಲ್ಲಿ ತೇಲುತ್ತ ತೇಲುತ್ತ ಬಂದು, ದೊಡ್ಡದೊಂದು ಆಲದಮರದ ರೆಂಬೆಯಲ್ಲಿ ಸಿಲುಕಿಕೊಂಡಿತು.

ಹುಟ್ಟಿದ ನೆಲದಿಂದ ಬೇರುಕಿತ್ತು ಬಂದಿದ್ದ ಅಮ್ಮಿಯ ಸಂಸಾರ, ಬೆಂಗಳೂರಿನ

ಶ್ರೀರಾಮಪುರದೊಂದು ಪುಟ್ಟ ಮನೆಯಲ್ಲಿ ತಳವೂರಿತು.

ರಾಮಶಾಸ್ತ್ರಿಯ ಸ್ನೇಹಿತನೊಬ್ಬ ಆಠಾರಾ ಕಛೇರಿಯಲ್ಲಿ ಗುಮಾಸ್ತೆಯಾಗಿದ್ದ ಆತನ ಮನೆ ಇದ್ದುದು ಶೇಷಾದ್ರಿಪುರದಲ್ಲಿ...ಆಪತ್ಕಾಲದಲ್ಲೇನಾದರೂ ಪ್ರಯೋಜನಕ್ಕೆ ಬೀಳಬಹುದೆಂದು, ರಾಮಶಾಸ್ತ್ರಿ ರಾಜಣ್ಣನನ್ನು ಕರೆದೊಯ್ದು, ಆತನ ಪರಿಚಯ ಮಾಡಿಸಿಕೊಟ್ಟ.

ಆದರೆ ಆಪತ್ಕಾಲದಲ್ಲಿ ನೆರವಾಗುವ ಅಭ್ಯಾಸವೆಲ್ಲ ಹಳ್ಳಿಗಳಲ್ಲಿ ಮಾತ್ರವೇನೋ ಎನಿಸಿತು ಅಮ್ಮಿಗೆ, ಬೆಂಗಳೂರನ್ನು ನೋಡಿದಾಗ. ಬಂದ ಒಂದೆರಡು ದಿನಗಳಲ್ಲೆ ರಾಮಶಾಸ್ತ್ರಿ ಹೊರಟುಹೋದ ಮೇಲೆ, ಚಿತ್ರವಿಚಿತ್ರವಾಗಿ ಆ ಮಹಾ ನಗರದ ಭವ್ಯದರ್ಶನ ತಾಯಿ ಮಕ್ಕಳಿಗೆ ಆಗತೊಡಗಿತು. ಅವರ ಮನೆಯಿದ್ದ ಪ್ರದೇಶದಲ್ಲೆಲ್ಲಾ ಪುಟ್ಟ ಮನೆಗಳೇ ಇದ್ದುವು. ಎಲ್ಲರೂ ಬಡವರು. ಬೇರೆ ಬೇರೆ ಜಾತಿಯವರು. ಎಲ್ಲರೂ ದುಡಿದು ಬದುಕುವವರೇ. ತಮಗಿಂತ ಹೆಚ್ಚು ಸುಖಿಗಳಲ್ಲ ತಾನೆ—ಎಂದು ತಿಳಿಯುವ ಉದ್ದೇಶದಿಂದ ಇನ್ನೊಬ್ಬರ ಬಗೆಗೆ ಆ ಜನ ಹೆಚ್ಚು ಕುತೂಹಲಿಗಳಾಗಿದ್ದರೇ ಹೊರತು, ಸ್ವವಿಷಯ ಒಬ್ಬರೂ ಬಿಟ್ಟುಕೊಡುತ್ತಿರಲಿಲ್ಲ, ತಮ್ಮ ದೋಸೆಯೂ ತೂತೇ ಎಂಬುದನ್ನು ಅವರು ಒಪ್ಪುತ್ತಿರಲಿಲ್ಲ.

ಸದಾ ಆತ್ಮರಕ್ಷಣೆಯ ಮುಖವಾಡ ಧರಿಸಿ ಅಭ್ಯಾಸವಾಗಿದ್ದ ಅಮ್ಮಿ ತನ್ನ ಮಕ್ಕಳ ರಕ್ಷಕಳಾಗಿ ಎಚ್ಚರದಿಂದ ಮಾತನಾಡಿದಳು ; ಎಚ್ಚರದಿಂದ ನಡೆದಳು.

" ಬನಶಂಕರವ್ನೋರೆ... ! "

ಎಷ್ಟು ರಾಗವಾಗಿ ಕರೆಯುತ್ತಿದ್ದರು ಯಾರಾದರೂ ! ತನ್ನ ಬಿಳಿಗೂದಲಿಗೆ, ಹಿರಿತನಕ್ಕೆ ಎಷ್ಟು ಗೌರವ !

" ಬನ್ನಿ ಇವರೇ—" ಎನ್ನುತ್ತಿದ್ದಳು ಅಮ್ಮಿ.

ಬಂದವರು ಕೆಂಪು ಸೀರೆಯವರಾಗಿದ್ದರೆ, ಅರ್ಧ ಪ್ರಾಮಾಣಿಕವಾದ ಅರ್ಧ ನಟನೆಯ ಅನುಕಂಪ ತೋರಿಸುತ್ತ, ಕೇಳುತ್ತಿದ್ದರು :

" ಎಷ್ಟು ವರ್ಷದಿಂದ ಹೀಗೆ ? "

" ಅಯ್ಯೋ—ಅದೇನು ಕೇಳ್ತೀರಮ್ಮ ! ಎಷ್ಟೋ ವರ್ಷ ಆಯ್ತು."

" ಏನಾಗಿತ್ತು ? "

" ಅದೇನೋ ಜ್ವರ ಬಂತಮ್ಮ...ಹಳ್ಳಿಯವರು ನಾವು...ಔಷಧೋಪಚಾರ ಸರಿಯಾಗಿ ಆಗ್ಲಿಲ್ಲ—"

ಅಮ್ಮಿ ಅಳದಿದ್ದರೂ, ಸಹಾನುಭೂತಿಯಿಂದ ಕಂಬನಿ ಮಿಡಿಯಲು ಬಂದಾಕೆ ಸಿದ್ಧವಾಗಿರುತ್ತಿದ್ದರು.

" ಅಯ್ಯೋ ಪಾಪ—ಆಮೇಲೆ— ? "

ಆ ಪ್ರಶ್ನೆಯನ್ನು ನಿರೀಕ್ಷಿಸಿ ಮುಂದಾಗಿಯೇ ಅಮ್ಮಿ ಉತ್ತರ ಕೊಡುತ್ತಿದ್ದಳು :

" ಇದು ಅವರ ಕೊನೇ ಬಯಕೆ—ನಾನು ಕೇಶಮುಂಡನ ಮಾಡಿಸ್ಕೋಕೂಡದೂಂತ... ಆಗ ನನ್ನ ಕಂದಮ್ಮಗಳು ತೀರಾ ಚಿಕ್ಕವಾಗಿದ್ದುವು ನೋಡಿ."

" ಧರ್ಮಾತ್ಮ—ಧರ್ಮಾತ್ಮ..."

ಮಕ್ಕಳಿಗೂ ಅಮ್ಮಿ ಅದೇ ಕತೆ ಅಭ್ಯಾಸಮಾಡಿದಳು. ಆಕೆಯ ಗಂಡ ಸತ್ತಿದ್ದ. ಅದು ನಿಜವಾಗಿತ್ತಲ್ಲ ? ಆ ಅಣ್ಣ - ತಂಗಿಯ ತಾಯಿ ವಿಧವೆ. ಅದೂ ಸರಿಯಾಗಿತ್ತಲ್ಲ ?

ಆದರೆ ಒಮ್ಮೆ ಮಾತ್ರ ರಾಜಣ್ಣ ನೇರವಾದೊಂದು ಪ್ರಶ್ನೆಗೆ ಉತ್ತರ ಕೊಡಬೇಕಾಯಿತು.

"ನಿಮ್ಮ ತಂದೆ ತೀರಿಹೋಗಿ ಎಷ್ಟು ಸಮಯವಾಯ್ತಪ್ಪ ?"

ಯೋಚಿಸಲು ಅವಕಾಶವೇ ಇಲ್ಲದೆ ರಾಜಣ್ಣ ಅರೆಕ್ಷಣ ಕಣ್ಣುಮುಚ್ಚಿ ಹೇಳಿದ:

"ಎಷ್ಟೋ ವರ್ಷವಾಯ್ತು ಸಾರ್...ನಾನು ಚಿಕ್ಕಗು ಆಗಿದ್ದಾಗ್ಲೇನೇ..."

...ಅಮ್ಮಿಯ ಬಡಮನೆಯಲ್ಲಿ, ಜೀವಮಾನವೆಲ್ಲಾ ಕಷ್ಟಪಟ್ಟು ಕೂಡಿಸಿ ಇಟ್ಟಿದ್ದ ಸ್ವಲ್ಪ ಹಣವೇನೋ ಇತ್ತು.

ಆದರೆ ಅದನ್ನೇ ಅವಲಂಬಿಸಿ ದಿನಕಳೆಯುವುದು ಸಾಧ್ಯವೆ ?

ಅಮ್ಮಿ ಮಗನಿಗೆ ಹೇಳುತ್ತಿದ್ದಳು :

"ನೀನೇನು ಎಳೆ ಮಗೂನೆ? ಧೈರ್ಯವಾಗಿ ಅಲ್ಲಿ ಇಲ್ಲಿ ಹೋಗಿ ಬರ್ತಿರ್ಬೇಕು ರಾಜಣ್ಣ."

ಬೆಂಗಳೂರಿಗೆ ಬಂದ ಮೇಲೆ, ರಾಜಣ್ಣನಲ್ಲಿದ್ದ ಅಲ್ಪಸ್ವಲ್ಪ ಸಂಕೋಚ ಪ್ರವೃತ್ತಿಯೂ ಮಾಯವಾಯಿತು...ಆಗಲೆ ಇಪ್ಪತ್ತು ದಾಟಿದ್ದ ತನ್ನ ರಾಜನಿನ್ನೂ ಯುವಕ...ಮಗನ ದೃಢ ನಡಿಗೆಯನ್ನು ಕಂಡಾಗ ಅಮ್ಮಿಗೆ ಹೆಮ್ಮೆ ಎನಿಸುತ್ತಿತ್ತು.

ಆದರೂ ರಾಜಣ್ಣ ಹೊರಗೆ ಹೊರಟನೆಂದರೆ, "ಹುಷಾರಿ ರಾಜ, ಮೋಟಾರು—ಕಾರು ಓಡಾಡ್ತಾ ಇರ್ತವೆ, ಹುಷಾರಿ..." ಎಂದು ಪ್ರತಿ ಸಾರೆಯೂ ಅಮ್ಮಿ ಎಚ್ಚರಿಕೆಯ ಮಾತನ್ನಾಡುತ್ತಿದ್ದಳು.

ಸಂಜೆ ದೀಪ ಹಚ್ಚಿ ದೇವರ ಧ್ಯಾನದಲ್ಲಿ ಕುಳಿತಿದ್ದರೂ ರಾಜಣ್ಣ ಬರುವುದು ಹತ್ತು ನಿಮಿಷ ತಡವಾಯಿತೆಂದರೆ ಆ ತಾಯಿ ಗಾಬರಿಯಾಗುತ್ತಿದ್ದಳು. ಆ ತುಟಿಗಳೇನೋ ದೇವರ ಹೆಸರು ಹೇಳುತ್ತ ಚಲಿಸುತ್ತಿದ್ದುವು. ಆದರೆ ಆಕೆಯ ಯೋಚನೆ ದೇವರನ್ನು ಬಿಟ್ಟು, ನಗರದೊಳಕ್ಕೆ ದೂರ ದೂರ ಸಂಚರಿಸಿ, ಮಗನನ್ನು ಹುಡುಕುತ್ತಿತ್ತು.

ಒಂದು ದಿನ ಮಧ್ಯಾಹ್ನ ಅಮ್ಮಿ, ಮಕ್ಕಳೊಡನೆ ಬಸವನಗುಡಿಗೆ ಹೋಗಿ, ಹಾಸನದಿಂದ ನಿವೃತ್ತರಾಗಿ ಬಂದಿದ್ದ ಪರಿಚಯದ ನ್ಯಾಯಾಧೀಶರನ್ನು ಕಂಡಳು. ರಾಮಶಾಸ್ತ್ರಿ ವಿಳಾಸ ಬರೆದು ಕೊಟ್ಟದ್ದರಿಂದ ಆ ಮನೆಯನ್ನು ಹುಡುಕಿ ಹಿಡಿಯುವುದು ರಾಜಣ್ಣನಿಗೆ ಕಷ್ಟವಾಗಲಿಲ್ಲ.

ನ್ಯಾಯಾಧೀಶರಿಗೆ ದೃಷ್ಟಿ ಮಂದವಾಗಿದ್ದರೂ ದಪ್ಪದ ಗಾಜಿನ ಕನ್ನಡಕದೆಡೆಯಿಂದ ಅವರು ಅಮ್ಮಿಯ ಗುರುತು ಹಿಡಿದರು.

"ಯಾರು ಬಂದಿದಾರೆ ನೋಡೇ!" ಎಂದು ಹೆಂಡತಿಯನ್ನು ಕರೆದರು.

ವಯಸ್ಸಾಗಿದ್ದ ಆ ತಾಯಿಗೆ, ವಿಶ್ವಾಸದ ಅಡುಗೆಯವಳಾಗಿದ್ದ ಅಮ್ಮಿಯನ್ನು ಕಂಡು ಸಂತೋಷವಾಯಿತು.

"ಈ ಊರಿಗೆ ಬಂದು ಆಗಲೆ ಒಂದು ತಿಂಗಳಾಗ್ತಾ ಬಂತು," ಎಂದು ಅಮ್ಮಿ ಅಂದಾಗ ಅವರಿಗೆ ಕೆಡುಕೆನಿಸಿತು.

"ಮತ್ತೆ ಇಷ್ಟು ದಿನವಾದ್ರೂ ಬರ್ಲೇ ಇಲ್ಲ!"

"ಮನೆ ದೂರವಮ್ಮ."

" ಎಲ್ಲಿ ಮಾಡಿದೀರಾ ? "

" ಶ್ರೀರಾಮಪುರದಲ್ಲಿ."

" ಹೌದು...ದೂರವೇ...ಬಸವನಗುಡೀಲಂತೂ ಮನೆಗಳೇ ಸಿಗೋದಿಲ್ಲ."

ಸಿಗುತ್ತಿದ್ದುವು—ಆದರೆ ಅಮ್ಮಿಯ ಸಂಸಾರದ ಯೋಗ್ಯತೆಗೆ ಅನುಗುಣವಾದ ಮನೆಗಳು ಸಿಗುತ್ತಿರಲಿಲ್ಲ, ಅಷ್ಟೆ. ನ್ಯಾಯಾಧೀಶರ ಹೆಂಡತಿ ಹೇಳಿದುದೂ ಆ ಅರ್ಥದಲ್ಲೇ.

" ಈ ಇಬ್ಬರೂ ನಿನ್ನ ಮಕ್ಕಳೇ ಅಲ್ಲ ? "

" ಹೌದಮ್ಮ, ನನ್ನವೇ—"

" ಎಷ್ಟೊಂದು ಬೆಳೆದಿದಾರೆ ! "

" ಅಷ್ಟೂ ನಿಮ್ಮ ಆಶೀರ್ವಾದದಿಂದ ಅಮ್ಮ."

ಒಮ್ಮೆಲೆ ಏನೋ ನೆನಪಾದವರಂತೆ ಮನೆಯಾಕೆ ಕೇಳಿದಳು :

" ನಿಮ್ಮವರ ವಿಷಯ ಏನಾಯಿತೆ ಆಮೇಲೆ ? "

ಅಮ್ಮಿ ಉತ್ತರವೀಯಲಿಲ್ಲ. ಮುಖ ಬಾಡಿತು—ಹಣೆ ಸುಕ್ಕುಗಟ್ಟಿತು. ನೆಲವನ್ನೆ ನೋಡುತ್ತ ಆಕೆ ಕುಳಿತಳು.

" ಹೋಗಲಿ ಬಿಡು ಆ ವಿಷಯ," ಎಂದರು ಆಕೆಯೇ.

ಒಳಹೋಗಿ, ಮಕ್ಕಳಿಗಾಗಿ ಆಕೆ ತಿಂಡಿ ತಂದರು. ಅಡುಗೆಯ ಕೆಲಸದ ಅಜ್ಜಮ್ಮ ನೊಬ್ಬಳನ್ನು ಕರೆದು, ಅಮ್ಮಿಯತ್ತ ಬೊಟ್ಟು ಮಾಡುತ್ತ, " ಈಕೇನೇ ನೋಡ್ರಿ, ಬನಶಂಕರೀಂತ. ಹಾಸನದಲ್ಲಿ ಹತ್ತು ವರ್ಷ ನಮ್ಮನೇಲಿ ಅಡುಗೆ ಕೆಲಸಕ್ಕಿದ್ಲು—ಹತ್ತು ವರ್ಷ ! " ಎಂದರು.

ಆ ಅಡುಗೆಯಾಕೆ ಒಳಹೋಗುತ್ತಲೆ, " ನಮ್ಮನೇಲೀಗ ಕೆಲಸ ಖಾಲಿ ಇಲ್ಲ. ಇದ್ರೆ ನಿನ್ನನ್ನು ಕರೀತಾ ಇದ್ದೆ," ಎಂದು ಪಿಸುದನಿಯಲ್ಲಿ ನುಡಿದರು.

ರಾಜಣ್ಣ ಮತ್ತು ಸುಶೀಲೆಯರ ಮುಖ ಕೆಂಪಗಾಯಿತು.

ಅನಿರೀಕ್ಷಿತವಾಗಿ ರಾಜಣ್ಣನೆಂದ :

" ನಮ್ಮಮ್ಮನಿಗೀಗ ಆರೋಗ್ಯ ಸರಿಯಾಗಿಲ್ಲ. ನಿಶ್ಶಕ್ತಿ. ಇನ್ನು ನಮ್ಮಮ್ಮ ಕೆಲಸ ಮಾಡೋದಿಲ್ಲ."

" ಓ ! "

ರಾಜಣ್ಣ ಮಾತನಾಡಿದ್ದು ಉದ್ಧಟತನವೆಂದು ತೋರಿತು ಅಮ್ಮಿಗೆ. ಆದರೆ ಆಕೆಯ ಕಣ್ಣುಗಳಲ್ಲಿ ಕೃತಜ್ಞತೆಯ ಅಭಿಮಾನದ ಭಾವವಷ್ಟೇ ಹೊಳೆಯಿತು.

" ಇನ್ನು ನನ್ನ ರಾಜ ದುಡಿದು ಸಂಪಾದ್ಸಿ ತಾಯಿನ ಸಾಕ್ತಾನಂತೆ."

" ಅಲ್ವೆ ಮತ್ತೆ, ಅದು ಸರೀನೇ...ನಿನ್ನ ಹುಡುಗಿಗೂ ಒಂದು ಮದ್ವೆ ಮಾಡ್ಬಿಡು ಬೇಗನೆ."

" ಬಡವರ ಮದ್ವೆ. ಎಲ್ಲಾ ಕೂಡಿ ಬರಬೇಕು ನೋಡಿ. ದೇವರು ಏನು ಸಂಕಲ್ಪಿಸಿ ದ್ದಾನೋ."

ಬಡತನದ ಮಾತು. ಅಮ್ಮಿಯ ನುಡಿ ಕೇಳಿ ರಾಜಣ್ಣ – ಸುಶೀಲೆಯರಿಗೆ ಅವಮಾನ ವೆನಿಸಿತು.

ತಾಯಿಯನ್ನು ಅಲ್ಲಿಂದ ಎಬ್ಬಿಸಲೆಂದು ರಾಜಣ್ಣ "ಹೊತ್ತಾಯ್ತಲ್ಲೇ ಅಮ್ಮೇ" ಎಂದ.

ಆ ಮನೆಯಾಕೆ, ಹುಡುಗನ ಮಾತು ಕಿವಿಗೆ ಕೇಳಿಸದಂತೆ, ತನ್ನ ಕೊನೆಯ ಮಗಳ ಮದುವೆಯ ವರ್ಣನೆ ಮಾಡಿದರು.

...ಆ ದಿನ, "ನೀವೂ ಬರ್‍ತೀರೇನ್ರೋ ಬೆಂಗಳೂರ್‍ಗೆ ?" ಎಂದು ಕೇಳಿದ್ದ ಹುಡುಗಿ... ಕೊನೆಯ ಮಗಳು...

"ಭಾರೀ ಅದ್ದೂರಿಯಿಂದಾನೇ ಆಯ್ತೂಂತಿಟ್ಕೋ.... ಸ್ವತಃ ದಿವಾನರೂ ಬಂದಿದ್ರು...."

"ಅಳಿಯ ಏನ್ಮಾಡ್ಕೊಂಡಿದಾರೆ ?"

"ಆತನೇ ? ಢಿಲ್ಲೀಲಿದಾನೆ. ಭಾರೀ ಸರ್ಕಾರಿ ಕೆಲಸ. ಆಗ್ಲೇ ಎರಡು ಮಕ್ಕಳು. ಎರಡೂ ಗಂಡೇ."

ಗಂಡೊ—ಹೆಣ್ಣೊ, ಆ ಮಾತು ಅಮ್ಮಗೆ ಕೇಳಿಸುತ್ತಿರಲಿಲ್ಲ. ತಾನು ಬಡವಳೆಂಬ, ಅಸಹಾಯಳೆಂಬ ತನ್ನ ಮಗಳ ಮದುವೆ ಸುಲಭಸಾಧ್ಯವಲ್ಲವೆಂಬ ಅರಿವು ಆಕೆಯ ಮನಸ್ಸನ್ನು ಕೊರೆಯುತ್ತಿತ್ತು.

ಆ ದೊಡ್ಡ ಮನೆಯಿಂದ ಹಿಂತಿರುಗಿದಾಗ ಯಾರ ಮುಖದ ಮೇಲೂ ಗೆಲುವಿರಲಿಲ್ಲ. ಯಾಕಾದರೂ ಅಲ್ಲಿಗೆ ಹೋದೆನೋ—ಎನ್ನಿಸಿತು ಅಮ್ಮಗೆ.

...ಅಮ್ಮಯ ಮನೆಯಿದ್ದ ಸಾಲಿನ ಕೊನೆಯಲ್ಲಿ ಒಬ್ಬ ಯುವಕನಿದ್ದ. ಬೀದಿಯ ಬಳಿ ನಿಂತಿದ್ದಾಗಲೊಮ್ಮೆ ರಾಜಣ್ಣನಿಗೆ ಅವನ ಪರಿಚಯವಾಯಿತು. ಆತ ಒಳ್ಳೆಯವನಾಗಿ ಕಂಡ. ತನ್ನ ಮನೆಯೊಳಕ್ಕೆ ರಾಜಣ್ಣನನ್ನು ಕರೆದ. ಆತ ಸ್ವಂತ ಅಡಿಗೆ ಮಾಡಿಕೊಳ್ಳುತ್ತಿದ್ದ. ಏಕಾಕಿಯಾದರೂ ಮನೆ ಸ್ವಚ್ಛವಾಗಿತ್ತು. ಅಲ್ಲಿ 'ಪ್ರಜಾಮತ' 'ನಗುವ ನಂದ' ಪತ್ರಿಕೆಗಳಿದ್ದುವು. ಕನ್ನಡ—ಇಂಗ್ಲಿಷ್ ಪುಸ್ತಕಗಳಿದ್ದುವು.

"ನೀವು ಎಲ್ಲಿ ಕೆಲಸದಲ್ಲಿದೀರಿ ಸಾರ್ ?" ಎಂದು ರಾಜಣ್ಣ ಆತನನ್ನು ಕೇಳಿದ.

"ಇಲ್ಲೇ—ಬ್ಯಾಂಕ್‌ನಲ್ಲಿದೀನಿ, ಈ ವರ್ಷವಷ್ಟೆ ಸೇರ್‍ಕೊಂಡಿದ್ದು. ಇಷ್ಟರಲ್ಲೇ ಬೊಂಬಾಯಿಗೆ ವರ್ಗಾಯಿಸ್ತೀವೀಂತ ಹೇಳ್ತಿದಾರೆ...ನೀವು ?"

ಆತ 'ನೀವು' ಎಂದು ಸಂಬೋಧಿಸಿದ್ದ ರಾಜಣ್ಣನನ್ನು...ತಪ್ಪೇನು ಅದರಲ್ಲಿ ? ತಾನು ದೊಡ್ಡವನಾಗಿದ್ದೆ—ಸ್ವಾಭಾವಿಕ...

"ಈ ವರ್ಷವಷ್ಟೇ ಮೆಟ್ರಿಕ್ಯುಲೇಷನ್ ಆಯ್ತು...ಏನಾದರೂ ಕೆಲಸ ಹುಡುಕ್ತಾ ಇದೀನಿ."

"ಮುಂದಕ್ಕೆ ಓದಲ್ವೆ ?"

"ಓದ್ಬೇಕು ಸಾರ್."

'ಆದರೆ'—ಎಂಬ ಪದ ಅದರ ಹಿಂದೆಯೇ ಧಾವಿಸಿ ಬಂದಿತ್ತು. ರಾಜಣ್ಣ ಅದನ್ನು ಉಚ್ಚರಿಸಲಿಲ್ಲ, ಅಷ್ಟೆ.

ಮನಸ್ಸನ್ನು ಮರುಳುಗೊಳಿಸುವಷ್ಟು ಸರಳವಾಗಿ ಆ ಯುವಕ ಮಾತನಾಡಿದ:

"ನನಗೂ ಹಾಗೇ ಆಯ್ತು...ದುಡ್ಡಿಲ್ದೆ ಮುಂದೆ ಓದೋಕ್ಕೆ ಆಗ್ಲಿಲ್ಲ. ಆಗ ಕೆಲಸವೂ

ಇರಲಿಲ್ಲ ನಮ್ಮಮ್ಮನಿಗೆ...ಆಗ್ಲೇ ದೊಡ್ಡಕ್ಕ ಬೇರೆ ತೀರ್ಕೊಂಡ್ಬಿಟ್ಲು. ಪಾಠ ಹೇಳಿ, ಯಾರ್‍ಯಾರ ಅಂಗ್ಡೀಲೋ ಲೆಕ್ಕ ಬರ್ದು, ಏನೇನೋ ಮಾಡಿ ಅಂತೂ ಬಿ.ಎಸ್‌ಸಿ. ಮುಗಿಸ್ದೆ ..."

ಆತ ಹಾಗೆ ಮಾತನಾಡಿದ್ದಕ್ಕೆ ತಾನು ಚಿರಋಣಿ ಎಂದು ಹೇಳ ಬೇಕೆನ್ನಿಸಿತು ರಾಜಣ್ಣನಿಗೆ...ತಾನು ನಿರಾಶನಾಗಬಾರದು. ಹೀಗಿರುವುದು ತಾನೊಬ್ಬನೇ ಅಲ್ಲ... ಇದೇ ಪಾಡು ಪಡುವವರು ಅದೆಷ್ಟು ಜನವೊ ?

"ಎಲ್ಲಿಯಾದರೂ ಪಾಠ ಹೇಳೋದಕ್ಕೆ ಗೊತ್ಮಾಡ್ಕೊಂಡಿದೀರೇನು ?" ಎಂದು ಆ ಯುವಕನೇ ಕೇಳಿದ.

"ಇಲ್ಲ...ನಾವು ಇಲ್ಲಿಗೆ ಹೊಸಬರು. ನನಗೆ ಯಾರೂ ಗುರುತಿಲ್ಲ."

"ಅದೇನು ದೊಡ್ಡ ವಿಷಯವಲ್ಲ. ಶಾಲೆಗಳು ಈಗ್ತಾನೇ ಷುರುವಾಗಿವೆ. ಇನ್ನೊಂದು ವಾರ ತಡೀರಿ. ಒಂದೆರಡು ಮನೆ ಗೊತ್ಮಾಡಿ ಕೊಡ್ತೀನಿ. ಮಿಡ್‌ಲ್ ಸ್ಕೂಲ್ ಹುಡುಗ್ರಿಗೆ ಪಾಠ ಹೇಳೋಕ್ಕೆ ಆಗುತ್ತೆ ತಾನೆ ?"

"ಹೇಳ್ತೀನಿ. ಆಗುತ್ತೆ."

"ಈ ಒಂದು ವರ್ಷ ನೀವು ಕಾಲೇಜು ಸೇರೋಕ್ಕೆ ಆಗಲ್ಲಾಂತ ತೋರುತ್ತೆ. ಕಷ್ಟ ವಾದೀತು......ಮುಂದಿನ ವರ್ಷದೊಳಗಾದ್ರೆ ಎಲ್ಲಾ ಸರಿಪಡಿಸ್ಬಹುದು. ಅಲ್ಲ ?"

"ಹೌದು."

"ನಿಮ್ಮ ಹೆಸರು ಹೇಳ್ಲೇ ಇಲ್ವಲ್ಲ ನೀವು ?"

"ರಾಜಣ್ಣ ಅಂತ."

"ನನ್ನ ಹೆಸರು ಮಾಧವ. ನಿಮಗೇನಾದ್ರೂ ಬೇಕಾದ್ರೆ ನನ್ನ ಕೇಳಿ ರಾಜಣ್ಣ. ಓದೋಕೆ ಪುಸ್ತಕ-ಗಿಸ್ತಕ ಇದೆ. ಹೊಸಬರಾಗಿ ಊರಿಗೆ ಬಂದ್ರೆ ಷುರುಷುರುವಿಗೆ ಕಷ್ಟ ಇರೋದೇನೇ. ನನಗೂ ಹಾಗೇ ಆಗಿತ್ತು."

"ನೀವು ಈ ಊರ್ನವರಲ್ವೆ ಸಾರ್ ?"

"ಸಾರ್ ಬೇಡಿ . . . ಮಾಧವ ಅಂತ ಹೆಸರು ಹಿಡಿದೇ ಕೂಗಿ...ಆಗ್ಲೆ ಅಂದ್ನೆಲ್ಲಾ...ಈಗ ನನಗಿರೋ ಸಂಬಂಧಿಕರು ಅಂದ್ರೆ ಅಣ್ಣ ಒಬ್ನೇ. ಪೂನಾದಲ್ಲಿ ಕೆಲ್ಸದಲ್ಲಿದಾನೆ...ನಾವು ಚನ್ನಗಿರಿ ಕಡೆಯೋರು...ಅಪ್ಪ ಅಮ್ಮ ಯಾರೂ ಇಲ್ಲ. ಎಲ್ಲ ಚಿಕ್ಕಂದ್ನಲ್ಲೆ ತೀರ್ಕೊಂಡ್ರು..."

"ಓ !"

ಅಲ್ಲಿಗೆ ಮಾತು ಮುಗಿಯಿತೆಂದು ಮಾಧವ ಸುಮ್ಮನಾದ.

ರಾಜಣ್ಣನೆದ್ದು ನಿಂತು, "ಬರ್ತೀನಿ, ಸುಮ್ನೆ ಹರಟೆಗೆ ನಿಂತು ನಿಮಗೆ ತೊಂದರೆ ಕೊಟ್ಟೆ," ಎಂದ ವಿನಯವಾಗಿ.

ಯಾಕೆ ಈ ಉಪಚಾರದ ಮಾತು ?-ಎಂದು ಅಣಕಿಸುವ ಹಾಗಿತ್ತು ಮಾಧವನ ಮುಗುಳುನಗು.

ಮನೆಯಲ್ಲಿ ಮಾಧವನ ವಿಷಯ ರಾಜಣ್ಣ ಅಮ್ಮಗೆ ಹೇಳಿದಾಗ ಸುಶೀಲೆಯೂ ಕುತೂಹಲದಿಂದ ಕಿವಿಗೊಟ್ಟಳು.

ಮಾತು ಮುಗಿಯುವುದಕ್ಕೆ ಮುಂಚೆಯೇ, "ಅಲ್ಲಿಂದ ಕತೆ ಪುಸ್ತಕ ಇಸಕೊಂಡು ಬರ ಬಹುದಾಗಿತ್ತಲ್ಲಣ್ಣ" ಎಂದಳು ಸುಶೀಲ.

"ಸುಮ್ನಿರೆ!" ಎಂದು ಅಮ್ಮಿ ಗದರಿಸಿದಳು; "ಹಾಗೆಲ್ಲ ಸಲಿಗೆ ಬೆಳೆಸ್ಬಾರ್ದು."

ಮರುದಿನ ಸುಶೀಲ ನಲ್ಲಿಯ ಬಳಿ ಸೀರೆ ಹಿಂಡುತಿದ್ದಾಗ ಅಮ್ಮಿ ಮಗನನ್ನು ಕೇಳಿದಳು:

"ನಿನ್ನ ಆ ಸ್ನೇಹಿತ ಯಾವ ಜನ ರಾಜ?"

"ನನ್ಗೇನಮ್ಮ ಗೊತ್ತು?"

"ಕೇಳ್ಬೇಕಾಗಿತ್ತು."

"ಸರಿ ಹೇಳ್ದೆ! ಯಾರಾದರೂ ನಗ್ತಾರೆ, ನೀವು ಯಾವ ಜಾತೀಂತ ಕೇಳಿದ್ರೆ?... ಅಲ್ದೆ, ನಮಗ್ಯಾತಕಮ್ಮೀ ಜಾತೀ ವಿಷಯ?"

"ಸಾಕು ನಿಲ್ಸೊ. ಹುಟ್ಟಿದ್ಕುಲಕ್ಕಾದರೂ ಗೌರವ ಕೊಡ್ಬೇಡ್ವೇನೊ?"

"ದಾಸರ ಹಾಡು ಕೇಳಿದ್ಯೇನಮ್ಮೀ-ಕುಲ ಕುಲ ಕುಲ ಎನ್ನುತಿಹರು, ಕುಲ ಯಾವು ದಯ್ಯಾ-ಸಜ್ಜನರಿಗೆ..."

ಅಮ್ಮಿ ಸುಮ್ಮನಾದಳು. ಆಕೆ ನೊಂದುಕೊಂಡಳೆಂದು ರಾಜಣ್ಣನೂ ಸುಮ್ಮನಾದ.

ತನ್ನ ರಾಜ ಇನ್ನೂ ಹುಡುಗು-ಎಂದುಕೊಂಡಳು ಅಮ್ಮಿ. ಆದರೆ ಆ ಯುವಕ ಒಳ್ಳೆಯ ಕುಲದವನೇ ಆಗಿದ್ದರೆ? ಸುಶೀಲೆಗೆ—ಹಗಲುಗನಸು...ಭಾಗ್ಯಲಕ್ಷ್ಮಿ ಎಂದಾದರೂ ಮನೆ ಬಾಗಿಲಿಗೇ ಬರುವುದುಂಟೆ? ರಾಮಶಾಸ್ತ್ರಿ ಹೊರಟುಹೋಗುವಾಗ ತನ್ನೊಡನೆ ಹೇಳಿದ್ದರು: "ಚಿಂತೆ ಬಿಟ್ಬಿಡು ಬನಶಂಕರಿ. ನಾನೆಲ್ಲಾದರೂ ಒಳ್ಳೇ ಸಂಬಂಧ ಕುದುರಿಸ್ತೀನಿ."

ಚಿಂತಿಸಬೇಡವೆಂದು ಹೇಳುವುದು ಸುಲಭ. ಆದರೆ, ಕಂಡವರ ಹತ್ತು ಪ್ರಶ್ನೆಗೆ ಉತ್ತರ ಕೊಡಬೇಕಾದುದು ರಾಮಶಾಸ್ತ್ರಿಯಲ್ಲವಲ್ಲ!

...ಅಮ್ಮಿ, ಏನಾದರೂ ನೆಪಮಾಡಿ ಮಾಧವನ ಮನೆಯ ಎದುರಿಂದ ಹಾದು ಬರ ತೊಡಗಿದಳು. ಹೆಣ್ಣು ಹೆತ್ತ ತಾಯಿಯ ಸೂಕ್ಷ್ಮದೃಷ್ಟಿ ಆ ಗಂಡನ್ನು ಪರೀಕ್ಷಿಸಿತು.

ಒಮ್ಮೆ ಬಾಗಿಲಲ್ಲಿ ನಿಂತಿದ್ದ ಆತನನ್ನು ಕಂಡು ಅಮ್ಮಿ ಮುಗುಳ್ನಕ್ಕಳು.

"ನೀವೇನೇನಪ್ಪಾ ಮಾಧವ ಅನ್ನೋರು? ನಮ್ಮ ರಾಜಣ್ಣಂಗೆ ಪಾಠ ಗೊತ್ಮಾಡ್ಕೊಡ್ತೀನೀಂತ ಹೇಳಿದ್ರಂತೆ," ಎಂದಳು.

"ಹೌದಮ್ಮ, ನಾನೇ."

ಎಷ್ಟೊಂದು ವಿನಯ! ವಯಸ್ಸು ಇಪ್ಪತ್ತಾರು ಇಪ್ಪತ್ತೇಳು ಆಗಿರಬಹುದು ಅಷ್ಟೆ. ಬ್ರಾಹ್ಮಣ...ಅದರಲ್ಲಿ ಸಂಶಯವಿರಲಿಲ್ಲ.

ಮತ್ತೊಮ್ಮೆ ಮಾಧವನ ವಿಷಯವೆತ್ತಿ ರಾಜಣ್ಣನೊಡನೆ ಅವಳೆಂದಳು:

"ಆತ ಬ್ರಾಹ್ಮಣನೇ...ಸಂಶಯವಿಲ್ಲ."

"ಅವರು ಯಾರಾದ್ರೇನಮ್ಮಿ? ಜಾತಿಬಾಹಿರರು ಅನ್ನಿಸ್ಕೊಂಡ ನಾವು ಇನ್ನೊಬ್ರ ಕುಲ ಗೋತ್ರ ಕೇಳ್ತಾ ಇರೋಣ. ಚೆನ್ನಾಗಿದೆ!"

"ಶ್! ಹಾಗನ್ಬಾರ್ದು ರಾಜಣ್ಣ!"

"ಯಾಕೊ? ನಮ್ಮ ಪಾಲಿನ ದೈವ ಮುನಿಯುತ್ತೇನೊ!"

"ರಾಜಣ್ಣ!"

ಶುದ್ಧ ಹುಡುಗು, ಥೂ,—ಎಂದು ಮನಸಿನಲ್ಲೆ ಅಮ್ಮಿ ಮಗನನ್ನು ಬಯ್ದಳು.

...ಮಾಧವ, ಪಾಠದ ಮನೆಗಳನ್ನು ಗೊತ್ತು ಮಾಡಿಕೊಟ್ಟ.

ಈ ಒಂದು ವರ್ಷ ಕಾಲೇಜಿಲ್ಲವೆಂದು ತೀರ್ಮಾನಿಸಿದ್ದ ರಾಜಣ್ಣ, ತನ್ನ ಮೊದಲ ತಿಂಗಳ ಸಂಪಾದನೆಯಾಗಿ ಇಪ್ಪತ್ತೆರಡು ರೂಪಾಯಿಗಳನ್ನು ಮನೆಗೆ ತಂದ. ಅದನ್ನು ದೇವರ ಮುಂದಿಟ್ಟು, ದೀಪ ಹಚ್ಚಿ, ಅಮ್ಮ ಬಹಳ ಹೊತ್ತು ಧ್ಯಾನಮಗ್ನಳಾಗಿ ಕುಳಿತಳು.

ಅಮ್ಮಿಯ ಸಲಹೆಯಂತೆ ಮಾಧವನಿಗೆ ಕೊಡಲೆಂದು ಬಲು ಒಳ್ಳೆಯ ಚಟ್ನಿಪುಡಿ ಸಿದ್ಧವಾಯಿತು. ಸುಶೀಲ ಅದನ್ನೊಂದು ಬಾಟಲಿಯಲ್ಲಿ ತುಂಬಿಕೊಟ್ಟಳು. ರಾಜಣ್ಣ ಅದನ್ನೊಯ್ದು ಮಾಧವನ ಮುಂದಿಟ್ಟ.

"ತಗೊಳ್ಳಿ ಮಿಸ್ಟರ್ ಮಾಧವ್. ನಮ್ಮಮ್ಮ ಕೊಟ್ಟದ್ದು."

"ಬಡಪಾಯಿ ಒಬ್ನೇ ಇಲ್ಲಿ ಕೈಯಡಿಗೆ ಮಾಡ್ಕೋತೀನೀಂತ ಕನಿಕರವಾಯ್ತೇನೋ ಅವ್ರಿಗೆ ?"

"ಚಟ್ನಿಪುಡಿ ಮಾಡೋದರಲ್ಲಿ ನಮ್ಮಮ್ಮಂದು ಎತ್ತಿದ ಕೈ."

"ಅವರೇ ಮಾಡಿದ್ರೇನು ಇದನ್ನ ?"

ಯಾವುದೋ ಅರ್ಥವಾಗದ ಅಸ್ಪಷ್ಟವಾದ ಆಸೆ, ಮಾಧವನ ಬಾಯಿಯಿಂದ ಆ ಮಾತನ್ನು ಆಡಿಸಿತ್ತು. ಅದಕ್ಕೆ ಬಂದ ಉತ್ತರ ಅಪ್ರಿಯವೆನಿಸಲಿಲ್ಲ.

"ಇಲ್ಲ. ಈಗ ಅವರಿಗೆ ಮೈ ಚೆನ್ನಾಗಿಲ್ಲ. ಯಾವಾಗಲೂ ನಿಶ್ಶಕ್ತಿ...ಇದನ್ನ ಸುಶೀಲ—ನನ್ತಂಗಿ—ಮಾಡಿದ್ಲು."

"ಎಷ್ಟು ಓದಿದಾರೆ ನಿಮ್ತಂಗಿ ?"

"ಫೋರ್ತ್ ಫಾರ್ಮ್ ಪ್ಯಾಸ್ ಮಾಡಿದ್ದಾಳೆ. ನಮ್ಮಮ್ಮಿಗೆ ಕಾಹಿಲೆಯಾಯ್ತೂಂತ ಆಕೆ ಸ್ಕೂಲು ಬಿಟ್ಟಿಡ್ಬೇಕಾಯ್ತು."

"ಹಾಗೇನು ?"

...ರಾಜಣ್ಣನಿಗೆ ತಾಯಿಯ ಕಾತರ ಅರ್ಥವಾಗುತ್ತಿರಲಿಲ್ಲವೆಂದಲ್ಲ. ಮಾಧವ ಒಳ್ಳೆಯವನೇ ಆಗಿದ್ದ. ಆತ ಸುಶೀಲೆಯ ಗಂಡನಾದರೆ ಸಂತೋಷವೇ. ಆದರೆ ಅದಕ್ಕಾಗಿ ತಾನು ಏನು ಮಾಡಬೇಕೆಂಬುದು ರಾಜಣ್ಣನಿಗೆ ಗೊತ್ತಿರಲಿಲ್ಲ.

ಅಣ್ಣ ಹಿಂತಿರುಗಿದಾಗ ಸುಶೀಲ ಕೇಳಿದಳು :

"ಚಟ್ನಿಪುಡಿ ಚೆನ್ನಾಗಿದೆಯಾಂತ ?"

ಮನಸ್ಸಿನ ಅಸಮಾಧಾನಕ್ಕೆ ಸಿಡುಕಿನ ರೂಪ ಕೊಡುತ್ತಾ ರಾಜಣ್ಣನೆಂದ :

"ನಂಗೊತ್ತಿಲ್ಲ ! ನೀನೇ ಹೋಗಿ ಕೇಳು !"

"ಓ ! ಅದಕ್ಕೇನಂತೆ ? ನಾನೇ ಕೇಳ್ತೀನಿ ನಾಳೆ."

ಅಮ್ಮ ಮಕ್ಕಳ ಮಾತಿಗೆ ಕಿವಿಗೊಡುತ್ತಾ ಸುಮ್ಮನಿದ್ದಳು.

ಮರುದಿನ ಸುಶೀಲೆಯೇನೂ ಮಾಧವನನ್ನು ಕೇಳಲಿಲ್ಲ—ಚಟ್ನಿಪುಡಿ ಹೇಗಿದೇಂತ.

ಆದರೆ ಆತನೇ ಬಂದು ಬಾಗಿಲ ಮುಂದೆ ನಿಂತು, "ರಾಜಣ್ಣ, ಮಿಸ್ಟರ್ ರಾಜಣ್ಣ," ಎಂದು ಕೂಗಿದ.

ರಾಜಣ್ಣ ಸ್ನಾನಮಾಡುತಿದ್ದಲ್ಲಿಂದಲೇ, "ಒಳಗ್ಬನ್ನೀ" ಎಂದು ಉತ್ತರಿಸಿದ.

ಸುಶೀಲ, ಅರೆತೆರೆದ ಬಾಗಿಲನ್ನು ಬದಿಗೆ ಸರಿಸಿದಳು, ಮಾಧವನನ್ನು ನೋಡುತ್ತ. ಆತ ಮುಗುಳ್ನಗುತಿದ್ದ. ಸುಶೀಲೆಯ ಮುಖ ರಂಗೇರಿತು.

ಮಾಧವ ಒಳಬಂದು, ಹಾಸಿದ ಚಾಪೆಯ ಮೇಲೆ ಕುಳಿತ. ಅಮ್ಮಿ ಹೊರಕ್ಕೆ ಬರುತ್ತಲೆ ಅವನೆಂದ :

" ಚಟ್ನಿಪುಡಿ ಕಳಿಸ್ಕೊಟ್ಟಿದ್ರಿ. ಸುಮ್ನೆ ತೊಂದ್ರೆ ಕೊಟ್ಟಹಾಗಾಯ್ತು ನಿಮಗೆ...ಪುಡಿ ಚೆನ್ನಾಗಿದೆ. ಹೇಳಿ ಹೋಗೋಣಾಂತ ಬಂದೆ."

" ಅದೇನು ತೊಂದ್ರೇನೋ..."

ರಾಜಣ್ಣ ಬಚ್ಚಲಿನಿಂದ ಹೊರ ಬಂದ. ಸುರುಳಿಮಾಡಿ, ಗೋಡೆಗೆ ಆನಿಸಿ, ಒಂದರ ಮೇಲೊಂದಾಗಿ ಇರಿಸಿದ್ದ ಚಾಪೆ ದಿಂಬುಗಳಿಗೆ ಆತುಕೊಂಡು ಸುಶೀಲ ಮೂಲೆಯಲ್ಲಿ ಕುಳಿತಿದ್ದಳು. ಆಕೆಯ ಮುಖ ಅರಳಿತ್ತು.

ತಂಗಿಯನ್ನು ಹಾಗೆ ಕಾಣುತ್ತ, ಮಧುರ ಭಾವನೆಗಳಿಂದ ರಾಜಣ್ಣನ ಮೈ ಪುಲಕಗೊಂಡಿತು. ಆ ಮಾಧವನನ್ನು ಆಕೆ ಪ್ರೀತಿಸುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ ಹಾಗಾದರೆ. ಸದ್ಯಃ ಆ ಮಹಾರಾಯನೂ ಒಪ್ಪಿಕೊಂಡುಬಿಟ್ಟರೆ—

" ಸುಶೀ, ಒಂದಿಷ್ಟು ಕಾಫಿ ಮಾಡೇ," ಎಂದ ರಾಜಣ್ಣ ಗಟ್ಟಿಯಾಗಿ, ಮಾಧವನಿಗೆ ಕೇಳಿಸುವಂತೆ.

ಹೊರಗಿನಿಂದ ಮಾಧವನ ಉತ್ತರ ಬಂತು :

" ಬೇಡಿ ರಾಜಣ್ಣ, ಡಿಕಾಕ್ಷನ್ ಸೋಸಿ ಕೆಳಗಿಟ್ಟು ನಿಮ್ಮನ್ನೂ ಕರಕೊಂಡು ಹೋಗೋಣಾಂತ ಬಂದೆ."

" ನೀವೇ ಅಡುಗೆಮಾಡಿ ಬೇಸರ ಆಗಲ್ವೇನಪ್ಪಾ ? " ಎಂದು ಅಮ್ಮಿ ಅಂದಳು, ತನ್ನ ಸೂಚ್ಯಾರ್ಥದ ಪ್ರಶ್ನೆಗೆ ತಾನೇ ಪರವಾಗಿಲ್ಲ ಎಂದು ತಲೆದೂಗುತ್ತಾ.

" ಅಡುಗೆ ಏನು ಮಹಾ ? ಅಭ್ಯಾಸವಾದರೆ ಎಲ್ಲವೂ ಸುಲಭ."

" ಅದೇನೋ ನಿಜ," ಎಂದು ಅಮ್ಮಿ, ಮಾತಿನಲ್ಲಿ ತನಗೆ ಸೋಲಾಯಿತೆನ್ನುತ್ತ, ಸುಮ್ಮನಾದಳು.

...ಮಧ್ಯಾಹ್ನ ಪಕ್ಕದ ಮನೆಯಾಕೆ ಕೇಳಿದಳು :

" ಏನು, ಕೊನೇ ಮನೆಯಾತ ಬಂದ ಹಾಗಿತ್ತಲ್ಲಾ ಬೆಳಿಗ್ಗೆ ? "

ಅರ್ಥಪೂರ್ಣವಾದ ಪ್ರಶ್ನೆ.

" ನಮ್ಮ ರಾಜಣ್ಣ ಮತ್ತು ಆತ ಒಳ್ಳೇ ಸ್ನೇಹಿತರಾಗಿದಾರೆ. ಅದಕ್ಕೇ ಬಂದ. ಎಷ್ಟೆಂದರೂ ಹುಡುಗ್ರು ! "

" ಅಲ್ವೆ-ಪಾಪ ! "

ಅಮ್ಮಿಯ ಎದುರು ಅಷ್ಟಾದರೆ, ಹಿಂದಿನಿಂದ ಆ ಹೆಂಗಸರು ಆಡಿಕೊಳ್ಳುತ್ತಿದ್ದರು :

" ಹಳ್ಳೀಮುಕ್ಕ-ಏನೋಂತಿದ್ದೆ. ನೋಡಿ-ಮೆತ್ಗೆ - ! "

" ಅವನೂ ಸರೀನೇ, ಬಕ್ರಾ."

" ಸುಮ್ನಿರಿ ಇಪ್ರೆ. ಹೆಣ್ಣು ಹೆತ್ತು ಅನುಭವ ಇದ್ದಿದ್ರೆ ನೀವು ಹೀಗನ್ತಿರ್ಲಿಲ್ಲ."........

...ಮದುವೆಯ ಪ್ರಸ್ತಾಪವನ್ನು ಮೊದಲು ಮಾಡಿದವನು ಮಾಧವನೇ,-ಅದೂ ಸುಶೀಲೆಯೊಡನೆ !

ಆ ಸಂಗತಿ ನಡೆದುದು ಹೀಗೆ :

ಒಂದು ಸಂಜೆ ಮಲ್ಲೇಶ್ವರದ ಅಂಗಡಿ ಬೀದಿಗೆ ಹೋಗಿದ್ದ ರಾಜಣ್ಣ ಮತ್ತು ಸುಶೀಲ, ಶ್ರೀರಾಮಪುರಕ್ಕೆ- ಮನೆಗೆ- ಹಿಂತಿರುಗುತ್ತಿದ್ದರು.

ಬೀದಿಯ ವಿದ್ಯುದ್ದೀಪಗಳು ಹತ್ತಿಕೊಂಡಿದ್ದುವು, ಕತ್ತಲಾಗಿತ್ತು.

ಆಗ ಹಿಂದಿನಿಂದ ಯಾರೊ ಕರೆದರು :

" ರಾಜಣ್ಣ, ಸ್ವಲ್ಪ ನಿಲ್ಲಿ! "

ಕರೆದವನು ಮಾಧವ. ಹತ್ತಿರ ಬಂದೊಡನೆ ಆತನೆಂದ :

" ನಡೀರಿ, ನಾನೂ ಬರ್ತೀನಿ..."

ಸ್ವಲ್ಪ ದೂರ ಹೋದೊಡನೆ ಮರೆತುದೇನನ್ನೋ ಜ್ಞಾಪಿಸಿಕೊಂಡವನಂತೆ ಮಾಧವ ಹೇಳಿದ :

" ರಾಜಣ್ಣ, ಒಂದುಪಕಾರ ಮಾಡ್ತೀರಾ ? ಸೋಪು ತರೋಕೆ ಮರ್ತುಹೋಯ್ತು, ಒಂದೆರಡಾಣೆ ಸೋಪು ತರ್ತೀರಾ ? ನಾವಿಲ್ಲೇ ನಿಂತಿರ್ತೀವಿ."

ಇದೂ ಸರಿಯೆ !-ಎಂದುಕೊಂಡ ರಾಜಣ್ಣ. ಆತ ಮೌನವಾಗಿ ಅಂಗಡಿ ಬೀದಿಯತ್ತ ತಿರುಗಿದ.

" ದುಡ್ಡು ತಗೊಳ್ಳಿ ರಾಜಣ್ಣ."

" ಇದೆ ನನ್ಹತ್ರ. ಚಿಲ್ರೆ ಇದೆ."

ಮಾಧವನ ವರ್ತನೆ ವಿಚಿತ್ರವಾಗಿ ತಮಾಷೆಯಾಗಿ ರಾಜಣ್ಣನಿಗೆ ತೋರಿತು.

ಆತ ಹೋದೊಡನೆಯೇ ಮಾಧವ ಉದ್ವಿಗ್ನಗೊಂಡ ಧ್ವನಿಯಲ್ಲಿ ಹೇಳಿದ :

" ಸುಶೀಲ...ನೀನು ನನ್ನ ಮದ್ವೆ ಆಗ್ತೀಯಾ ? "

ರಾಜಣ್ಣನೊಡನೆ ಮಾಧವ " ಒಂದೆರಡಾಣೆ ಸೋಪು ತರ್ತೀರಾ ? " ಎಂದಾಗಲೇ, ಸುಶೀಲೆ ವಿಶೇಷವಾದುದೇನನ್ನೊ ನಿರೀಕ್ಷಿಸಿದ್ದಳು. ನಿರೀಕ್ಷೆ ಸುಳ್ಳಾಗಿರಲಿಲ್ಲ. ಮಾಧವನ ಮುಖವನ್ನು ತುಂಬುಗಣ್ಣುಗಳಿಂದ ಸುಶೀಲ ನೋಡಿದಳು. ಆ ಪ್ರಶ್ನೆ, ದೀಪಗಳ ಮಬ್ಬು ಬೆಳಕಿನಲ್ಲಿ ವಿಸ್ಮಯದ ವಿಭ್ರಮೆಯ ಲೋಕವನ್ನು ಆಕೆಯ ಸುತ್ತಲೂ ರಚಿಸಿತು. ಅದು ಕನಸೊ ನನಸೊ, ಸುಶೀಲೆಗೆ ಅದರ ಅರಿವಿರಲಿಲ್ಲ.

" ಹೇಳು ಸುಶೀಲ...ಸುಮ್ಮನಿದ್ದು ಹಿಂಸೆ ಕೊಡ್ಬೇಡ...ಹೇಳು."

ಯಾಕೆ ಹಿಂಸೆಯ ಮಾತು ? ಯಾರಿಗೆ ಹಿಂಸೆ? ಅದರ ಬದಲು ಮತ್ತೊಮ್ಮೆ ಮೊದಲಿನ ಪ್ರಶ್ನೆಯನ್ನೇ ಕೇಳಬಾರದೇ ಆತ ?

ಆತನ ಸ್ವರ, ಅಸಹನೆಯಿಂದ ತುಂಬಿದ್ದರೂ ಮೃದುವಾಗಿ ಮತ್ತೆ ನುಡಿಯಿತು :

" ಹೇಳು ಸುಶೀಲ...ನನ್ನನ್ನು ಮದ್ವೆ ಆಗ್ತೀಯೇನು ? "

ಉತ್ತರವಿಲ್ಲ ಈಗಲೂ.

ಕೊಡ ಒಡೆದು ನೀರು ಚೆಲ್ಲಿದ ಹಾಗೆ ಮಾತು ಬಂತು :

" ಹಾಗಾದ್ರೆ....ನಿನಗೆ ಇಷ್ಟವಿಲ್ಲಾಂತ್ಲೆ ? "

ಎಂಥ ಪ್ರಶ್ನೆ! ಯಾರಾದರೂ ಅಂಗೈಯಿಂದ ಆ ಮಬ್ದು ಬಾಯಿಯನ್ನು ಮುಚ್ಚಬಾರದೆ?

" ನಮ್ಮಮ್ಮನ ಕೇಳಿ..."

ಮಾಧವ ಸರಾಗವಾಗಿ ಉಸಿರಾಡಿದ.

" ಹೂಂ...ಕೇಳ್ತೀನಿ...ನಾಳೇನೇ..."

ಆ ಬಳಿಕ ಅವರು ಒಂದು ಮಾತನ್ನೂ ಆಡಲಿಲ್ಲ. ಸಾಬೂನಿನೊಡನೆ ಹಿಂತಿರುಗಿದ ರಾಜಣ್ಣನಿಗೆ, ಇವರೇನು ಮಾತೇ ಆಡಲಿಲ್ಲವೊ ಎನಿಸಿತು. ಬೊಂಬೆಗಳ ಹಾಗೆ ನಿಶ್ಚಲವಾಗಿ ನಿಂತಿದ್ದರಲ್ಲ-ಹಾಗೆಯೇ !

ಸುಶೀಲ ಮುಖವೆತ್ತಿ ಅಣ್ಣನನ್ನು ನೋಡಲೇ ಇಲ್ಲ: ಮಾಧವನಿಗೆ ಸಾಬೂನು ಕೊಟ್ಟಾಗ ಆತನೂ ತುಟಿ ಪಿಟ್ಟೆನ್ನಲಿಲ್ಲ. 'ತೊಂದ್ರೆ ಕೊಟ್ಟೆ' 'ಉಪಕಾರವಾಯ್ತು' ಎಂಬ ರೂಢಿಯ ಮಾತುಗಳನ್ನೂ ಆತ ಮರೆತಿದ್ದನೇನೋ !

ಆದರೂ ಸಂಗತಿ ಏನೆಂಬುದರ ಬಗೆಗೆ ರಾಜಣ್ಣನಿಗೆ ಸಂಶಯವೇ ಇರಲಿಲ್ಲ. ಆ ಸನ್ನಿವೇಶ ಆತನಿಗೆ ಬಲು ತಮಾಷೆಯಾಗಿ ತೋರಿ, ಮುಗುಳ್ನಗುತ್ತಲೇ ಆತ ಅವರಿಬ್ಬರ ನಡುವೆ ಹಾದಿ ನಡೆದ.

ಮನೆ ಸೇರಿದ ಮೇಲೆ ಪಿಸುಮಾತಿನಲ್ಲಿ ರಾಜಣ್ಣ ತಂಗಿಯನ್ನು ಕೇಳಿದ :

" ಏನಂದ್ನೇ ಮಾಧವ ? "

"......"

" ನನ್ನ ಮಾಡ್ಕೋತೀಯಾಂತ ಕೇಳ್ದ...ಅಷ್ಟೇ ತಾನೆ ? "

" ಹೋಗಣ್ಣ ..."

" ಸಾಕು ಜಂಭ. ನಾನು ಊಹಿಸಿದ್ದೇ ಸರಿ."

" ಊಂ..."

" ಏ ಅಮ್ಮೋ ! ಅಮ್ಮೋ !—"

ಅಮ್ಮಗೆ ಮಾಧವನ ವರ್ತನೆ ತಿಳಿದು ಸೋಜಿಗವೆನಿಸಿತು. ಹೆಣ್ಣನ್ನು ಹೆತ್ತ ತಾಯಿಗೆ ಏನೂ ಬೆಲೆ ಇಲ್ಲವೆಂದೆ ?...ಅಥವಾ ಈಗಿನ ಕಾಲದ ಹುಡುಗರ ರೀತಿನೀತಿಗಳೇ ಇಂಥವೋ ಏನೋ...

ಇದರಲ್ಲೇನೂ ಮೋಸವಿರಲಾರದಲ್ಲವೆ ? ಎಂಬ ಭೀತಿಯ ಶಂಕೆಯ ಒಂದು ಒಳಧ್ವನಿಯೂ ಕೇಳಿಸಿತ್ತು. ಆದರೆ ಆ ಭೀತಿ ಶಂಕೆಗಳನ್ನು ತೊಡೆಯುವ ಹಾಗೆ ಮುಂದೆ ಸುಳಿಯಿತು ಪ್ರಾಮಾಣಿಕವಾದ ಆತನ ನಗುಮುಖ.

...ಸುಶೀಲೆಗೆ ಹೇಳಿದ್ದಂತೆಯೇ ಮರುದಿನ ಮಾಧವ ಬಂದ.

ಸ್ವಲ್ಪ ಹೊತ್ತು ಆತ ಏನನ್ನೂ ಮಾತನಾಡಲಿಲ್ಲ. ಸುಶೀಲ ಮಾಡಿದ ಕಾಫಿಯನ್ನು ಅಮ್ಮ ತಾನು ಒಯ್ದು ಕೊಟ್ಟಳು. ಆಗಲೂ ಆತ ಮೌನವಾಗಿದ್ದ. ಆ ಮೌನವನ್ನು ಕಂಡು, ಮೈಯೆಲ್ಲ ಕಿವಿಯಾಗಿ ಒಳಗೆ ಕುಳಿತಿದ್ದ ಸುಶೀಲೆಗೆ ಅಳುಕಿತು.

ಆ ವಾತಾವರಣ ಅಸಹನೀಯವೆನಿಸಿದಾಗ ಅಮ್ಮಯೇ ಕೇಳಿದಳು :

" ಏನು ಸಮಾಚಾರ ? "

" ಒಂದು ವಿಷಯ ಕೇಳೋಣಾಂತ ಬಂದೆ."

" ಏನು ಕೇಳ್ಬಾರ್ದೆ ? "

" ನೀವೇನೂ ತಪ್ಪು ಭಾವಿಸ್ಕೂಡ್ದು. ನಮ್ಮನೇಲಿ ಇಲ್ಲಿ ಹಿರೀರು ಯಾರೂ ಇಲ್ಲ. ಅದಕ್ಕೆ ನಾನೇ ಮಾತಾಡ್ತಿದೀನಿ-"

ಘಾಟಿ-ಎಂದುಕೊಂಡಳು ಅಮ್ಮಿ. ನಿನ್ನೆ ಸುಶೀಲೆಯೊಡನೆ ಮಾತನಾಡಿದಾಗ ಆ ಔಚಿತ್ಯದ ಪ್ರಶ್ನೆ ಎಲ್ಲಿಗೆ ಹೋಗಿತ್ತೊ ?

" ಆಗಲಿ ಪರವಾಗಿಲ್ಲ."

" ಈ ಒಂಟಿ ಜೀವನದಿಂದ ಬೇಸರ ಬಂದಿದೆ. ಮದುವೆ ಮಾಡ್ಕೊಬೇಕೂಂತಿದೀನಿ ಸುಶೀಲೇನ—"

" ಹುಂ ಹಾಗೋ ? "

....................

" ನಾವು ಯಾವ ಜನ ಅಂತ ತಿಳಕೊಂಡಿದೀರಪ್ಪಾ ? " " ಯಾಕೆ ?-ನೀವು-? "

" ಅಷ್ಟರಲ್ಲೆ ಹಿಂದೇಟು ಹೊಡೀತಿದೀರಲ್ಲ ! ಒಂದು ವೇಳೆ ನಾವು ನಿಮ್ಜನವಲ್ದೇ ಹೋದ್ರೆ—? "

" ನೀವು ಯಾರೇ ಇದ್ರೂ ಸರೀನೆ. ನಾನು ನಿಮಗೆಲ್ಲ ಒಪ್ಪಿಗೆಯಾದರೆ ಸಾಕು."

ಪ್ರೀತಿ ಏನನ್ನು ಮಾಡುವುದಕ್ಕೂ ಸಮರ್ಥವಾಗಿರುತ್ತದೆಂಬ ವಿಷಯ ಅಮ್ಮಿಗೆ ತಿಳಿಯದ್ದೇನೂ ಆಗಿರಲಿಲ್ಲ.

" ಯೋಚನೆ ಮಾಡಿ ಹೇಳ್ತೀನಿ, ನಿಮ್ಜಾತಕ ಕೊಟ್ಟಿರಿ."

" ನನ್ನ ಜಾತಕವೇ ಇಲ್ಲ. ನನಗೆ ಅದರಲ್ಲಿ ನಂಬಿಕೆ ಇಲ್ಲ."

ಅಮ್ಮಿಗೆ ಕಾಲಿಗೊಂದು ಮುಳ್ಳು ಚುಚ್ಚಿದ ಹಾಗಾಯಿತು. ಸುಶೀಲ ಸ್ವಪ್ನಲೋಕದಿಂದ ಕೆಳಕ್ಕಿಳಿದಳು. ರಾಜಣ್ಣನಿಗೆ ಕಸಿವಿಸಿಯಾಯಿತು.

ತನ್ನ ಅವಿಶ್ವಾಸವನ್ನು ಸಮರ್ಥಿಸುವಂತೆ ಆತನೇ ಹೇಳಿದ :

" ನನ್ನ ವಿಷಯವಾಗಿ ಜಾತಕ ನೋಡಿ ಜೋಯಿಸರು ಹೇಳಿದ್ದೊಂದೂ ನಿಜವಾಗಿಲ್ಲ."

ಜಾತಕ ಮತ್ತು ಮದುವೆ...ಅಮ್ಮಿ ಯೋಚಿಸಿದಳು...ಬಲು ಹಿಂದೆ ತನ್ನ ಮಾವ ರಾಯನಹಳ್ಳಿಗೆ ತನ್ನ ಜಾತಕವನ್ನು ಒಯ್ದು ತೂಗಿ ನೋಡಿದ್ದರಲ್ಲವೆ ? ಜಾತಕಗಳು ಸರಿಹೋಗಿದ್ದುವು. ಆದರೂ ಏನಾಯಿತು ?

" ಸ್ವಲ್ಪ ದಿವಸ ಪುರಸತ್ತು ಕೊಡಪ್ಪ. ಆಮೇಲೆ ಹೇಳ್ತೀವಿ."

...ಅಮ್ಮಿ ಮಗನಿಗೆ ಹೇಳಿ, ರಾಮಶಾಸ್ತ್ರಿಗೆ ದೀರ್ಘವಾದ ಕಾಗದ ಬರೆಸಿದಳು. " ಸಾಧ್ಯವಾದರೆ ಒಮ್ಮೆ ಬಂದು ಹೋಗಬೇಕು. ಬರದೇ ಇರಬಾರದು," ಎಂದು ಕೇಳಿದಳು.

ಆದರೆ ರಾಮಶಾಸ್ತ್ರಿ ಬರುವುದಾಗಲಿಲ್ಲ. ಶಕುಂತಳಾ ಹೆರಿಗೆಗೆಂದು ಬಾಳೆಮಣ್ಣೂರಿಗೆ ಬಂದಿದ್ದಳು. ಅದೇ ಹೊತ್ತಿನಲ್ಲಿ ಸುಂದರಮ್ಮ ಹಾಸಿಗೆ ಹಿಡಿದಿದ್ದಳು ಬೇರೆ. ಆದರೆ ರಾಮಶಾಸ್ತ್ರಿ, ಧೈರ್ಯ ತುಂಬುವಂತಹ ಕಾಗದ ಬರೆದಿದ್ದ :

"....ನೀವು ಜಾತಕ ಎಂತ ಯಾಕೆ ಬಡಕೊಳ್ಳಬೇಕೋ ನನಗೆ ಗೊತ್ತಾಗುವುದಿಲ್ಲ. ಶಕುಂತಳೆಯ ಗಂಡನ ಕಡೆಯುವರು ತಲೆಹರಟೆ ಮಾಡಬಹುದೂಂತ, ಆ ಗಂಡಿನ ಜಾತಕ ತರಿಸಿ ಅದಕ್ಕೆ ಸರಿಹೋಗುವ ಹಾಗೆ ಮಗಳ ಜಾತಕವನ್ನು ನಾನೇ ಮತ್ತೊಮ್ಮೆ ಬರೆದೆ ! ಈಗ ಎಷ್ಟು ಮದುವೆಗಳು ಆ ರೀತಿ ನಡೆಯುವುದಿಲ್ಲ ಹೇಳಿ? ನೀವೇನೂ ಯೋಚಿಸಬಾರದು. ಹುಡುಗ ನಿಮಗೆ ಒಪ್ಪಿಗೆಯೊ ? ಅವನು ಹೇಳಿದ್ದೆಲ್ಲಾ ನಿಜವೊ ? ಚೆನ್ನಾಗಿ ಪರೀಕ್ಷಿಸಿ. ನನ್ನನ್ನು ಕೇಳಿದರೆ ಅದಕ್ಕಿಂತಲೂ ಮುಖ್ಯವಾದ್ದು ಸುಶೀಲೆಯ ಅಭಿಪ್ರಾಯ. ಇನ್ನೊಂದು ಮುಖ್ಯವಾದ

ಅಂಶ ನಿಮಗೇ ಸಂಬಂಧಿಸಿದ್ದು. ನಾಳೆ ತೊಂದರೆಯಾಗಬಾರದು. ನಿಮ್ಮ ವಿಷಯ ಸೂಚ್ಯವಾಗಿ ಈಗಲೇ ಆತನಿಗೆ ಹೇಳುವುದು ವಾಸಿ. . .ಮದುವೆಯಾಗುವವರ ಮನಸ್ಸು ಮುಖ್ಯ. . .ಹುಡುಗ ಹುಡುಗಿ ಇಬ್ಬರೂ ಒಪ್ಪಿದರೆ ಮಾಡಿಯೇ ಬಿಡಲಿ ಅಂತ ಸುಂದರಿಯೂ ಹೇಳುತ್ತಾಳೆ. ಎಲ್ಲಾದರೂ ಪುಣ್ಯಕ್ಷೇತ್ರದಲ್ಲಿ ಮಾಡಿ. ಖರ್ಚು ಕಡಮೆ. ನಾನೂ ಬರುವುದಕ್ಕೆ ಪ್ರಯತ್ನಿಸುತ್ತೇನೆ. . ."

—ಹೀಗೆಯೇ ಇನ್ನೂ: ಉತ್ತರ ದೀರ್ಘವಾಗಿತ್ತು.

ಅದನ್ನು ಮಗನ ಕೈಯಲ್ಲಿ ಎರಡು ಸಾರೆ ಓದಿಸಿ, ತಾನೂ ಒಮ್ಮೆ ಓದಿ, ಮನಸ್ಸಿನ ಸಂದೇಹಗಳನ್ನೆಲ್ಲ ಅಮ್ಮಿ ನಿವಾರಿಸಿಕೊಂಡಳು.

ಮನೆಯಲ್ಲಿ ತಾಯಿ–ಅಣ್ಣ ಇಲ್ಲದೇ ಇದ್ದಾಗ ಸುಶೀಲ ದೇವರ ಪಟದ ಹಿಂದೆ ಇರಿಸಿದ್ದ ಆ ಕಾಗದವನ್ನು ಕದ್ದು ಓದಿದಳು.

. . .ಇನ್ನೇನು, ಎಲ್ಲವೂ ಸರಿಹೋಗುತ್ತದೆ-ಎಂದು ಅಮ್ಮಿ ಭಾವಿಸಿದ್ದಾಗಲೆ, ಮಾಧವ ತನಗೆ ಬೊಂಬಾಯಿಗೆ ವರ್ಗವಾಯಿತೆಂದು ಹೇಳಿದ.

ಮದುವೆಯ ಪ್ರಸ್ತಾಪ ಮಾಡಿದ ದಿನದಿಂದ ಮಾಧವನ ಮುಖ ಬಾಡಿಯೇ ಇತ್ತು. ಆತ ರಾಜಣ್ಣನೊಡನೆ ಸರಿಯಾಗಿ ಮಾತನ್ನೂ ಆಡುತ್ತಿರಲಿಲ್ಲ.

"ಯಾವತ್ತು ಹೊರಡ್ತೀರಾ ಬೊಂಬಾಯಿಗೆ ?"

"ಮೊದಲ್ನೇ ತಾರೀಖೇ ನಾನು ಅಲ್ಲಿರ್ಬೇಕು. ಶನಿವಾರ ಹೊರಡ್ತೀನಿ."

ಅಮ್ಮಿ ಆತನನ್ನು ಊಟಕ್ಕೆ ಕರೆದಳು. ಅವನು ಬರಲಿಲ್ಲ.

"ಬೇಡಿ, ನಾ ಒಲ್ಲೆ, ಬೊಂಬಾಯಿಗೆ ಹೋಗಿ ಮನೆ ಮಾಡ್ತೀನಿ. ನೀವು ಕಾಗದ ಬರೆದ್ಮೇಲೆ ಇಲ್ಲಿಗೆ ಬಂದು ಹೋಗ್ತೀನಿ. ಇನ್ನು ಅಳಿಯನಾಗಿಯೇ ನಾನು ನಿಮ್ಮನೇ ಊಟ ಮಾಡೋದು. ಇಲ್ಲದಿದ್ರೆ—"

"ಹಾಗೆಲ್ಲ ಶಪಥ ಹಾಕ್ಕೋ ಬಾರದಪ್ಪ."

"ಅದರಲ್ಲೇನು ತಪ್ಪು ? ಮನಸ್ಸಿಗೆ ಅದು ಸರೀಂತ ತೋರುತ್ತೆ. ಹಾಗೇ ಮಾಡ್ತೀನಿ."

ನಿಗರ್ವಿ, ಆದರೂ ಹಟವಾದಿ. ಅದು ತನ್ನಣ್ಣ ರಾಮಕೃಷ್ಣನಲ್ಲೂ ಇದ್ದೊಂದು ಗುಣ. . .ಏನು ಮಾಡಬೇಕೆಂದು ಅಮ್ಮಿಗೆ ತೋಚಲಿಲ್ಲ. ದೇವರ ಮೇಲೆ ಭಾರ ಹಾಕಿ ಆಕೆ ಸುಮ್ಮನಾದಳು.

. . . ಮಾಧವ ಹೊರಟು ನಿಂತವನು ಹೊರಗಿನಿಂದಲೆ, "ಹೋಗಿ ಬರ್ತೀನಿ" ಎಂದ. ಆತನ ಕಣ್ಣುಗಳು ಸುಶೀಲೆಯನ್ನು ಹುಡುಕಿದುವು, ತಾಯಿಯ ಮರೆಯಲ್ಲೆ ನಿಂತಿದ್ದಳು ಆ ಸಜಲನಯನೆ. ಬೇಗ ಬನ್ನಿ—ಎನ್ನುವಂತೆ ಆಕೆಯ ತುಟಿಗಳು ಚಲಿಸುತ್ತಿದ್ದುವು.

ರಾಜಣ್ಣ ರೈಲು ನಿಲ್ದಾಣದವರೆಗೂ ಹೋಗಿ ಬೀಳ್ಕೊಟ್ಟು ಬಂದ. ಸುಶೀಲ ಒಂದು ಅಗುಳು ಅನ್ನವನ್ನೂ ತಿನ್ನದೆ ಆ ದಿನವಿಡೀ ಉಪವಾಸವಿದ್ದಳು.

. . . ಅದಾಗಿ ಒಂದು ವಾರದ ಮೇಲೆ, ಅಮ್ಮಿಯ ಅಪೇಕ್ಷೆಯಂತೆ ರಾಜಣ್ಣ, ಮಾಧವನಿಗೆ ಏಲು ದೀರ್ಘವಾದ ಕಾಗದ ಬರೆದ.

"ಪ್ರಿಯ ಮಾಧವ, ನಾವು ನಿಮಗೊಂದು ವಿಷಯ ತಿಳಿಸಬೇಕಾಗಿತ್ತು. . ."

ಘಾಟಿ-ಎಂದುಕೊಂಡಳು ಅಮ್ಮಿ. ನಿನ್ನೆ ಸುಶೀಲೆಯೊಡನೆ ಮಾತನಾಡಿದಾಗ ಆ ಔಚಿತ್ಯದ ಪ್ರಶ್ನೆ ಎಲ್ಲಿಗೆ ಹೋಗಿತ್ತೊ ?

"ಆಗಲಿ ಪರವಾಗಿಲ್ಲ."

"ಈ ಒಂಟಿ ಜೀವನದಿಂದ ಬೇಸರ ಬಂದಿದೆ. ಮದುವೆ ಮಾಡ್ಕೋಬೇಕೂಂತಿದೀನಿ ಸುಶೀಲೇನ—"

"ಹುಂ ಹಾಗೋ ?"

....................

"ನಾವು ಯಾವ ಜನ ಅಂತ ತಿಳಕೊಂಡಿದೀರಪ್ಪಾ ?" "ಯಾಕೆ ?-ನೀವು-?"

"ಅಷ್ಟರಲ್ಲೆ ಹಿಂದೇಟು ಹೊಡೀತಿದೀರಲ್ಲ! ಒಂದು ವೇಳೆ ನಾವು ನಿಮ್ಜನವಲ್ದೇ ಹೋದ್ರೆ—?"

"ನೀವು ಯಾರೇ ಇದ್ರೂ ಸರೀನೆ. ನಾನು ನಿಮಗೆಲ್ಲ ಒಪ್ಪಿಗೆಯಾದರೆ ಸಾಕು."

ಪ್ರೀತಿ ಏನನ್ನು ಮಾಡುವುದಕ್ಕೂ ಸಮರ್ಥವಾಗಿರುತ್ತದೆಂಬ ವಿಷಯ ಅಮ್ಮಿಗೆ ತಿಳಿಯದ್ದೇನೂ ಆಗಿರಲಿಲ್ಲ.

"ಯೋಚನೆ ಮಾಡಿ ಹೇಳ್ತೀನಿ, ನಿಮ್ಜಾತಕ ಕೊಟ್ಟಿರಿ."

"ನನ್ನ ಜಾತಕವೇ ಇಲ್ಲ. ನನಗೆ ಅದರಲ್ಲಿ ನಂಬಿಕೆ ಇಲ್ಲ."

ಅಮ್ಮಿಗೆ ಕಾಲಿಗೊಂದು ಮುಳ್ಳು ಚುಚ್ಚಿದ ಹಾಗಾಯಿತು. ಸುಶೀಲ ಸ್ವಪ್ನಲೋಕದಿಂದ ಕೆಳಕ್ಕಿಳಿದಳು. ರಾಜಣ್ಣನಿಗೆ ಕಸಿವಿಸಿಯಾಯಿತು.

ತನ್ನ ಅವಿಶ್ವಾಸವನ್ನು ಸಮರ್ಥಿಸುವಂತೆ ಆತನೇ ಹೇಳಿದ :

"ನನ್ನ ವಿಷಯವಾಗಿ ಜಾತಕ ನೋಡಿ ಜೋಯಿಸರು ಹೇಳಿದ್ದೊಂದೂ ನಿಜವಾಗಿಲ್ಲ."

ಜಾತಕ ಮತ್ತು ಮದುವೆ...ಅಮ್ಮಿ ಯೋಚಿಸಿದಳು...ಬಲು ಹಿಂದೆ ತನ್ನ ಮಾವ ರಾಯನಹಳ್ಳಿಗೆ ತನ್ನ ಜಾತಕವನ್ನು ಒಯ್ದು ತೂಗಿ ನೋಡಿದ್ದರಲ್ಲವೆ ? ಜಾತಕಗಳು ಸರಿ ಹೋಗಿದ್ದುವು. ಆದರೂ ಏನಾಯಿತು ?

"ಸ್ವಲ್ಪ ದಿವಸ ಪುರಸತ್ತು ಕೊಡಪ್ಪ. ಆಮೇಲೆ ಹೇಳ್ತೀವಿ."

...ಅಮ್ಮಿ ಮಗನಿಗೆ ಹೇಳಿ, ರಾಮಶಾಸ್ತ್ರಿಗೆ ದೀರ್ಘವಾದ ಕಾಗದ ಬರೆಸಿದಳು. "ಸಾಧ್ಯವಾದರೆ ಒಮ್ಮೆ ಬಂದು ಹೋಗಬೇಕು. ಬರದೇ ಇರಬಾರದು," ಎಂದು ಕೇಳಿದಳು.

ಆದರೆ ರಾಮಶಾಸ್ತ್ರಿ ಬರುವುದಾಗಲಿಲ್ಲ. ಶಕುಂತಳಾ ಹೆರಿಗೆಗೆಂದು ಬಾಳೆಮಣ್ಣೂರಿಗೆ ಬಂದಿದ್ದಳು. ಅದೇ ಹೊತ್ತಿನಲ್ಲಿ ಸುಂದರಮ್ಮ ಹಾಸಿಗೆ ಹಿಡಿದಿದ್ದಳು ಬೇರೆ. ಆದರೆ ರಾಮಶಾಸ್ತ್ರಿ, ಧೈರ್ಯ ತುಂಬುವಂತಹ ಕಾಗದ ಬರೆದಿದ್ದ :

"....ನೀವು ಜಾತಕ ಎಂತ ಯಾಕೆ ಬಡಕೊಳ್ಳಬೇಕೋ ನನಗೆ ಗೊತ್ತಾಗುವುದಿಲ್ಲ. ಶಕುಂತಳೆಯ ಗಂಡನ ಕಡೆಯವರು ತಲೆಹರಟೆ ಮಾಡಬಹುದೂಂತ, ಆ ಗಂಡಿನ ಜಾತಕ ತರಿಸಿ ಅದಕ್ಕೆ ಸರಿಹೋಗುವ ಹಾಗೆ ಮಗಳ ಜಾತಕವನ್ನು ನಾನೇ ಮತ್ತೊಮ್ಮೆ ಬರೆದೆ! ಈಗ ಎಷ್ಟು ಮದುವೆಗಳು ಆ ರೀತಿ ನಡೆಯುವುದಿಲ್ಲ ಹೇಳಿ? ನೀವೇನೂ ಯೋಚಿಸಬಾರದು. ಹುಡುಗ ನಿಮಗೆ ಒಪ್ಪಿಗೆಯೊ ? ಅವನು ಹೇಳಿದ್ದೆಲ್ಲಾ ನಿಜವೊ ? ಚೆನ್ನಾಗಿ ಪರೀಕ್ಷಿಸಿ. ನನ್ನನ್ನು ಕೇಳಿದರೆ ಅದಕ್ಕಿಂತಲೂ ಮುಖ್ಯವಾದ್ದು ಸುಶೀಲೆಯ ಅಭಿಪ್ರಾಯ. ಇನ್ನೊಂದು ಮುಖ್ಯವಾದ

ಅಂಶ ನಿಮಗೇ ಸಂಬಂಧಿಸಿದ್ದು. ನಾಳೆ ತೊಂದರೆಯಾಗಬಾರದು. ನಿಮ್ಮ ವಿಷಯ ಸೂಚ್ಯವಾಗಿ ಈಗಲೇ ಆತನಿಗೆ ಹೇಳುವುದು ವಾಸಿ. . .ಮದುವೆಯಾಗುವವರ ಮನಸ್ಸು ಮುಖ್ಯ. . .ಹುಡುಗ ಹುಡುಗಿ ಇಬ್ಬರೂ ಒಪ್ಪಿದರೆ ಮಾಡಿಯೇ ಬಿಡಲಿ ಅಂತ ಸುಂದರಿಯೂ ಹೇಳುತ್ತಾಳೆ. ಎಲ್ಲಾದರೂ ಪುಣ್ಯಕ್ಷೇತ್ರದಲ್ಲಿ ಮಾಡಿ. ಖರ್ಚು ಕಡಮೆ. ನಾನೂ ಬರುವುದಕ್ಕೆ ಪ್ರಯತ್ನಿಸುತ್ತೇನೆ. . ."

—ಹೀಗೆಯೇ ಇನ್ನೂ: ಉತ್ತರ ದೀರ್ಘವಾಗಿತ್ತು.

ಅದನ್ನು ಮಗನ ಕೈಯಲ್ಲಿ ಎರಡು ಸಾರೆ ಓದಿಸಿ, ತಾನೂ ಒಮ್ಮೆ ಓದಿ, ಮನಸ್ಸಿನ ಸಂದೇಹಗಳನ್ನೆಲ್ಲ ಅಮ್ಮಿ ನಿವಾರಿಸಿಕೊಂಡಳು.

ಮನೆಯಲ್ಲಿ ತಾಯಿ–ಅಣ್ಣ ಇಲ್ಲದೇ ಇದ್ದಾಗ ಸುಶೀಲ ದೇವರ ಪಟದ ಹಿಂದೆ ಇರಿಸಿದ್ದ ಆ ಕಾಗದವನ್ನು ಕದ್ದು ಓದಿದಳು.

. . .ಇನ್ನೇನು, ಎಲ್ಲವೂ ಸರಿಹೋಗುತ್ತದೆ-ಎಂದು ಅಮ್ಮಿ ಭಾವಿಸಿದ್ದಾಗಲೆ, ಮಾಧವ ತನಗೆ ಬೊಂಬಾಯಿಗೆ ವರ್ಗವಾಯಿತೆಂದು ಹೇಳಿದ.

ಮದುವೆಯ ಪ್ರಸ್ತಾಪ ಮಾಡಿದ ದಿನದಿಂದ ಮಾಧವನ ಮುಖ ಬಾಡಿಯೇ ಇತ್ತು. ಆತ ರಾಜಣ್ಣನೊಡನೆ ಸರಿಯಾಗಿ ಮಾತನ್ನೂ ಆಡುತ್ತಿರಲಿಲ್ಲ.

"ಯಾವತ್ತು ಹೊರಡ್ತೀರಾ ಬೊಂಬಾಯಿಗೆ ?"

"ಮೊದಲ್ನೇ ತಾರೀಖೇ ನಾನು ಅಲ್ಲಿರ್ಬೇಕು. ಶನಿವಾರ ಹೊರಡ್ತೀನಿ."

ಅಮ್ಮಿ ಆತನನ್ನು ಊಟಕ್ಕೆ ಕರೆದಳು. ಅವನು ಬರಲಿಲ್ಲ.

"ಬೇಡಿ, ನಾ ಒಲ್ಲೆ, ಬೊಂಬಾಯಿಗೆ ಹೋಗಿ ಮನೆ ಮಾಡ್ತೀನಿ. ನೀವು ಕಾಗದ ಬರೆದ್ಮೇಲೆ ಇಲ್ಲಿಗೆ ಬಂದು ಹೋಗ್ತೀನಿ. ಇನ್ನು ಅಳಿಯನಾಗಿಯೇ ನಾನು ನಿಮ್ಮನೇ ಊಟ ಮಾಡೋದು. ಇಲ್ಲದಿದ್ರೆ—"

"ಹಾಗೆಲ್ಲ ಶಪಥ ಹಾಕ್ಕೋ ಬಾರದಪ್ಪ."

"ಅದರಲ್ಲೇನು ತಪ್ಪು ? ಮನಸ್ಸಿಗೆ ಅದು ಸರೀಂತ ತೋರುತ್ತೆ. ಹಾಗೇ ಮಾಡ್ತೀನಿ."

ನಿಗರ್ವಿ, ಆದರೂ ಹಟವಾದಿ. ಅದು ತನ್ನಣ್ಣ ರಾಮಕೃಷ್ಣನಲ್ಲೂ ಇದ್ದೊಂದು ಗುಣ. . .ಏನು ಮಾಡಬೇಕೆಂದು ಅಮ್ಮಿಗೆ ತೋಚಲಿಲ್ಲ. ದೇವರ ಮೇಲೆ ಭಾರ ಹಾಕಿ ಆಕೆ ಸುಮ್ಮನಾದಳು.

. . . ಮಾಧವ ಹೊರಟು ನಿಂತವನು ಹೊರಗಿನಿಂದಲೆ, "ಹೋಗಿ ಬರ್ತೀನಿ" ಎಂದ. ಆತನ ಕಣ್ಣುಗಳು ಸುಶೀಲೆಯನ್ನು ಹುಡುಕಿದುವು, ತಾಯಿಯ ಮರೆಯಲ್ಲೆ ನಿಂತಿದ್ದಳು ಆ ಸಜಲನಯನೆ. ಬೇಗ ಬನ್ನಿ—ಎನ್ನುವಂತೆ ಆಕೆಯ ತುಟಿಗಳು ಚಲಿಸುತ್ತಿದ್ದುವು.

ರಾಜಣ್ಣ ರೈಲು ನಿಲ್ದಾಣದವರೆಗೂ ಹೋಗಿ ಬೀಳ್ಕೊಟ್ಟು ಬಂದ. ಸುಶೀಲ ಒಂದು ಅಗುಳು ಅನ್ನವನ್ನೂ ತಿನ್ನದೆ ಆ ದಿನವಿಡೀ ಉಪವಾಸವಿದ್ದಳು.

. . . ಅದಾಗಿ ಒಂದು ವಾರದ ಮೇಲೆ, ಅಮ್ಮಿಯ ಅಪೇಕ್ಷೆಯಂತೆ ರಾಜಣ್ಣ, ಮಾಧವನಿಗೆ ಬಲು ದೀರ್ಘವಾದ ಕಾಗದ ಬರೆದ.

"ಪ್ರಿಯ ಮಾಧವ, ನಾವು ನಿಮಗೊಂದು ವಿಷಯ ತಿಳಿಸಬೇಕಾಗಿತ್ತು. . ."

—ಎಂದು ಆರಂಭವಾಗಿ ಆ ಕಾಗದ ಆ ಸಂಸಾರದ ಕಥೆಯನ್ನೆಲ್ಲ ಹೇಳಿತು. ಬಳಿಕ, ಕೊನೆಯಲ್ಲಿ—

"...ನಾವು ಕಷ್ಟದಲ್ಲಿದ್ದಾಗ ನನಗೆ—ಆ ಮೂಲಕ ನಮ್ಮ ಸಂಸಾರಕ್ಕೆ—ಒಳ್ಳೆಯ ಸ್ನೇಹಿತರಾಗಿ ನೀವು ಸಹಾಯ ಮಾಡಿದಿರಿ. ಅದು ನಾನು ತೀರಿಸಲಾಗದ ಋಣ. ನನ್ನ ತಂಗಿ ಸುಶೀಲೆಯಂತೂ ನಿಮ್ಮ ಧ್ಯಾನದಲ್ಲೇ ಅರೆಜೀವವಾಗಿದ್ದಾಳೆ. ನಮ್ಮ ತಾಯಿ—ಎಷ್ಟೋ ಕಷ್ಟ ಸಂಕಷ್ಟ ಅನುಭವಿಸಿದ ತಾಯಿ—ನಿಮ್ಮನ್ನು ಮನಸಾರೆ ಪ್ರೀತಿಸುತ್ತಾಳೆ. ನೀವು ಮದುವೆಗೆ ಒಪ್ಪಿದರೆ ನಮಗೆಲ್ಲರಿಗೂ ಸಂತೋಷವೇ. ಆದರೆ ಇದ್ದ ವಿಷಯವನ್ನು ಹೇಳಿಯೇ ತೀರ ಬೇಕೆಂದು ಈ ಕಾಗದ ಬರೆದಿದ್ದೇನೆ. ಮರುಟಪಾಲಿನಲ್ಲೆ ಉತ್ತರ ಹಾಕುವಿರಾ ? ಉತ್ತರವನ್ನೇ ಇದಿರುನೋಡುತ್ತೇವೆ . . . . "

ತಾಯಿ - ಮಕ್ಕಳು ಉತ್ತರವನ್ನೇನೋ ಇದಿರು ನೋಡಿದರು. ಮರುಟಪಾಲಲ್ಲಿ ಅದು ಬರಲಿಲ್ಲ. ಅನಂತರವೂ ಬಹಳ ದಿನ ಬರಲಿಲ್ಲ. ನಿರಾಸೆಯ ಮೋಡ ಆ ಮನೆಯನ್ನು ಕವಿಯಿತು. ತಂಗಿಯ ಸಂಕಟವನ್ನು ನೋಡಲಾರದೆ ರಾಜಣ್ಣ, 'ಆತನ ಪರಿಚಯ ಆಗದೆ ಇದ್ದಿದ್ದರೇ ಚೆನ್ನಾಗಿತ್ತು,' ಎಂದುಕೊಂಡ.

ಆದರೂ ಸುಶೀಲ ಅಂಚೆಯವನ ಹಾದಿ ನೋಡುತ್ತಿದ್ದಳು.

ಒಂದು ದಿನ ಅಂಚೆಯವನು, "ಬಿ. ಎನ್. ರಾಜಣ್ಣ, ನಿಮ್ಮನೇದು ತಾನೆ ?" ಎಂದ, ಒಂದು ಲಕೋಟೆಯನ್ನು ಕೈಗೆತ್ತಿಕೊಳ್ಳುತ್ತಾ.

"ಹೂಂ. ನಮ್ಮದೇ" ಅಂದಳು ಸುಶೀಲ, ಅದನ್ನು ಪಡೆಯುತ್ತಾ.

ಅಣ್ಣ ಮನೆಯಲ್ಲಿರಲಿಲ್ಲ. ಅಮ್ಮ, "ಕಾಗದ ಬಂತೇನೆ ?" ಎಂದಳು.

ಸುಶೀಲ ಉತ್ತರವೀಯಲಿಲ್ಲ. ಆಕೆಯ ಕೈಗಳು ನಡುಗುತ್ತಿದ್ದುವು. ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಕೆಳಗೆ ಬೀಳದಂತೆ ಕಾಗದವನ್ನಾಕೆ ಗಟ್ಟಿಯಾಗಿ ಹಿಡಿದುಕೊಂಡಳು.

ಅಮ್ಮ ಹೊರಬಂದು ಮತ್ತೊಮ್ಮೆ ಕೇಳಿದಳು :

"ಕಾಗದ ಬಂತೇನೆ ?"

ಹೌದೆನ್ನುವಂತೆ ಸುಶೀಲ ತಲೆಯಾಡಿಸಿದಳು.

"ಆತನ್ದೇ ಇರ್ಬೇಕು. ಇಂಗ್ಲಿಷ್ ವಿಳಾಸ ತಾನೆ—ಆತನ್ದೇ. ಒಡಿ ಮತ್ತೆ !"

ಯಾಂತ್ರಿಕವಾಗಿ ಆ ಲಕೋಟೆಯನ್ನು ಬೆರಳುಗಳ ನಡುವೆ ಸುಶೀಲ ಹಿಡಿದಳು. ಅದು ನಿಸ್ಸಂಶಯವಾಗಿಯೂ ಆತನದೇ ಆಗಿತ್ತು. ಲಕೋಟೆಗೆ ನೋವಾಗುವುದೇನೋ ಎಂಬಂತೆ ಮೆಲ್ಲನೆ ಹರಿದು ತೆರೆದಳು. ಆತ ಬರೆದಿದ್ದುದು ಪುಟ್ಟ ಕಾಗದ. ಆ ಅಕ್ಷರಗಳನ್ನೆಲ್ಲ ಕುಣಿಯು ತ್ತಿದ್ದಂತೆ ತೋರಿತು ಸುಶೀಲೆಗೆ. ಪ್ರಯಾಸಪಡುತ್ತ ಆಕೆ ಮನಸ್ಸಿನಲ್ಲೇ ಓದಿದಳು. ಓದಿ ಮುಗಿದಿತ್ತೊ, ಇಲ್ಲವೊ, ಕಾಗದವನ್ನು ಮುಖಕ್ಕೊತ್ತಿಕೊಂಡು, ಅಮ್ಮಯನ್ನಪ್ಪಿಕೊಂಡು, ಅತ್ತಳು.

ಅಮ್ಮಗೆ ವ್ಯಥೆಯಾಯಿತು. ಮಗಳ ಕಂಪಿಸುತಿದ್ದ ದೇಹದ ಮೇಲೆ—ಬೆನ್ನ ಮೇಲೆ—ಕೈಯಾಡಿಸುತ್ತ, "ಅಳಬೇಡ. ಅಷ್ಟಕ್ಕೆಲ್ಲಾ ಅಳಬಾರ್ದು ಚಿನ್ನ," ಎಂದಳು.

"ಅಲ್ಲಮ್ಮೀ," ಎಂದಳು ಸುಶೀಲ, ತಾಯಿಯ ಮಡಿಲಿಂದ ಮುಖವೆತ್ತುತ್ತ ; "ಒಪ್ಪಿ ದ್ದಾರೆ !"—ಮತ್ತೆ ಅಳು.

ಎಂತಹ ತಮಾಷೆಯ ಹುಡುಗಿ!—ಎಂದುಕೊಂಡಳು ಅಮ್ಮಿ.

ಯಾವುದೋ ಭಾರವನ್ನು ಕೆಳಕ್ಕೆ ಇಳಿಸಿದ ಹಾಗೆ ನಿಟ್ಟುಸಿರು ಬಿಟ್ಟು, ಮಗಳ ತಲೆ ಗೂದಲನ್ನು ಆಕೆ ಮೂಸಿದಳು.

" ಒಳ್ಳೆ ಸುಶೀ, ನನ್ಚಿನ್ನ....ಎಲ್ಲಿ, ಓದಮ್ಮ ? "

" ಊಹೂಂ....ನೀನೇ ಓದು...."

" ನಂಗೆ ಕಣ್ಣು ಮುಸಕಾಗತ್ತೆ ಸುಶೀ....ಓದಕ್ಕೂ ಸರಿಯಾಗಿ ಬರಲ್ಲ. ಆ ಅಕ್ಷರ ಬೇರೆ ಇನ್ನೆಷ್ಟು ಚೆಂದವೊ! ನೀನೇ ಓದೇ....ಓದು ಸುಶೀ...."

ಅಳುತ್ತ ನಗುತ್ತ ತಡೆತಡೆಯುತ್ತ ಸುಶೀಲ ಓದಿದಳು :

" ಪ್ರಿಯ ರಾಜಣ್ಣನಿಗೆ—

ಅನೇಕಾನೇಕ ವಂದನೆಗಳು.

ಬಹಳ ದಿನ ಯೋಚಿಸಿ ನಿರ್ಧಾರಕ್ಕೆ ಬಂದಿದ್ದೇನೆ. ನಾನು ಕುರುಡನಲ್ಲ. ನಿಮಗೆ ಸಮಾಜದಲ್ಲಿ ಸ್ಥಾನಮಾನಗಳಿಲ್ಲವೆಂದು ಭಾವಿಸುವ ಮೂರ್ಖನಲ್ಲ. ನಿಮ್ಮ ವಿಷಯ ಹಿಂದೆ ಯಾವ ರೀತಿ ಸಂಬಂಧವಿಟ್ಟಿದ್ದೆನೋ ಈಗಲೂ ಹಾಗೆಯೇ ಇದ್ದೇನೆ. ನೀವು ನನ್ನ ಭಾವನಾಗುವುದು, ನಿಮ್ಮ ತಾಯಿ ನನಗೆ ಅತ್ತೆಯಾಗುವುದು, ನನ್ನ ಭಾಗ್ಯ ಅಂತ ಭಾವಿಸುತ್ತೇನೆ. ಪೂನಾದಲ್ಲಿರುವ ನಮ್ಮಣ್ಣನೂ ಒಪ್ಪಿದ್ದಾರೆ. ಮದುವೆಯು ಆಡಂಬರದ ಪ್ರದರ್ಶನವಾಗಬಾರದೆಂದು ನನ್ನ ಅಭಿಪ್ರಾಯ....ದಿನ ಗೊತ್ತು ಮಾಡಿ ಬರೆಯಿರಿ. ನಮ್ಮಣ್ಣನೂ ನಾವೂ ಬರುತ್ತೇವೆ....ಸ್ನೇಹಿತರ ಸಹಾಯದಿಂದ ನಮ್ಮ 'ಯೋಗ್ಯತೆಗೆ ತಕ್ಕ' ಮನೆ ಇಲ್ಲಿ ಸಿಕ್ಕಿದೆ.

ಮುಂದಿನ ಜೂನ್‌ನಲ್ಲಿ ನೀವು ಕಾಲೇಜು ಸೇರಲೇಬೇಕು.

ನಿಮ್ಮ ತಾಯಿಯವರಿಗೆ ಪ್ರಣಾಮಗಳು ; ಸುಶೀಲೆಗೆ ವಂದನೆಗಳು.

ಇತಿ ನಿಮ್ಮ,

ಮಾಧವ...."

ಆ ಅಮ್ಮಿ ಸುಖಿಯಾಗಿದ್ದಳು. ಹನಿಗೂಡಿದ ಕಣ್ಣುಗಳು. ಹಗುರವಾದ ಹೃದಯ.... ಆಕೆ ಎದ್ದು ದೇವರ ದೀಪ ಹಚ್ಚಿದಳು.

ಮಧ್ಯಾಹ್ನ ಮನೆಗೆ ಬಂದ ರಾಜಣ್ಣ ತಾಯಿ ತಂಗಿಯರ ಸಂತೋಷದಲ್ಲಿ ಭಾಗಿಯಾದ.

ನೆರೆಮನೆಯಾಕೆ ಕೇಳಿದಳು :

" ನಿಮಗಿವತ್ತು ಕಾಗದ ಬಂದಿತ್ತು, ಅಲ್ವೆ ಬನಶಂಕರಮ್ಮ ? "

" ಹೂನಮ್ಮ."

" ಹಳ್ಳಿಯಿಂದ ಬಂತೇನೋ ? "

" ಇಲ್ಲ, ಬೊಂಬಾಯಿಂದ ಬಂತು." ಕ್ಷಣ ತಡೆದು ಅಮ್ಮಿಯೆಂದಳು " ನಮ್ಮ ಸುಶೀಲೆಗೆ ವರ ಗೊತ್ತಾಗಿದೆ."

" ಓ ಹಾಗೋ! ಯಾರು ಬೊಂಬಾಯಿಯವರೊ ? "

" ಬೊಂಬಾಯಿಲಿ ಕೆಲಸ. ಇಲ್ಲೇ ಇದ್ನಲ್ಲಾ ಮಾಧವ—ನಿಮಗೆ ಗೊತ್ತಿರ್ಬೇಕು."

" ಓ ! "

.......ಮದುವೆಯ ದಿನವನ್ನು ಜೋಯಿಸರೊಬ್ಬರ ಸಹಾಯದಿಂದ ಗೊತ್ತು ಮಾಡಿದಳು....ತಿರುಪತಿಯಲ್ಲಿ ಮದುವೆ....ಸಿದ್ಧತೆ ನಡೆಯಿತು. ಎಷ್ಟೋ ದಿನಗಳಿಂದ ಆ ಬಗೆಗೆ ಯೋಚಿಸುತ್ತಲಿದ್ದ ಅಮ್ಮ, ಕಾವೇರಿಯಿಂದ ತನ್ನ ಹಣ ತರಿಸಲು ನಿರ್ಧರಿಸಿದಳು.

" ಮೂವತ್ತು ಮೂವತ್ತೊಂದು ವರ್ಷಗಳ ಹಿಂದೆ ನಿಮ್ಮ ತಾತನ ಹೊಲ ಮಾರಿದ ಹಣ, ರಾಜಣ್ಣ. ಹೋಗಿ ತರ್‍ತೀಯಾ ? "

" ಅಲ್ಲಿ ಈಗ ಯಾರಿದ್ದಾರೋ ಇಲ್ಲವೋ...."

" ಅಬದ್ಧ ಆಡಬಾರದು ರಾಜಾ....ಹೋಗಿ ಬಾ...."

ಹಾಗೆ ಅಮ್ಮ ಮಗನನ್ನು ಕಳುಹಿಸಿಕೊಟ್ಟಳು.

ರಾಜಣ್ಣ ಕಡೂರಿಗೆ ರೈಲಿನಲ್ಲಿ ಹೋಗಿ, ಅಲ್ಲಿಂದ ಮೋಟಾರನ್ನೇರಿ ಚಿಕ್ಕಮಗಳೂರು ತಲಪಿದ. ಅಲ್ಲಿಂದ ಜೀವನಹಳ್ಳಿಗೆ ಎತ್ತಿನ ಗಾಡಿ ಪ್ರಯಾಣ ಎಂದಿದ್ದಳು ತಾಯಿ. ಆದರೆ ಮೋಟಾರೇ ಇತ್ತು. ಬಸ್ಸು ರಾಯನಹಳ್ಳಿಗೆ ಬಂದಾಗ, ಹಿಂದೆ ತಾಯಿ ಹೇಳಿದ್ದುದೇನೊ ರಾಜಣ್ಣನಿಗೆ ನೆನಪಾಯಿತು. ರಾಯನಹಳ್ಳಿ....ಇಲ್ಲಿಯೇ ಅಲ್ಲವೇ ತನ್ನ ತಾಯಿ ವಿಧವೆಯಾದುದು ?

ಆ ಬಳಿಕ ಜೀವನಹಳ್ಳಿ. ಶಾನುಭೋಗರ ಮನೆಯನ್ನು ಹುಡುಕುವುದು ಕಷ್ಟವಾಗಲಿಲ್ಲ. ನಡುವಯಸ್ಸಿನವರೊಬ್ಬರು, ಷರಟು ಪಾಯಿಜಾಮ ತೊಟ್ಟು ಕೈಲಿ ಸಂಚಿಹಿಡಿದು ಬಂದಿದ್ದ ಆ ಯುವಕನನ್ನು ಇದಿರ್ಗೊಂಡರು.

" ಶಾನುಭೋಗರನ್ನು ನೋಡ್ಬೇಕಾಗಿತ್ತು."

" ನಾನೇ ಶಾನುಭೋಗ. ಎಲ್ಲಿಂದ ಬಂದಿರಿ ? "

ಆದರೆ ಶಾನುಭೋಗರಿಗೆ ವಯಸ್ಸಾಗಿರುತ್ತದೆಂದು ಅಮ್ಮ ಹೇಳಿದ್ದಳಲ್ಲ ?

" ನೀವಲ್ಲ, ವಯಸ್ಸಾದ ಶಾನುಭೋಗರಿಲ್ಲವೆ ?"

ಅಂತಹ ಪ್ರಶ್ನೆಯಿಂದ ಮನೆಯವರು ಆಶ್ಚರ್ಯಗೊಂಡರೂ ಮರುಕ್ಷಣದಲ್ಲೆ ಅವರಿಗೇನೋ ಹೊಳೆಯಿತು.

" ದೊಡ್ಡ ಶಾನುಭೋಗರು ತೀರಿಹೋಗಿ ಹತ್ತು ವರ್ಷ ಆಯ್ತು. ಈಗ ನಾನೇ ಶಾನುಭೋಗ, ಅವರಳಿಯ."

" ಓ ನಾನು ಅವರ್‍ನ ನೋಡೋಕೇಂತ ಬೆಂಗಳೂರಿಂದ ಬಂದೆ. ಬನಶಂಕರಮ್ಮ ಕಳಿಸಿರೋದು. ಕಾವೇರಮ್ಮ ಇದಾರೇನು ? "

ಮನೆಯಾತ ಏನೋ ನೆನಪಾದ ಹಾಗೆ ಆಶ್ಚರ್ಯದಿಂದ ಮುಗುಳ್ನಕ್ಕರು. " ಕಾವೇರಿ ! " ಎಂದು ಕರೆದರು.

ಕಾವೇರಮ್ಮ ಬಂದು ನಿಂತಾಗ ಅವರೆಂದರು :

" ಬನಶಂಕರಿ ಈತನ್ನ ಕಳಿಸಿದ್ದಾಳಂತೆ. . ."

ತನ್ನ ಅಮ್ಮನ ಬಾಲ್ಯದ ಗೆಳತಿಯನ್ನು ರಾಜಣ್ಣ ನೋಡಿದ. ಭಾರೀ ಗಾತ್ರದ ಜೀವ. ತನ್ನ ತಾಯಿಗೂ ಆಕೆಗೂ ಹೋಲಿಕೆಯೇ ಇರಲಿಲ್ಲ. ಆಕೆಯ ಪಾದ ಮುಟ್ಟಿ ನಮಸ್ಕರಿಸಬೇಕೆಂದು ಅಮ್ಮ ಹೇಳಿದ್ದಳು. ಅಂತೆಯೇ ರಾಜಣ್ಣ ನಿಂತಲ್ಲಿಯೇ ಬಾಗಿ, ನೆಲ ಮುಟ್ಟಿ, ಆಕೆಗೆ ವಂದಿಸಿದ.

" ಯಾರಪ್ಪ ನೀನು ? " ಎಂದಳು ಕಾವೇರಮ್ಮ. ಮಮತೆಯ ಆ ಧ್ವನಿ ಆಹ್ಲಾದಕರವಾಗಿತ್ತು.

" ನಾನು ರಾಜಣ್ಣ, ಬನಶಂಕರಿಯ ಮಗ."

" ಯಾರು, ಅಮ್ಮೀ ಮಗನೇ ? "

" ಹೌದು."

ಮಹದಾಶ್ಚರ್ಯದಿಂದ ಚೇತರಿಸಿಕೊಳ್ಳಲು ಕಾವೇರಮ್ಮನಿಗೆ ಎರಡು ನಿಮಿಷ ಹಿಡಿಯಿತು. ಆಕೆ ಬಲು ಸೂಕ್ಷ್ಮವಾಗಿ ಆಪಾದಮಸ್ತಕವಾಗಿ ಆ ಹುಡುಗನನ್ನು ನೋಡಿದಳು. ಅಮ್ಮಿಗಿಂತಲೂ ಎತ್ತರ. . .ಆ ಕಣ್ಣುಗಳು. . .ಅದೇ ಮೂಗು-ಗಲ್ಲ. . .

" ಬಾ ಮಗೂ ಬಾರಪ್ಪಾ. . .ಕೂತುಕೋ. . .ಚೆನ್ನಾಗಿದಾಳಾ ಅಮ್ಮಿ ? "

" ತಕ್ಕಮಟ್ಟಿಗಿದಾಳೆ. ಈ ಹತ್ತು ವರ್ಷದಿಂದ ಆಕೆಗೆ ಹುಷಾರಿಲ್ಲ. . . .ನಿತ್ರಾಣ. . ."

ಅದನ್ನು ಕೇಳಿ ಕಾವೇರಮ್ಮನಿಗೆ ದುಃಖವಾಯಿತು.

ಹಿಂದೊಮ್ಮೆ ಸುದ್ದಿ ಬಂದಿತ್ತು, ಅಮ್ಮಿ ಜಾತಿಯಿಂದ ಇಳಿದುಹೋದಳೆಂದು.

ಆ ಸುದ್ದಿ ತಂದಿದ್ದವರನ್ನು ಕಾವೇರಮ್ಮ ಆಗ ಶಪಿಸಿದ್ದಳು. . .

ಈಗ ಈ ಹುಡುಗ. . .ಅಮ್ಮಿ ಎರಡನೆ ಮದುವೆ ಮಾಡಿಕೊಂಡಳೆ ಹಾಗಾದರೆ ?

" ಎಷ್ಟು ಜನ ಅಣ್ಣ ತಮ್ಮಂದಿರಪ್ಪ ನಿನಗೆ ? "

" ನಾನೇ ದೊಡ್ಡೋನು. ಚಿಕ್ಕೋಳು ತಂಗಿ. ನಾವಿಬ್ಬರೇ. . ."

" ನೀವು ಮೂರೇ ಜನ ಇದೀರಾ ? "

" ಹೂಂ. . ."

" ನೀನು ಓದ್ತಾ ಇದೀಯೇನು ? "

" ಹೋದ ವರ್ಷ ಮೆಟ್ರಿಕ್ ಆಯಿತು. ಮುಂದಿನ ವರ್ಷ ಕಾಲೇಜಿಗೆ ಹೋಗ್ತೀನಿ..."

" ನಮ್ಹುಡುಗ ಚಿಕ್ಕೋನೂ ಈ ವರ್ಷದಿಂದ ಮೈಸೂರಲ್ಲಿ ಕಾಲೇಜು ಓದ್ತಿದಾನಪ್ಪಾ. ನವರಾತ್ರಿ ರಜೆಗೆ ಬಂದಿದ್ದ."

" ದೊಡ್ಡೋರು ಬೇರೆ ಇದಾರಲ್ವೆ ? ನಮ್ಮಮ್ಮ ಹೇಳಿದ್ಲು-ನನ್ಗಿಂತ ಹತ್ತು ವರ್ಷ ದೊಡ್ಡೋರು ಇರ್ತಾರೇಂತ."

" ಎಷ್ಟು ವಯಸ್ಸು ನಿಂಗೆ ? "

" ಈ ವರ್ಷದಿಂದ ಇಪ್ಪತ್ತೊಂದು,"

" ಸರಿ ಮತ್ತೆ ! " ಎಂದಳು ಕಾವೇರಮ್ಮ ಗಂಡನನ್ನು ನೋಡುತ್ತಾ ; " ಅಮ್ಮಿ ಹೋದಾಗ ನನಗೆ ಆರು ತಿಂಗಳಾಗಿತ್ತೊಂದ್ರೆ."

ರಾಜಣ್ಣನತ್ತ ತಿರುಗಿ ಆಕೆಯೆಂದಳು :

" ದೊಡ್ಡೋನು ಇದಾನಪ್ಪಾ. ನಿನ್ನೆ ತಾನೆ ಚಿಕ್ಕಮಗಳೂರಿಗೆ ಹೋದ-ಹೆಂಡತೀನ ಕರಕೊಂಡು ಬರೋಕೆ. ನನ್ನ ಮಗಳನ್ನೂ ಚಿಕ್ಕಮಗಳೂರಿಗೆ ಕೊಟ್ಟಿದೆ. . . . . .ನಿನ್ತಂಗಿ ಮದುವೆ ಆಯ್ತೇನು ? "

" ಮುಂದಿನ ತಿಂಗಳು ಆಗುತ್ತೆ. ಮುಹೂರ್ತ ಗೊತ್ಮಾಡಿದೀವಿ."

" ಸಂತೋಷವಪ್ಪ."

ಕಾವೇರಮ್ಮನ ಯಜಮಾನರಿಗೆ ರಾಜಣ್ಣ ಬಂದುವರ ಉದ್ದೇಶ ತಿಳಿಯಿತು. ಹೊರ ಗಣ್ಣಿನಿಂದ ಒಳಗಣ್ಣಿನಿಂದ ಆ ಹುಡುಗನನ್ನು ಅವರು ಪರೀಕ್ಷಿಸಿ ನೋಡಿದರು. ಆತನ ಪ್ರಾಮಾಣಿಕತೆಯ ಬಗೆಗೆ ಶಂಕೆ ಮೂಡಲಿಲ್ಲ.

ಅದೊಂದನ್ನೂ ಯೋಚಿಸುತ್ತಿರಲಿಲ್ಲ ಕಾವೇರಮ್ಮ. ಬಾಲ್ಯದ ಮಧುರ ನೆನಪುಗಳೆಲ್ಲ ಆಕೆಯ ಮೆದುಳು ಹೃದಯಗಳಿಗೆ ಲಗ್ಗೆ ಇಟ್ಟುವು. ಎಡೆಬಿಡದೆ ಮಾತನಾಡುತ್ತ, ರಾಜಣ್ಣನೇ ಬನಶಂಕರಿಯೇನೋ ಎಂಬಂತೆ, ಅಷ್ಟು ವರ್ಷ ನಡೆದ ಹಲವೊಂದು ವಿಷಯಗಳನ್ನು ಆಕೆ ಹೇಳುತ್ತ ಬಂದಳು. ಸುಮಂಗಲೆಯಾಗಿಯೇ ತನ್ನ ತಾಯಿ ಸತ್ತುದು ಆ ಬಳಿಕ ತಂದೆ; ತನ್ನ ಮಗಳ–ಮಗನ-ಮದುವೆ....

"ಅಮ್ಮಿ ಇಲ್ಲಿಂದ ಹೋದ್ದು ಅಜ್ಜಿ ಜತೇಲಿ," ಎಂದಳು ಕಾವೇರಮ್ಮ ಏನೋ ನೆನಪಾದವಳ ಹಾಗೆ.

"ನಾನು-ಸುಶೀ ಹುಟ್ಟೋಕ್ಮುಂಚೇನೆ ಅವರು ತೀರ್ಕೊಂಡ್ರಂತೆ...."

ಅಜ್ಜಿಯ ಸಾವು....

ಅಮ್ಮಿಗೆ ಆ ಮಕ್ಕಳಿಬ್ಬರು ಹುಟ್ಟಿದ ವಿಷಯ.

ಊಟವಾದಮೇಲೆ, ಕಾವೇರಮ್ಮ ಕೇಳಿದರೆಂದು, ರಾಜಣ್ಣ ನೆಲ ನೋಡುತ್ತ, ನಡು ನಡುವೆ ತಡೆಯುತ್ತ, ತಾಯಿಯ -ತಮ್ಮ- ಕತೆ ಹೇಳಿದ.

ತನ್ನ ಗೆಳತಿ ಅನುಭವಿಸಿದ ಸಂಕಟಗಳ ಚುಟುಕು ವರದಿಗೆ ಕಿವಿಗೊಡುತ್ತ ಕಾವೇರಮ್ಮ ನಿರ್ಲಜ್ಜಳಾಗಿ ಅತ್ತಳು, ಆಕೆಗೆ ಅಮ್ಮಿ ಕಲಂಕಿಣಿಯಾಗಿ ತೋರಲಿಲ್ಲ.

"ನಮ್ಮಮ್ಮನಿಗೆ ನೀವೊಂದು ಧರ್ಮಾವರ ಸೀರೆ ಕೊಟ್ಟಿದ್ರಂತೆ."

"ಹುಂ ಹೌದೇ! ...ಕೊಟ್ಟಿದ್ದೆ, ಆಕೆಗೂ ತಿಳೀದ ಹಾಗೆ!"

"ಅದನ್ನ ಆಕೆ ಉಟ್ಟುಕೊಂಡದ್ದಕ್ಕೆ ಎಷ್ಟೋ ಜನ ನಿಂದಿಸಿ ಮಾತಾಡಿದ್ರಂತೆ."

"ಅವರ ಮನೆ ಹಾಳಾಯಿತು!"

ಅಮ್ಮಿಯೇನೂ ಕಾಗದ ಕೊಟ್ಟು ಕಳಿಸಿರಲಿಲ್ಲ. ತನ್ನ ಕುರುಹಾಗಿ ಮಗನೇ ಹೋಗು ತ್ತಿದ್ದಾಗ, ಕಾಗದ ಒಯ್ಯುವುದು ಸರಿಯೆಂದು ಆಕೆಗೆ ತೋರಿರಲಿಲ್ಲ.

ರಾಜಣ್ಣನಲ್ಲ, ಕಾವೇರಮ್ಮನೇ ಆ ಹಣದ ವಿಷಯ ಪ್ರಸ್ತಾಪಿಸಿದಳು.

"ಹಣ ತಗೊಂಡು ಹೋಗಪ್ಪ."

"ಸುಶೀ ಮದುವೆಗೆ ಬೇಕೂಂತ ಅದನ್ನು ತರೋಕೇ ಅಮ್ಮ ನನ್ನ ಕಳಿಸಿವಾಳೆ."

"ಮಗಳ್ನೂ ಕರಕೊಂಡು ಅಮ್ಮೀನೇ ಬಂದಿದ್ರೆ ಎಷ್ಟು ಚೆನ್ನಾಗಿತ್ತು!"

ಮತ್ತೊಂದು ದಿನ ಅಲ್ಲಿದ್ದು ರಾಜಣ್ಣ ಹೊರಟು ನಿಂತ. ಲಾಡು ಚಕ್ಕುಲಿಗಳದೊಂದು ಬುಟ್ಟಿಯೂ ಪ್ರಯಾಣಕ್ಕೆ ಸಿದ್ಧವಾಯಿತು.

ಕಾವೇರಮ್ಮನೂ ಆಕೆಯ ಯಜಮಾನರೂ ರಾಜಣ್ಣನನ್ನು ಒಳಕ್ಕೆ ಕರೆದು ನೂರು ರೂಪಾಯಿಯ ಹತ್ತು ನೋಟು ಎಣಿಸಿ ಆತನ ಮುಂದಿರಿಸಿದರು.

"ಎಂಟು ನೂರು ಎಂದಿದಾಳೆ ಅಮ್ಮಿ."

"ಬಡ್ಡಿ ಬೇಡವೇನೋ?" ಎಂದು ಕಾವೇರಮ್ಮ ನಕ್ಕಳು.

"ಅಯ್ಯೊ! ಎಲ್ಲಾದರೂ ಉಂಟೆ? ಈ ಇನ್ನೂರು ಬೇಡಿ."

"ಹುಚ್ಚಪ್ಪಾ. ಈ ಇನ್ನೂರು ವಧುವಿಗೆ ಕಾವೇರಿ ಉಡುಗೊರೇರಿತ ಅಮ್ಮಿಗೆ ಹೇಳು."

"ಏನಂತಾಳೋ ಅಮ್ಮ."

"ಸಾಕು ಸಾಕೊ. ಭಾರಿ ಕಲ್ತಿದಾನೆ, ನೀನು ಹುಟ್ಟೋಕ್ಮುಂಚೇನೆ ನಿನ್ನಮ್ಮ ಮತ್ತು ನಾನು ಗೆಳತೀರು—ತಿಳೀತೇನೊ!"

ರಾಜಣ್ಣ ಏನೋ ಮಾತಾಡಬೇಕೆಂದಿದ್ದ. ಆದರೆ ಸ್ವರ ಗಂಟಲಲ್ಲೆ ಹುದುಗಿ ಹೋಯಿತು.

ಅಂಗಳದವರೆಗೂ ಬಂದ ಕಾವೇರಮ್ಮ, ಪ್ರೀತಿಯಿಂದ ರಾಜಣ್ಣನ ಮುಂಗುರುಳು ನೇವರಿಸಿ, ಆಶೀರ್ವದಿಸಿದಳು.

"ನಿನ್ತಂಗೀ ಮದುವೆ ಆದ್ಮೇಲೆ, ಅಮ್ಮೀನ ಖಂಡಿತ ಕರಕೊಂಡು ಬಾರಪ್ಪ. ನಿನ್ನ ಕಾಲೇಜು ಷುರುವಾಗೋಕ್ಮುಂಚೆ ಬನ್ನಿ. ನಮ್ಹುಡುಗ್ನೂ ಬಂದಿರ್ತಾನೆ....ಖಂಡಿತ ಬನ್ನೀಪ್ಪ."

"ಆಗಲಿ ಬರ್ತೀವಿ."

"ಹೇಳಪ್ಪ ಅಮ್ಮಿಗೆ. ಆಕೇನ ನೋಡೋಕೆ ಕಾವೇರಿಗೆ ಆಸೆಯಾಗ್ತಾ ಇದೇಂತ ಹೇಳಪ್ಪ."

"ಹೇಳ್ತೀನಿ...."

ಕಾವೇರಮ್ಮನ ಯಜಮಾನರು, ಚಿಕ್ಕಮಗಳೂರು ವರೆಗಿನ ಟಿಕೇಟು ತೆಗೆಸಿಕೊಟ್ಟು, ರಾಜಣ್ಣನನ್ನು ಮೋಟಾರು ಹತ್ತಿಸಿದರು.

....ರಾಜಣ್ಣ ಬೆಂಗಳೂರು ಸೇರಿದ.

ಮಗನಿಗೆ ವಿರಾಮವನ್ನೇ ಕೊಡದೆ ಅಮ್ಮಿ ಸಾವಿರ ಪ್ರಶ್ನೆ ಕೇಳಿ ಸಾವಿರಕ್ಕೂ ಹೆಚ್ಚು ಉತ್ತರ ಪಡೆದಳು.

....ತಿರುಪತಿಗೆ ಹೊರಡುವ ಹಿಂದಿನ ದಿನ ಮಾಧವನೂ ಅವನ ಅಣ್ಣನೂ ಬಂದು ತಲಪಿದರು.

ವೆಂಕಟರಮಣನ ಸಾನ್ನಿಧ್ಯದಲ್ಲಿ, ಮಾಧವ - ಸುಶೀಲೆಯರ ತಲೆಯ ಮೇಲೆ ಅಕ್ಕಿ ಕಾಳು ಬಿತ್ತು.

ತಾನು ಸುಖಿ, ಪರಮ ಸುಖಿ—ಎಂದುಕೊಂಡಳು ಅಮ್ಮಿ.

## ೧೭

ಪರಮ ಸುಖಿಯಾಗಿ ಅಮ್ಮಿ ಮಗಳನ್ನು ಗಂಡನ ಮನೆಗೆ ಕಳುಹಿಕೊಟ್ಟ ಮೇಲೆ, ಹಲವು ದಿನ ಶೂನ್ಯ ಮನಸ್ಕಳಾದಳು. ತಾನಿನ್ನು ಮಾಡಿ ಮುಗಿಸಬೇಕಾದ ಹೆಚ್ಚಿನ ಕೆಲಸ ವೇನೂ ಉಳಿದಿದ್ದ ಹಾಗೆ ಆಕೆಗೆ ತೋರಲಿಲ್ಲ. ರಾಜಣ್ಣ ಹೊರ ಹೋದರಂತೂ ಮನೆ ಭಣಗುಡುತ್ತಿತ್ತು.

ಮದುವೆಗೆ ವೆಚ್ಚವಾದ ಮೇಲೂ ಹಣ ಉಳಿದಿತ್ತು. ಮಾಧವ ಬೇರೆ, ಪ್ರತಿ ತಿಂಗಳೂ

ಇಪ್ಪತ್ತು ರೂಪಾಯಿ ಕಳುಹಿಸುತ್ತಿದ್ದ. ಪಾಠ ಹೇಳಿಕೊಡುವುದರಿಂದಲೂ ರಾಜಣ್ಣನಿಗೆ ಅಷ್ಟೇ ಸಂಪಾದನೆಯಾಗುತ್ತಿತ್ತು.

ರಾಜಣ್ಣ ಕಾಲೇಜು ಸೇರಿದ. ಹಿತಮಿತವಾದ ಮಾತುಕತೆಯಿಂದ ಆತ ಪ್ರಾಧ್ಯಾಪಕರ ಪ್ರೀತಿ ಗಳಿಸಿದ. ನಿಯಮಬದ್ಧ ಅಧ್ಯಯನದಿಂದ ಸಾಕಷ್ಟು ಅಂಕಗಳನ್ನು, ಉಚಿತ ವೇತನ ವನ್ನು, ದೊರಕಿಸಿಕೊಂಡ. ಬೇಗನೆ ಡಿಗ್ರಿ ಪರೀಕ್ಷೆ ಮುಗಿಸಿಕೊಂಡು ಪದವೀಧರನಾಗಬೇಕು; ಆದಷ್ಟು ಒಳ್ಳೆಯ ಕೆಲಸ ದೊರಕಿಸಿ ತನ್ನ ಕಾಲ ಮೇಲೆ ತಾನು ನಿಂತು ಅಮ್ಮಿಯನ್ನು ಸಲಹ ಬೇಕು; ಬಾಳಿನಲ್ಲಿ ಆಕೆಗಾಗಿದ್ದ ಹಳೆಯ ಗಾಯಗಳು ಮಾಯುವಂತೆ ಸೌಕರ್ಯ ಒದಗಿಸಬೇಕು. ಇದೀಗ ಆತ ತನ್ನ ಮುಂದಿರಿಸಿಕೊಂಡ ಗುರಿ.

ಅದೇನೂ ಸಾಧಿಸಲಸಾಧ್ಯವಾದಂತಹ ಗುರಿಯಾಗಿರಲಿಲ್ಲ. ಅಷ್ಟನ್ನು ಸುಲಭವಾಗಿ ಸಾಧಿಸುವೆನೆಂಬ ಆತ್ಮವಿಶ್ವಾಸ ರಾಜಣ್ಣನಿಗಿತ್ತು.

ಮತ್ತೆ ಅಮ್ಮಿಯ ದೇಹಾರೋಗ್ಯ ಕೆಟ್ಟಿತು. ಆಕೆಗೆ ರಾತ್ರೆಯೆಲ್ಲ ಕೆಟ್ಟ ಕನಸುಗಳು ಬೀಳುತ್ತಿದ್ದುವು.

ಹೀಗೆಯೇ ಸತ್ತರೂ ಸುಖ, ಮಗನೆದುರಲ್ಲಿ,—ಎಂದೂ ಆಕೆ ಯೋಚಿಸಿದಳು.

ಆದರೂ ಹೃದಯದ ಆಳದಲ್ಲಿ ಅಪೂರ್ಣವಾದೊಂದು ಆಸೆ ಹುದುಗಿತ್ತು. ಅದು ರಾಜಣ್ಣನ ಮದುವೆ. ತಾನು ಮುದ್ದು ಸೊಸೆಯ ಮುಖ ನೋಡುವಂತಾದರೆ? ಸೊಸೆಯ ಕೈಯಡುಗೆಯನ್ನು ತಾನೊಮ್ಮೆ ಉಣ್ಣುವಂತಾದರೆ? ಹಿಂದೆ—ಬಲು ಹಿಂದೆ—ರಾಯನ ಹಳ್ಳಿಯಲ್ಲಿ ಅತ್ತೆ ತನ್ನನ್ನು ಪ್ರೀತಿಸಿದ್ದಂತೆ ತಾನೂ ಸೊಸೆಯನ್ನು ಪ್ರೀತಿಸುವಂತಾದರೆ?

ಸುಶೀಲಳ ಮದುವೆಯೇನೋ ಸುಲಭವಾಗಿ ನಡೆದುಹೋಯಿತು. ಅದು ಸಾಧ್ಯ ವಾದುದು ಮಾಧವನಂತಹ ಯುವಕನಿದ್ದುದರಿಂದ.

ಆದರೆ ರಾಜಣ್ಣನ ವಿಷಯ ಹಾಗಲ್ಲ. ಹೆಣ್ಣುಕೊಟ್ಟು ಓದಿಸುವ ಮಾತು ಹಾಗಿರಲಿ; ಇನ್ನು ನಾಲ್ಕು ವರ್ಷಗಳಲ್ಲಿ ಆತ ಪಧವೀಧರನೂ ಆಗಬಹುದು; ಒಳ್ಳೆಯ ಉದ್ಯೋಗ ದೊರೆಯಬಹುದು; ಆಗಲಾದರೂ ಸ್ವಜಾತಿಯವನೆಂದು ಗೌರವಿಸುವವರು ಯಾರು? ಹೆಣ್ಣು ಕೊಡುವವರು ಯಾರು?

ಆತನ ಮದುವೆಯಾಗದೆ ಹೋದರೆ, ತಮ್ಮ ವಂಶದ ಬಳ್ಳಿ ಬೆಳೆಯುವ ಬಗೆ ಹೇಗೆ?

ಹೀಗೆ ಅಮ್ಮಿಗೆ, ಶರೀರದ ಬೇನೆಗಿಂತಲೂ ಮನಸ್ಸಿನ ವೇದನೆಯೇ ಹೆಚ್ಚಾಯಿತು.

"ರಾಜ, ಸುಶೀ ಬಹಳ ದಿನದಿಂದ ಬರೆದೇ ಇಲ್ವಲ್ಲೋ?"

"ಯಾಕಮ್ಮಿ, ಹೋದ ವಾರ ಭಾವ ಬರೆದಿದ್ನಲ್ಲ?"

"ಹೌದು, ಬರೆದಿದ್ದ, ಅಲ್ವೆ? ಯಾಕೊ ಮರವೆ ಷುರುವಾಯ್ತಪ್ಪ ನಂಗೆ."

ಅಥವಾ ಎಂದಾದರೂ ಸಂಜೆ—

"ಅನ್ನ ಸಾರು ಇಟ್ಟಿದೀನಿ. ನೀನು ಉಣ್ಣಪ್ಪ ಏನೂ ಉಳಿಸ್ಬೇಡ, ನಂಗೆ ಹಸಿವಿಲ್ಲ."

"ಯಾಕಮ್ಮಿ?"

"ಯಾಕೋ ತಿಂದದ್ದು ಜೀರ್ಣವೇ ಆಗ್ತಾ ಇಲ್ಲ."

"ಔಷಧಿ ತರ್ಲೇನು?"

"ಇದಕ್ಕೆಲ್ಲಾ ಎಂಥ ಔಷಧಿ? ಹಾಗೇ ಸರಿಹೋಗುತ್ತೆ."

ಇಲ್ಲವೆ ಮುಸುಕೆಳೆದುಕೊಂಡಿದ್ದಲ್ಲಿಂದಲೆ—

"ಕೈಕಾಲು ತೊಳಕೊಂಡ್ಯಾ ರಾಜ ?"

"ಹೂನಮ್ಮಾ, ಕೊಳಾಯಿ ಹತ್ರಾನೇ ತೊಳಕೊಂಡು ಬಂದೆ."

"ಸಂಧ್ಯಾವಂದನೆ ಮಾಡಿದ್ಯೇನು ?"

"ಇಲ್ಲಾಮ್ಮಿ ! ಮಾಡ್ತೀನಿ."

"ಮಾಡಪ್ಪ, ಮರೀಬೇಡ ರಾಜ. ನಾಲ್ಕು ಗಾಯತ್ರಿ ಜಪಾನಾದರೂ ಮಾಡಿ ಎದ್ಬಿಡು...ನನಗ್ಯಾಕೋ ಚಳಿ ಇವತ್ತು..."

...ಕಾಲೇಜಿನ ತನ್ನ ಪಾಠಗಳನ್ನೂ ಹುಡುಗರಿಗೆ ತಾನು ಪಾಠ ಹೇಳಿಕೊಡುವ ಕೆಲಸವನ್ನೂ ಮುಗಿಸಿಕೊಂಡು, ಒಂದು ಸಂಜೆ ರಾಜಣ್ಣ ಬಂದಾಗ ತಾಯಿ ಹೇಳಿದಳು :

"ನಾವು ಬೆಂಗಳೂರಿಗೆ ಹೊಸದಾಗಿ ಬಂದಾಗ, ಅಠಾರಾ ಕಚೇರಿ ಗುಮಾಸ್ತೆ ಅಂತ ರಾಮಶಾಸ್ತ್ರಿಯವರು ಯಾರದೋ ಪರಿಚಯ ಮಾಡಿ ಕೊಟ್ಟಿರ್ಲಿಲ್ವೆ ?"

"ಹೌದು, ಶೇಷಾದ್ರಿಪುರ್ದೋರು."

"ಅವರ ಹುಡುಗ ಮೊನ್ನೆ ನಿನ್ನನ್ನು ಹುಡುಕ್ಕೊಂಡು ಬಂದಿದ್ದ. ನಿನಗೆ ಹೇಳೋಕೆ ಮರ್ತೇಹೋಯ್ತು."

"ಯಾಕಂತೆ ?"

"ಅದೇನೋ ಹತ್ತು ದಿವಸ್ದಿಂದ ನಮ್ಮನ್ನೆ ಹುಡುಕ್ತಾ ಇದ್ನಂತೆ. ಎಷ್ಟು ನಿಜವೊ ಎಷ್ಟು ಸುಳ್ಳೊ !...ನೀನೊಮ್ಮೆ ಅವರ ಮನೆಗೆ ಹೋಗ್ಬೇಕಂತೆ."

"ಯಾಕೆ ಕರೆದಿದಾರೊ ? ಆಗಲಿ, ನಾಳೆ ಕಾಲೇಜಿಗೆ ಹೋಗ್ತಾ ಹೋಗಿ ನೋಡ್ತೀನಿ."

ಮರುದಿನ ಬೆಳಿಗ್ಗೆ ರಾಜ ಬೇಗನೆ ಶೇಷಾದ್ರಿಪುರದವರ ಮನೆಗೆ ಹೋದ. ಅವರಿದ್ದುದು ದೊಡ್ಡ ಮನೆಯೊಂದರ ಪುಟ್ಟ 'ಔಟ್-ಹೌಸಿ'ನಲ್ಲಿ.

"ಬಾಪ್ಪ.—ನಿನ್ನ ಹೆಸರೇ ಮರೆತ್ಹೋಯ್ತಲ್ಲೊ..."

"ರಾಜಣ್ಣಾಂತ."

"ಬಾ ರಾಜಣ್ಣ. ರಾಮಶಾಸ್ತ್ರಿಯಿಂದೊಂದು ಕಾಗದ ಬಂದು ಒಂದು ತಿಂಗಳಾಯ್ತಪ್ಪ. ನಿನಗೆ ಹೇಳಿಕಳಿಸಬೇಕು......ಕಳಿಸಬೇಕೂಂತ ಇಷ್ಟು ದಿನ ಕಳೀತು.

"ಏನು ವಿಷಯ ಸಾರ್ ?"

"ನಾರಾಯಣರಾಯರು ಹೃದಯ ಸ್ತಂಭನದಿಂದ ತೀರ್ಕೊಂಡ್ರು, ಅದನ್ನ ನಿಂಗೆ ತಿಳಿಸ್ಬೇಕೂಂತ ಶಾಸ್ತ್ರಿ ಬರೆದಿದ್ದ."

ರಾಜಣ್ಣನ ಹುಬ್ಬುಗಳು ಮೇಲೇರಿದುವು. ಬೆನ್ನು ನಿಡಿದುಕೊಂಡು ನೇರವಾಯಿತು.

"ಅಷ್ಟೇನೆ ?"

"ಅಷ್ಟೆ...ಯಾರು ನಾರಾಯಣರಾಯರು ? ಸಂಬಂಧಿಕರೇನು ?"

"ಹೂಂ...ಏನೋ ದೂರದ ಸಂಬಂಧ...ಬರ್ತೀನಿ ಸಾರ್..."

ಹಾಗೆ ಹೇಳಿ ರಾಜಣ್ಣ ಹೊರಟುಬಿಟ್ಟ.

ರಾಮಶಾಸ್ತ್ರಿ ಬರೆಯುವ ಹೊತ್ತಿಗಾಗಲೇ, ನಾರಾಯಣರಾಯರ ನಿಧನವಾಗಿ ಎಷ್ಟು ದಿನಗಳಾಗಿದ್ದುವೊ ! ಹಾಗೆ ಬಂದ ಆ ವಾರ್ತೆ ತನಗೆ ತಿಳಿಯಲು ತಗಲಿದ ದಿನಗಳೊ !

ವಿಚಾರವಂತರಾದ ರಾಮಶಾಸ್ತ್ರಿ, ನೇರವಾಗಿ ಮನೆಗೆ ಕಾಗದ ಬರೆಯುಲಿಲ್ಲ. ಪ್ರತ್ಯೇಕವಾಗಿ ಸುದ್ದಿ ತನಗೆ ತಲಪುವಂತೆ ಮಾಡಿದ್ದರು.

ಹಾಗೆ ಮಾಡಿ, ತಾಯಿಯ ಮನಸ್ಸಿನ ಮೇಲೆ ಒಮ್ಮೆಲೆ ಕೆಟ್ಟ ಪರಿಣಾಮವಾಗದಂತೆ ಎಚ್ಚರದಿಂದಿರುವ ಭಾರವನ್ನು ತನ್ನ ಮೇಲೆಯೇ ಅವರು ಹೊರಿಸಿದ್ದರು.

ರಾಜಣ್ಣನಿಗೆ ತರಗತಿಗೆ ಹೋಗುವುದಾಗಲಿಲ್ಲ. ಹೃದಯದೊಂದು ಮೂಲೆಯಲ್ಲಿ ಯಾವುದೋ ಬೆಂಕಿ ಎದ್ದು ಅವನ ಅಂಗಾಂಗಗಳನ್ನು ವ್ಯಾಪಿಸಿತು. ಹಗಲಿನ ರಣಬಿಸಿಲಿನಿಂದ ಮೈಯುರಿಯಿತು. ನಿರ್ದಿಷ್ಟ ಗುರಿಯಿಲ್ಲದೆ ಆತ ನಡೆದು ಹೋದ. ರೇಸ್‌ಕೋರ್ಸ್ ಹಾದಿ... ಶೇಷಾದ್ರಿರಸ್ತೆ...ಮಹಾರಾಣೀ ಕಾಲೇಜಿನ ಸರ್ಕ್‌ಲ್...ಬಲಕ್ಕೆ ತಿರುಗದೆ ರಾಜಣ್ಣ ಮತ್ತೂ ಮುಂದಕ್ಕೆ ನಡೆದ. ಕಬ್ಬನ್ ಪಾರ್ಕಿನ ಒಳವಲಯದಲ್ಲೊಂದು ಮರದ ನೆರಳಿನಲ್ಲಿ ಕಲ್ಲು ಬೆಂಚಿನ ಮೇಲೆ ಪಾಠಪುಸ್ತಕಗಳನ್ನು ತಲೆದಿಂಬಾಗಿ ಮಾಡಿ ಮರದ ರೆಂಬೆ ಎಲೆಗಳೆಡೆಯಿಂದ ಆಕಾಶ ನೋಡುತ್ತ ಮಲಗಿದ.

ಅಲ್ಲೇನೋ, ಅವರು ಆ ಸುದ್ದಿ ಹೇಳಿದಾಗ "ಅಷ್ಟೇನೆ" ಎಂದಿದ್ದ ಸುಲಭವಾಗಿ.

ಆದರೆ ಈಗ ಆ ಸುದ್ದಿ ಮೆಲ್ಲಮೆಲ್ಲನೆ ರಾಜಣ್ಣನ ಮನಸ್ಸನ್ನು ಹಿಡಿಯಿತು. ಹಿಡಿದು, ಮುಷ್ಟಿ ಬಿಗಿಗೊಳಿಸಿ ಹಿಂಡಿತು. ಹಿಂಡಿ ನೋಯಿಸಿತು.

ತನ್ನ ತಂದೆ ತೀರಿಕೊಂಡರು.

ತಂದೆಯ ಪ್ರೀತಿ ಏನೆಂಬುದು ರಾಜಣ್ಣನಿಗೆ ಗೊತ್ತಿರಲಿಲ್ಲ. ತಾನು ಹಾಲು ಹಸುಳೆಯಾಗಿದ್ದಾಗ ಅವರು ತನ್ನನ್ನು ಎತ್ತಿ ಆಡಿಸಿ ಮುದ್ದಿಸುತ್ತಿದ್ದರಂತೆ. ಇರಬಹುದು. ತನಗೆ ಅದು ನೆನಪಿಲ್ಲ...ಮಾತುಮಾತಿಗೂ 'ನಮ್ತಂದೆ ಹಾಗಂದ್ರು'—'ನಮ್ತಂದೆ ಹೀಗಂದ್ರು' ಎಂದು ಹೆಮ್ಮೆಯಿಂದ ಅಭಿಮಾನದಿಂದ ಆಡುವ ಎಷ್ಟೋ ಹುಡುಗರನ್ನು ಆತ ಕಂಡಿದ್ದ. ಹಾಗೆ ಮಾಡುವ ಭಾಗ್ಯ ಅವನಿಗಿರಲಿಲ್ಲ...ಇಲ್ಲವೆ, 'ಬೇಡ ಕಣೊ, ತಂದೆ ಬಯ್ತಾರೆ' ಎನ್ನುವ ಹುಡುಗರಿದ್ದರು. ತಂದೆಯ ಬಗೆಗೆ ಅಂತಹ ಹೆದರಿಕೆ ತೋರುವ ಅವಕಾಶವೂ ಅವನಿಗೆ ದೊರೆತಿರಲಿಲ್ಲ.

ಆದರೂ ಇಷ್ಟು ನಿಜ. ಅವನ ತಂದೆ ತೀರಿಕೊಂಡಿದ್ದರು. ಅವರ ರಕ್ಷಣೆ ಮಮತೆ ಮತ್ತೆ ದೊರೆಯಬಹುದೆಂದು ರಾಜಣ್ಣ ನಿರೀಕ್ಷಿಸಿದ್ದನೆಂದಲ್ಲ. ಒಮ್ಮೆಯೂ ಅಂತಹ ಯೋಚನೆಯನ್ನು ಆತ ಮಾಡಿದವನಲ್ಲ, ಆದರೆ ಈ ದಿನ ಅವರು ತೀರಿಕೊಂಡಿದ್ದರು. ಇಷ್ಟು ನಿಜ.

ಒಂದು ಜೀವದ ಸಾವು, ತಾನು ಮತ್ತು ತಂಗಿ—ಈ ಎರಡು ಜೀವಿಗಳ ಹುಟ್ಟಿಗೆ ಕಾರಣವಾಗಿದ್ದೊಂದು ಜೀವದ ಸಾವು.

ಹುಟ್ಟಿದ ಜೀವಿಗೂ ಹುಟ್ಟಿಸುವ ಜೀವಿಗೂ ಇರುವ ಸಂಬಂಧವೆಷ್ಟು ?

ರಕ್ತಸಂಬಂಧವೆನ್ನುತ್ತಾರೆ. ಒಂದು ಜೀವಕ್ಕಿನ್ನೊಂದನ್ನು ಬಿಗಿದು ಕಟ್ಟುವ ಏರ್ಪಾಡು. ಒಂದು ಕುಟುಂಬವನ್ನೆ ಸುತ್ತುವರಿದು ಒಂದು ಘಟಕವಾಗಿ ಒಟ್ಟುಕೂಡಿಸುವ ಅವ್ಯಕ್ತ ಬಳ್ಳಿ.

ನಾರಾಯಣರಾಯರು ತನ್ನ ರಕ್ತಸಂಬಂಧಿ—ತಂದೆ.

ಆದರೆ ತಾನವರ ಮುಖವನ್ನೊಮ್ಮೆಯೂ ನೋಡಿರಲಿಲ್ಲ.

ತಾಯಿಯಷ್ಟೆ ವರ್ಣಿಸಿದ್ದಳು : ಎತ್ತರವೇ ಎನ್ನಬೇಕು...ವಿಶಾಲವಾದ ಎದೆ. ಖಚಿತ ಮುಖಮುದ್ರೆ. ಸುಂದರನೇ—ಅಮ್ಮಿಯ ದೃಷ್ಟಿಯಲ್ಲಿ ಸುಂದರನೇ—ತಲೆಯ ಮೇಲೊಂದು

ಸಣ್ಣ ಜುಟ್ಟು.

ತಾನು ಕಲಾವಿದನಾಗಿದ್ದರೆ, ಆ ಚಿತ್ರ ಬರೆಯಬಹುದಿತ್ತು. ಇದು ಸರಿಯೇನಮ್ಮ— ಎಂದು ಕೇಳಿ, ತಿದ್ದಿ ಸರಿಪಡಿಸಬಹುದಿತ್ತು.

ಕೆಲವರ ಮನೆಯಲ್ಲಿ ಅವರ ಹಿರಿಯರ ಭಾವಚಿತ್ರಗಳನ್ನು ತೂಗುಹಾಕಿದ್ದನ್ನು ರಾಜಣ್ಣ ಕಂಡಿದ್ದ. ಶ್ರೀಮಂತರ ಮನೆಯಲ್ಲಾದರೆ ದೊಡ್ಡ ಆಕೃತಿಯ ತೈಲದ ವರ್ಣಚಿತ್ರಗಳಿರು ತಿದ್ದುವು...ತನ್ನ ಮನೆಯಲ್ಲಾದರೋ ತಾನು ಕಾಣದ ತಂದೆಯ ಯಾವ ಚಿತ್ರವೂ ಯಾವ ಕಾಲದಲ್ಲೂ ಇರುವಂತಿಲ್ಲ...

...ಸೂರ್ಯ ರಾಜಣ್ಣನ ಮೂಗಿನ ನೇರಕ್ಕೆ ಬಂದು ಪಡುವಣದತ್ತ ತಿರುಗಿದ. ಮತ್ತೂ ಸ್ವಲ್ಪ ಹೊತ್ತು ಹಾಗೆಯೇ ಮಲಗಿದ್ದ ರಾಜಣ್ಣ. ಆಮೇಲೆ ಎದ್ದು, ಅಲ್ಲೇ ಒಂದು ಮೂಲೆಯಲ್ಲಿದ್ದ ಬಡ ಹೆಂಗಸಿನಿಂದ ಆರು ಕಾಸಿನ ಕಡಲೆಕಾಯಿ ಕೊಂಡು, ಬೇರೊಂದೆಡೆ ಹುಲ್ಲಿನ ಮೇಲೆ ಕುಳಿತು, ಬಳಿಗೆ ಬಂದ ಭಿಕ್ಷುಕರ ಹುಡುಗನಿಗೆ ನಾಲ್ಕು ಕಾಯಿ ಕೊಟ್ಟು, ಉಳಿದುದನ್ನು ತಾನು ತಿಂದ. ಅವನ ಕೈ ಬಾಯಿಗಳು ಕೆಲಸ ಮಾಡಿದುವು. ಆದರೆ ಮೆದುಳು ಮಂಕು ಕವಿದು ಸ್ತಬ್ಧವಾಗಿತ್ತು.

ಸಂಜೆಯಾಯಿತೆಂದು ಮೆಲ್ಲನೆ ರಾಜಣ್ಣ ನಡೆಯತೊಡಗಿದ,

ಸುಶೀಲೆಗಾದರೆ ಈ ವಿಷಯ ಹೇಳಬಹುದು. ಅಷ್ಟೇನೂ ಆಕೆ ಮನಸ್ಸಿಗೆ ಹಚ್ಚಿ ಕೊಳ್ಳಲಾರಳು. ಆದರೆ ತಾಯಿ ?

ಕತ್ತಲಾದರೂ ರಾಜಣ್ಣ ಮನೆಗೆ ಹೋಗಲಿಲ್ಲ. ಅವನಿಗೆ ಹಸಿವಿರಲಿಲ್ಲ. ಯಾವ ಇಚ್ಛೆಯೂ ಇರಲಿಲ್ಲ. ರಾತ್ರೆ ಬಹಳ ಹೊತ್ತು, ಆಟದ ಬಯಲಿನ ದಂಡೆಯ ಮೇಲೆ ಕರಿಯ ಯೋಚನೆಗಳೊಡನೆ ಕಣ್ಣು ಮುಚ್ಚಾಲೆಯಾಡುತ್ತ ಕುಳಿತ.

ಆತ ಮನೆಗೆ ಬಂದಾಗ, ಬೆಡ್‌ಲ್ಯಾಂಪ್ ಉರಿಯುತ್ತಲೇ ಇತ್ತು. ಅಮ್ಮ ಗಾಢ ನಿದ್ದೆಯಲ್ಲಿದ್ದಳು. ಬಾಗಿಲಿಗೆ ಒಳಗಿಂದ ಅಗಣಿ ಹಾಕಿರಲಿಲ್ಲ. ತನಗಾಗಿ ಕಾದು ಕಾದು ಬಳಲಿ ಹಾಗೆಯೇ ನಿದ್ದೆ ಹೋಗಿದ್ದಳೇನೊ. ರಾಜಣ್ಣ ಮೆಲ್ಲನೆ ಒಳಸೇರಿಕೊಂಡು ತನ್ನ ಚಾಪೆ ಬಿಡಿಸಿದ. ದೀಪ ಆರಿಸಿ ಚಾಪೆಯ ಮೇಲುರುಳಿಕೊಂಡ. ಆತ ಕೈ ಕಾಲು ತೊಳೆಯಲಿಲ್ಲ, ಸಂಧ್ಯಾವಂದನೆ ಮಾಡಲಿಲ್ಲ, ಉಣ್ಣಲಿಲ್ಲ.

ಆದರೆ ನಿದ್ದೆಯೂ ನಿರ್ದಯವಾಗಿತ್ತು ಆ ರಾತ್ರೆ. ಕರುಳು ತನಗೆ ಕೆಲಸವಿಲ್ಲವೆಂದು ಕುಯ್‌ಗುಡುತ್ತಿತ್ತು. ಗಂಟಲು ಒಣಗಿತ್ತು. ನೀರು ಕುಡಿಯಬೇಕೆನಿಸಿದರೂ ಏಳಲಾಗದೆ ರಾಜಣ್ಣ ಹಾಗೆಯೇ ಮಲಗಿಕೊಂಡ. ಮುಂಜಾವದ ಹೊತ್ತಿಗೆ ಕಣ್ಣುಗಳು ಭಾರವಾದುವು.

ಬೆಳಿಗ್ಗೆ ಎಂಟು ಗಂಟೆಯಾಗಿತ್ತು ಆತನಿಗೆ ಎಚ್ಚರವಾದಾಗ. ಎರಡು ಕಣ್ಣುಗಳೂ ಉರಿಯುತ್ತಿದ್ದುವು. ಅಮ್ಮ ಮಗ್ಗುಲಲ್ಲೆ ಕುಳಿತು ಕಾತರದ ದೃಷ್ಟಿಯಿಂದ ಮಗನನ್ನು ನೋಡುತ್ತಿದ್ದಳು.

ರಾಜಣ್ಣ ಕಣ್ಣು ಹೊಸೆದುಕೊಳ್ಳುತ್ತ ಬೇಗನೆದ್ದು ಕುಳಿತ.

" ಏನಾಯ್ತು ರಾಜ ನಿಂಗೆ ? "

" ಏನೂ ಇಲ್ಲಮ್ಮ...ರಾತ್ರೆ ತಡವಾಗಿ ಬಂದೆ. ಹಾಸ್ಟೆಲ್ನಲ್ಲಿ ಭಾರೀ ಊಟವಿತ್ತು. ನನ್ನನ್ನೂ ಕರೆದಿದ್ರು...ಅಷ್ಟೆ."

ಕೈ ಕಾಲು ತೊಳೆಯದೆ ಸಂಧ್ಯಾವಂದನೆ ಮಾಡದೆ ಮಲಗಿದೆಯಾ ? ಎಂದು ತಾಯಿ ಕೇಳುವಳೆಂದಿದ್ದ ರಾಜಣ್ಣ. ಸದ್ಯಃ ಆ ಪ್ರಶ್ನೆ ಬರಲಿಲ್ಲ.

ಸ್ನಾನಕ್ಕೆ ಬಿಸಿನೀರು ಸಿದ್ಧವಾಯಿತೇನೋ ಎಂದು ನೋಡಲು ಅಮ್ಮ ಒಳಹೋದಳು. ಮಗನ ಮಾತಿನಲ್ಲಿ ಅವಳಿಗೆ ನಂಬಿಕೆ ಹುಟ್ಟಿರಲಿಲ್ಲ. ಆದರೂ ಆಕೆ ಮರು ಪ್ರಶ್ನೆ ಹಾಕಲಿಲ್ಲ.

ರಾಜಣ್ಣ ಎದ್ದು ನಿಂತಾಗ ದೇಹ ತೂಗಾಡಿತು. ಸ್ವಲ್ಪ ಹೊತ್ತು ಗೋಡೆಗೊರಗಿ ಆತ ಸುಧಾರಿಸಿಕೊಂಡ.

ಮನೆಯಲ್ಲೇ ಉಳಿದರೆ ತಾಯಿ ಗಾಬರಿಯಾಗುವಳೆಂದು ಹೆದರಿ, ರಾಜಣ್ಣ ಊಟ ಮುಗಿಸಿಕೊಂಡು ಕಾಲೇಜಿಗೆ ಹೋದ. ಒಂದೆರಡು ತರಗತಿಗಳಿದ್ದಾಗಲೆ ಹೊರಟು ಬಂದು, ಯೂನಿಯನ್ ವಾಚನಾಲಯದೊಳಗೆ ಕುಳಿತು, ತಂಗಿಗೊಂದು ಕಾಗದ ಬರೆದ. ಏನೇನೋ ವಿಷಯಗಳನ್ನು ಕೃತಕವಾಗಿ ಪ್ರಸ್ತಾಪಿಸಿದ ಮೇಲೆ, ಕೊನೆಯಲ್ಲಿ ಇಷ್ಟನ್ನು ಸೇರಿಸಿದ :

" ಸುಶೀ, ನಿನಗೆ ಗೊತ್ತೆ ? ನಮ್ಮ ತಂದೆ—ನಾರಾಯಣರಾಯರು—ತೀರಿಕೊಂಡರು. ಹೃದಯಸ್ತಂಭನವಂತೆ. ಒಂದು ತಿಂಗಳ ಮೇಲಾಯಿತಂತೆ. ನನಗೆ ತಿಳಿದದ್ದು ನಿನ್ನೆ."

ತಂಗಿಗೆ ಬರೆದುದಾಯಿತು. ಆದರೆ ತಾಯಿಗೆ ತಿಳಿಸುವ ವಿಚಾರ ?

ತಿಳಿಸಬೇಕೇ ಬೇಡವೆ ಎನ್ನುವ ಯೋಚನೆಯಲ್ಲೆ ದಿನಗಳು ಕಳೆದುವು.

" ಏನಾಗಿದೆ ರಾಜಣ್ಣ ನಿಂಗೆ ? ದಿನದಿಂದ ದಿನಕ್ಕೆ ಬಡವಾಗ್ತಿದ್ದೀಯಲ್ಲೋ..." ಎಂದು ಅಮ್ಮ ಅಂದರೆ—

" ಎಲ್ಲಮ್ಮ, ಸುಮ್ನೆ ಹೇಳ್ತಿದೀಯಾ. ಮಕ್ಕಳ್ನ ಕಂಡರೆ ತಾಯಂದಿರಿಗೆ ಯಾವಾಗ಼್ೂ ಹೀಗೆಯೇ," ಎಂದು ರಾಜಣ್ಣ ಮಾತು ಹಾರಿಸುತ್ತಿದ್ದ.

ಆದರೆ ರಾಜಣ್ಣನ ಮನಸ್ಸಿನ ಹೊಯ್ದಾಟಕ್ಕೆ ಕೊನೆ ಇರಲಿಲ್ಲ. ಹೇಳಿ ಮುಗಿಸಿದ ಮೇಲಾದರೂ ನೆಮ್ಮದಿ ಮರಳಬಹುದೇನೋ ಎನಿಸಿತು.

ಒಂದು ರಾತ್ರೆ ಮಲಗುತ್ತ, ಬೆಳಿಗ್ಗೆ ಹೇಳಿಯೇಬಿಡಬೇಕೆಂದು ರಾಜಣ್ಣ ತೀರ್ಮಾನಿಸಿದ.

ಬೆಳಗಾಯಿತು. ಸ್ನಾನವಾಯಿತು. ಊಟವಾಯಿತು.

ಕೈತೊಳೆಯುತ್ತ ರಾಜಣ್ಣನೆಂದ :

" ಒಂದು ಕೆಟ್ಟ ಸುದ್ದಿ ಹೇಳಲಾ ಅಮ್ಮ ? "

" ಏನಪ್ಪಾ ಅದು ? "

" ನಿನಗೆ ಬೇಜಾರಾಗುತ್ತೇನೊ ? "

" ಬೊಂಬಾಯಿಂದ ಏನಾದರೂ ಕಾಗದ ಬಂತೇನು ? "

ಅದೆಂತಹ ಕಾತರ ಆ ಧ್ವನಿಯಲ್ಲಿ:

" ಇಲ್ಲ, ಬಾಳೆಮಣ್ಣೂರಿನ ಸುದ್ದಿ."

" ಶಾಸ್ತ್ರಿಗಳು ಬರೆದಿದ್ದಾರೆಯೆ ? ಅಕ್ಕ ಹ್ಯಾಗಿದಾಳಂತೆ ? "

" ಅವರಲ್ಲಮ್ಮ."

" ಮತ್ತೆ ? "

" ನಾರಾಯಣರಾಯರು—ನಮ್ತಂದೆ—..."

“ . . . . . . . . . ”

“ ಹೃದಯ ಕ್ರಿಯೆ ನಿಂತು ತೀರ್ಕೊಂಡ್ರಂತೆ... ಒಂದು ತಿಂಗಳಾಯ್ತು....”

ಅಮ್ಮಿ ಕಲ್ಲಾಗಿ ಕುಳಿತಲ್ಲೆ ಕುಳಿತಳು. ರಾಜಣ್ಣ ಅಲ್ಲಿರದೆ ಹೊರಬಂದು ಗೋಡೆಗೊರಗಿ ನಿಂತ. ಮುಂದೇನಾಗುವುದೊ ?—ಎಂದು ರಾಜಣ್ಣನಿಗೆ ಭಯವಾಯಿತು.

ಯುಗದಂತೆ ಕಳೆದ ನಿಮಿಷಗಳ ಮೌನ.

ರಾಜಣ್ಣನಿಗೆ, ತಾಯಿಯ ನಿಟ್ಟುಸಿರು ಕೇಳಿಸಿತು. ಬಳಿಕ ತಾನು ಉಂಡು ಎದ್ದಿದ್ದ ತಟ್ಟೆಗಳ ಸದ್ದು.

ಅಮ್ಮಿ ಚೇತರಿಸಿಕೊಂಡಳೆಂಬ ಸಮಾಧಾನದಿಂದ ರಾಜಣ್ಣ ಕಾಲೇಜಿಗೆ ಓಡಿದ.

ಚೇತರಿಸಿಕೊಂಡ ಅಮ್ಮಿ ರಾಜಣ್ಣನ ತಟ್ಟೆ ತೊಳೆದಿಟ್ಟಳು. ಆತ ಉಂಡ ನೆಲ ಶುದ್ಧಿ ಮಾಡಿದಳು. ಸಣ್ಣ ಪುಟ್ಟ ಪಾತ್ರೆಗಳನ್ನು ತಿಕ್ಕಿ ಬೆಳಗಿದಳು. ನಾಲ್ಕು ಬಿಂದಿಗೆ ನೀರು ತಂದಳು. ಆಯಾಸವಾಯಿತೆಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಬಳಿಕ ತಟ್ಟೆ ಇಟ್ಟು ಬಡಿಸಿಕೊಂಡಳು.

ಅಷ್ಟರವರೆಗೂ ಯಾಂತ್ರಿಕವಾಗಿ ಕೆಲಸ ಸಾಗಿತ್ತು. ಆದರೆ ಅನ್ನ ಕಂಡಾಗ ನಾಲಿಗೆ ನಿರಾಕರಿಸಿತು. ಹಾಗೆಯೆ ಎದ್ದು, ಅಷ್ಟು ಅನ್ನವನ್ನೂ ಬೀದಿನಾಯಿಗೆಸೆದು, ಕೈ ತೊಳೆದು ಕೊಂಡಳು.

ನೆರೆಮನೆಯವಳು ಅಮ್ಮಿಯ ಮುಖ ನೋಡಿ ಕೇಳಿದಳು :

“ ಮೈಲಿ ಹುಷಾರಿಲ್ವೆ ಬನಶಂಕರಮ್ಮ ? ”

ಆದರೆ ಆ ಪ್ರಶ್ನೆ ಸ್ಪಷ್ಟವಾಗಿ ಅಮ್ಮಿಗೆ ಕೇಳಿಸಲಿಲ್ಲ. ಮೆದುಳು ಸಿಡಿಯತೊಡಗಿ ಕಿವಿಗಳಲ್ಲೇನೊ ಗುಂಯ್ ಗುಂಯ್ ಸದ್ದಾಗುತ್ತಿತ್ತು. ಕಣ್ಣು ಕತ್ತಲು ಕವಿಯುತ್ತಿತ್ತು ಆಕೆಗೆ.

. . . .ಅಂತೂ ಅವರು ತೀರಿಕೊಂಡರು. ಮುತ್ತೈದೆ ಸಾವಿಗಿಂತ ಮಿಗಿಲಾದ ಭಾಗ್ಯವಿಲ್ಲ ಹೆಂಗಸಿಗೆ. ಆದರೆ ತಾನು ಪಾಪಿ. ಎರಡು ಸಾರೆ ತಾನು ವಿಧವೆ, ಎರಡು ಸಾರೆ.

ನದಿಯ ದಂಡೆಯ ಮೇಲೆ ನಾರಾಯಣರಾಯರು ತನ್ನ ಗುಂಗುರು ಕೂದಲು ನೇವರಿಸಿದ್ದ ದಿನದಿಂದ ಈವರೆಗೆ—ಈ ಇಪ್ಪತ್ತೆರಡು ವರ್ಷಗಳು...ಅವರ ಜತೆಯಲ್ಲಿ ತಾನು ಕಳೆದ ಮೂರು ವರ್ಷ ಮತ್ತು ಉಳಿದೆಲ್ಲ ಜೀವಮಾನ. ಯಾವುದು ಹೆಚ್ಚು ? ಯಾವುದು ಕಡಿಮೆ ?

ಆತ ಒಳ್ಳೆಯವರು...ತನ್ನ ಜೀವನವನ್ನು ಪರಿಪೂರ್ಣಗೊಳಿಸಿದ ವ್ಯಕ್ತಿ...ಸದಾ ಕಾಲವೂ ಅವರ ಸಾಮೀಪ್ಯ, ಸಾನ್ನಿಧ್ಯ ತನಗೆ ದೊರೆಯಲಿಲ್ಲ. ಅದಕ್ಕಾಗಿ ಅವರನ್ನು ದೂರಲೇಕೆ ? ಮುಖ್ಯ ತಾನುನಿ ರ್ಭಾಗ್ಯೆ...ಮೊದಲಿನಿಂದಲೇ, ಹುಟ್ಟಿನಿಂದಲೇ...

—ಅಮ್ಮಿ ಮುಸುಕೆಳೆದು ಮಲಗಿಕೊಂಡಳು. ಆ ಬಳಲಿದ ದೇಹ ಅತ್ತಿಂದಿತ್ತ ಹೊರಳಾಡಿತು. ಆದರೆ ರಾತ್ರಿಯೇ ಕೈಕೊಡುತ್ತಿದ್ದ ನಿದ್ದೆ ಹಗಲು ಪ್ರಸನ್ನವಾಗುವ ಮಾತು ಎಲ್ಲಿಯದು ?

ಯಾರೋ ಹೆಂಗಸು ಬಂದು “ ಬನಶಂಕರಮ್ನೋರೆ ” ಎಂದು ಬಾಗಿಲು ಬಡಿದಳು.

ಅರೆ ನಿದ್ದೆಯಲ್ಲೇನೋ ಸ್ವರ ಕೇಳಿಸಿದ ಅನುಭವ...ಅಮ್ಮಿ ಏಳಲಿಲ್ಲ, ಬಾಗಿಲು ತೆರೆಯಲಿಲ್ಲ.

ಹಾಗೆಯೇ ಅದೆಷ್ಟು ಹೊತ್ತು ಮಲಗಿದಳೊ ?

ಒಮ್ಮೆ ಕಣ್ಣು ತೆರೆದು ನೋಡಿದಾಗ, ಕತ್ತಲಾಗಿದೆಯೇನೋ ಅನ್ನಿಸಿತು. ಅಮ್ಮ, ರಾಜಣ್ಣ ಬರುವ ಹೊತ್ತಾಯಿತೆಂದು ಎದ್ದು ಕುಳಿತು, ಬಾಗಿಲು ತೆರೆದಳು. ಹೊರಗೆ ಮುಚ್ಚಂಜೆಯಾಗಿತ್ತು, ಅಷ್ಟೆ. ಅಮ್ಮ ಒಲೆ ಹಚ್ಚಿ ಅನ್ನಕ್ಕೆ ನೀರಿಟ್ಟಳು.

ಒಳಕ್ಕೆ ಬಂದ ರಾಜಣ್ಣ ಪುಸ್ತಕಗಳನ್ನು ಗೋಡೆಯ ಗೂಡಿನಲ್ಲಿರಿಸಿ "ಅಮ್ಮ," ಎಂದ.

"ಇಲ್ಲಿದೀನಿ ರಾಜ."

ರಾಜಣ್ಣ ಅಡುಗೆ ಮನೆಗೆ ಬಂದು, ಒಲೆಯ ಮುಂದೆ ಕುಳಿತಿದ್ದ ಅಮ್ಮನ ಹಿಂದೆ ನಿಂತ.

ಇಪ್ಪತ್ತೆರಡು ವರ್ಷಗಳ ಹಿಂದೆ 'ಅವರೂ' ಒಮ್ಮೆ ಹಾಗೆಯೇ ಅಡುಗೆ ಮನೆಗೆ ಬಂದು ಅಮ್ಮನ ಹಿಂದೆ ನಿಂತಿದ್ದರು. ಆ ಬೇಟದ ಫಲವಾಗಿ ರಾಜಣ್ಣ ಹುಟ್ಟಿದ್ದ. ಈ ದಿನ ಹಿಂದೆ ನಿಂತಿರುವವನು 'ಅವರ' ಅಂಶ, ಬೆಳೆದು ದೊಡ್ಡದಾಗಿರುವ 'ಅವರ' ಕೂಸು.

ಎಳೆಯ ಮಗುವಿನಂತೆ ರಾಜಣ್ಣ ತಾಯಿಯ ಕತ್ತನ್ನು ತನ್ನ ಕೈಗಳಿಂದ ಬಳಸಿಕೊಂಡ. ಮಗನನ್ನು ಬರಸೆಳೆದು ಪಕ್ಕದಲ್ಲಿ ಕುಳ್ಳಿರಿಸಿ ತನ್ನ ಮಡಿಲಲ್ಲಿ ಆತನ ಮುಖವಿರಿಸಿಕೊಂಡಳು ತಾಯಿ.

ಹಾಗೆ ತಾಯಿ ಮಕ್ಕಳು ಆ ಸಂಜೆ, ಹೃದಯದ ಏರುಪೇರಾಟಗಳನ್ನು ಸರಿಗೊಳಿಸಲೆಂದು, ಸ್ವಲ್ಪ ಹೊತ್ತು ಅತ್ತರು...

...ಅಂದಿನಿಂದ ಅಮ್ಮ ಬದಲಾದಳು. ಒಪ್ಪೊತ್ತಿನ ಊಟ ಬಿಟ್ಟಳು. ದೇವರ ಪೂಜೆ ಗಂಟೆಗಟ್ಟಲೆ ನಡೆಯಿತು. ಹೆಸರೆತ್ತಿದರೆ ಸಾಕು ಉಪವಾಸ ಎನ್ನುವ ಹಾಗಾಯಿತು ಆಕೆಯ ವ್ರತನಿಯಮ. ಅಮ್ಮನೀಗ, ರಾಜಣ್ಣ ಸಂಧ್ಯಾವಂದನೆ ಮಾಡಬೇಕೆಂದು ಹಟತೊಡುತ್ತಿರಲಿಲ್ಲ. ಬದಲು, ತಾನೇ ಇಮ್ಮಡಿಯ ಸೇವೆ ಸಲ್ಲಿಸುತ್ತಿದ್ದಳು ದೇವರಿಗೆ. ಕೂತರೆ ಮಡಿ... ನಿಂತರೆ ಮಡಿ...

"ಇದೇನಮ್ಮಾ ಇದೆಲ್ಲಾ ?"

"ವಯಸ್ಸಾಯ್ತು, ರಾಜ. ಇನ್ನೆಷ್ಟು ದಿನ ಇರ್ತೀನಿ ಹೇಳು."

"ಅದಕ್ಕೆ ?"

"ಈ ವರೆಗೆ ಪಾಲಿಸ್ದೇ ಇರೋದ್ನೆಲ್ಲಾ ಈಗ ಮಾಡಿ ಮುಗ್ಸೋಣಾಂತ..."

"ಒಂದೂ ಅರ್ಥವಾಗೊಲ್ಲ. ಯಾವುದಕ್ಕೂ ಮಿತಿ ಮೇರೆ ಬೇಡ್ವ ಅಮ್ಮ ?"

"ಹಾಗೆಲ್ಲಾ ಅನ್ಬೇಡವಪ್ಪಾ. ದೇವರ ಕಾರ್ಯ. ಅಂಥ ಮಾತನ್ನಾಬರ್ದು."

"ಏನೋಮ್ಮಾ, ಎಲ್ಲಾ ವಿಚಿತ್ರವಾಗಿದೆ ನೀನು ಮಾಡೋದು."

ಕ್ರಮಕ್ರಮವಾಗಿ, ಅಮ್ಮ ಮಾತು ಕಡಿಮೆ ಮಾಡಿದಳು. ಸಾವಿರವೊ, ಹತ್ತು ಸಾವಿರವೊ, 'ಓಂ ನಮಃ ಶಿವಾಯ' ಜಪಿಸುವುದು ಮೊದಲಾಯಿತು.

"ರಾಮಶಾಸ್ತ್ರಿಗಳಿಂದ ಕಾಗದವೇ ಇಲ್ಲ, ಅಲ್ವೆ ?"

"ಇಲ್ಲಮ್ಮೀ. ಯಾಕೆ ಕೇಳ್ದೆ ?"

"ಸುಮ್ನೆ. ಅವರ್ನ ನೋಡ್ಬೇಕು ಅನಿಸಿದೆ. ಒಂದು ವರ್ಷಕ್ಕೂ ಮೇಲಾಯ್ತಲ್ಲ ಅವರು ಬಂದು ?"

"ಕಾಗದ ಬರೀಲೇನು ?"

"ಬೇಡ ಅವರಿಗೇನು ತೊಂದರೆಯೊ ಏನೊ..."

...ಮೊದಲ ವರ್ಷದ ಪರೀಕ್ಷೆಯಲ್ಲಿ ರಾಜಣ್ಣ ತೇರ್ಗಡೆಯಾದ. ಅಂಕಗಳು ಚೆನ್ನಾಗಿಯೇ ಬಂದಿದ್ದುವು. ಪ್ರಯಾಸಪಟ್ಟು ದೊರಕಿಸಿಕೊಂಡ ಉಚಿತ ವೇತನ, ಮುಂದೆಯೂ ದೊರೆಯುವುದು ಖಚಿತವಾಯಿತು.

ಆ ರಜೆಯಲ್ಲೊಂದು ದಿನ ಅಮ್ಮ ಹೇಳಿದಳು :

"ರಾಜಣ್ಣ, ಒಂದು ವಿಷಯ ಕೇಳ್ತೀನಿ. ಆಗೊಲ್ಲ ಅನ್ಬೇಡ."

"ಇದೇನಮ್ಮ ಹೊಸ ರೀತಿ ಶುರು ಮಾಡ್ದೆ ?"

"ಎಷ್ಟೆಂದರೂ ನೀನು ವಯಸ್ಸಿಗೆ ಬಂದೋನು. ನಾನು ಮುದುಕಿ; ನಿನ್ನ ಮಾತು ಕೇಳ್ಬೇಡ್ವೆ ?"

"ಸಾಕು ತಮಾಷೆ. ಅದೇನು ಹೇಳು."

"ಆಚೆ ಮನೆ ಶೇಷಮ್ಮ, ಅವರಣ್ಣ ಅತ್ತಿಗೆ ಜತೇಲಿ ತಿರುಪತಿಗೆ ಹೋಗ್ತಾರಂತೆ. ಅದೇನೋ ಹರಕೆ ಇದೆಯಂತೆ."

"ಅದಕ್ಕೆ... ?"

"ಅವರ್ಜತೇಲಿ ನಾನೂ ಹೋಗಿ ಬರಬೇಕೂಂತ ಆಸೆ."

"ನಾವೆಲ್ಲಾ ಹೋಗಿದ್ವಲ್ಲಮ್ಮೀ ಹೋದ್ವರ್ಷ ?"

"ಇಲ್ಲಾ ಅಂದ್ನೆ...ಈಗ ಯಾಕೋ ಹೋಗ್ಬೇಕೂಂತ ಆಸೆಯಾಗಿದೆ. ಇದೊಂದೇ ಸಲ. ಇನ್ನು ಯಾವತ್ತೂ ಹೋಗಲ್ಲ."

"ಅದಕ್ಕೆ ನಾನೇನು ಮಾಡ್ಬೇಕೂಂತ ?"

"ಒಂದಿಪ್ಪತ್ತು ರೂಪಾಯಿ ಖರ್ಚು ಮಾಡೋಕೆ ಒಪ್ಗೆ ಕೊಡು."

"ನನ್ನದೇನಮ್ಮ ಒಪ್ಗೆ ? ಹೋಗ್ಲೇ ಬೇಕೂಂದ್ರೆ ಹೋಗಿ ಬಾ."

"ಬೇಗ್ನೆ ಬಂದ್ಬಿಡ್ತೀನಿ ರಾಜ."

"ಯಾಕಮ್ಮ, ನನ್ನನ್ನು ಕರೆಯೋಲ್ಲ ?"

ಆ ಪ್ರಶ್ನೆಗೆ ಉತ್ತರ ಒಂದು ನಿಮಿಷ ತಡವಾಯಿತು. ಅಮ್ಮ ಅಳುಕಿದಳು.

"ಇಬ್ಬರಿಗೆ ಖರ್ಚು ಜಾಸ್ತಿ. ನೀನೇನು, ದೊಡ್ಡೋನಾದ್ಮೇಲೆ ಎಷ್ಟು ಸಾರೆ ತಿರುಪತಿಗೆ ಹೋಗ್ತಿಯೋ ಏನೊ ?"

"ಹೋಗದೆ ಉಂಟೆ ?" ಎಂದು ರಾಜಣ್ಣ ತಲೆತಗ್ಗಿಸಿ ನಕ್ಕ.

...ಒಂದು ವಾರವಾದರೂ ಶೇಷಮ್ಮನವರ ಗುಂಪು ವಾಪಸು ಬರುವ ಚಿಹ್ನೆಯೇ ಇರಲಿಲ್ಲ. ಆ ಮುಸ್ಸಂಜೆ ಮನೆಗೆ ಮರಳುತ್ತ, ಅಮ್ಮ ಬರುವುದು ಇನ್ನೂ ಎಷ್ಟು ದಿನವೊ. ಸದ್ಯಃ ಹಾದೀಲಿ ಕಾಹಿಲೆ ಮಲಗದಿದ್ದರೆ ಸಾಕು ಎಂದು ಚಿಂತಿಸಿದ ರಾಜಣ್ಣ.

ಮನೆಗೆ ಬರುತ್ತಿದ್ದಂತೆ, ಅಷ್ಟು ದೂರದಿಂದಲೆ, ಮನೆಯ ಮುಂದುಗಡೆ ವಯಸ್ಸಾದ ಅಪರಿಚಿತರು ಯಾರೋ ಕುಳಿತಿದ್ದಂತೆ ತೋರಿತು. ಕೆಂಪು ಸೀರೆಯುಟ್ಟು, ತಲೆ ಮುಚ್ಚಿಕೊಂಡು, ಬಳಿಯಲ್ಲೆ ಪುಟ್ಟ ಗಂಟು ಇರಿಸಿಕೊಂಡಿದ್ದ ಅಜ್ಜಮ್ಮ. ಬಾಳೆಮಣ್ಣೂರಿನಿಂದ ಅಮ್ಮಿಯ ಪರಿಚಿತರು ಯಾರಾದರೂ ಬಂದಿರುವರೇನೋ ಎಂದು ರಾಜಣ್ಣ ಲಗುಬಗೆಯಿಂದ

ಮನೆಯು ಕಡೆ ನಡೆದ.

"ರಾಜ!"

ಆತ ಹತ್ತಿರ ಬರುತ್ತಿದ್ದಂತೆಯೇ ಆ ಮಾತು ಕೇಳಿಸಿತು. ಎಣಿಸಲಾಗದಷ್ಟು ಸಾರೆ ಕೇಳಿಯೂ ಮನಸ್ಸು ತಣಿಯದೇ ಇದ್ದ ಪದ-ಅದೇ ಸ್ವರ. . .ಬಂದಿದ್ದಳು ಅಮ್ಮಿ.

ಆದರೆ ಈ ವೇಷ?

"ಇದೇನಮ್ಮಿ ಇದು ?"

ಆತನಿಗಿನ್ನೂ ಪೂರ್ತಿ ಗೊತ್ತಾಗಿರಲಿಲ್ಲ.

ಬಾಗಿಲು ತೆರೆದು ಒಳಗೆ ಬಂದು ರಾಜಣ್ಣ ಕಂದೀಲು ಹಚ್ಚಿದ...... ಆ ಬೆಳಕಿನಲ್ಲಿ ಕಂಡು ಬಂದ ಅಮ್ಮಿ!

ತಲೆಯಮೇಲಿಂದ ಕೆಂಪು ಸೀರೆಯ ಸೆರಗು ಸರಿಯಿತು ಮೆಲ್ಲನೆ. ಗುಂಗುರು ಗುಂಗುರಾಗಿ ಬಲು ಸುಂದರವಾಗಿದ್ದ ಆ ಕೂದಲ ಗೊಂಚಲನ್ನು ಬೋಳಿಸಿ ಬಿಟ್ಟಿದ್ದರು, ಯಾವ ಗುರುತೂ ಉಳಿಯದ ಹಾಗೆ.

"ಅಮ್ಮೀ! ಯಾಕಮ್ಮಿ ಹೀಗ್ಮಾಡಿಸ್ದೆ ?"

ತನ್ನಮ್ಮಿಗೆ ಹೀಗೂ ಆಯಿತೆ ಎಂದು ರಾಜಣ್ಣ, ಆಕೆಯ ಮೈ ಮುಟ್ಟಿ ನೋಡಿದ. ಕಳವಳದ ದೃಷ್ಟಿ ಅಮ್ಮಿಯ ಬೋಳುತಲೆಯ ಮೇಲೆಯೇ ನೆಟ್ಟಿತು.

ಅಮ್ಮಿಯ ಮುಖ ಕಿರಿದಾಗಿತ್ತು. ಅಲ್ಲಿ ನಗುವಿರಲಿಲ್ಲ, 'ನೊಂದುಕೊಳ್ಳಬೇಡ ದಮ್ಮಯ್ಯ' ಎಂಬುವ ಪ್ರಾರ್ಥನೆಯ ನೋಟವಿತ್ತು ಆ ಕಣ್ಣುಗಳಲ್ಲಿ.

"ಈ ಕೂದಲು ಇನ್ನೊಮ್ಮೆ ಮೊದಲಿನ ಹಾಗೇ ಬೆಳೆಯೋಕೆ ಎಷ್ಟೊಂದು ಸಮಯ ಬೇಕು ಗೊತ್ತೆ, ಅಮ್ಮಿ ?"

ಕಂಪಿಸುತಿದ್ದ ಸ್ವರದಲ್ಲಿ ಬಲು ನಿಧಾನವಾಗಿ ಅಮ್ಮಿ ಉತ್ತರವಿತ್ತಳು.

"ಈ ಕೂದಲ್ನ ಇನ್ನು ಬೆಳೆಸೋಲ್ಲ ರಾಜ."

"ಅಯ್ಯೋ, ಇದೇನಮ್ಮಿ ಹುಚ್ಚು ?"

"ನಿಜವಾಗ಼್ೂ ಮಗು. ನಿನ್ನಂದೆ ತೀರ್ಹೋದ್ಮೇಲೆ ಈ ಕೂದಲು ತೆಗ್ಸೋದೆ ನ್ಯಾಯ ಅಲ್ವೆ ?"

"ನಿಂಗೆ ಹುಚ್ಚು ಹಿಡೀತೇನಮ್ಮಿ ? ಥೂ-ಥೂ-ಯಾರು ಹೀಗೆ ಹೇಳ್ಕೊಟ್ಟೋರು ?"

"ಯಾರೂ ಇಲ್ಲ. . .ನನ್ನ ಮನಸ್ಸಾಕ್ಷಿಯ ಪ್ರೇರಣೆ. ಇದು ನಾನ್ಮಾಡ್ಕೊಂಡಿರೋ ಪ್ರಾಯಶ್ಚಿತ್ತ."

"ಪ್ರಾಯಶ್ಚಿತ್ತ! ಯಾವ ತಪ್ಗೆ ?"

"ತಪ್ಪು ಯಾವುದೋ ? ಪ್ರಾಯಶ್ಚಿತ್ತ ಮಾತ್ರ ನಿಜ."

"ಒಬ್ಬ ಪುಟ್ಟ ಹುಡುಗನ್ನ ಕೈಹಿಡಿದ್ಕೂಡ್ಲೆ ನೀನು ವಿಧವೆಯಾದ್ದಕ್ಕೆ ಪ್ರಾಯಶ್ಚಿತ್ತ. ಒಲಿಸ್ಕೊಂಡ ನಾರಾಯಣರಾಯರು ನಾಲ್ಕು ಜನಕ್ಕೆ ಹೆದರಿ ನಿನ್ನ ಕೈ ಬಿಟ್ಟುದ್ದಕ್ಕೆ ಪ್ರಾಯಶ್ಚಿತ್ತ. ಕೆಟ್ಟ ಜನ ನಿನಗೆ ಸಾವಿರ ಮಾತಂದು ಸಾವಿರ ಹಿಂಸೆ ಕೊಟ್ಟದ್ದಕ್ಕೆ ಈ ಪ್ರಾಯಶ್ಚಿತ್ತ. ಅಲ್ವೆ ಅಮ್ಮಿ ?"

"ಇಂಥ ಮಾತಾಡಿ ತಾಯಿಕರುಳು ಉರಿಸ್ಬೇಡವಪ್ಪಾ."

"ಇನ್ನೆಂಥಾ ಮಾತಾಡ್ತೀ ಅಮ್ಮ? ಇಷ್ಟು ವರ್ಷ ಬಂದದ್ದೆಲ್ಲಾ ಇದಿರಿಸ್ಕೊಂಡ್ಳು ನನ್ನಂಥ ಮಗ ಇರೋವಾಗ್ಲೂ ಹಿಗ್ಮಾಡಿದ್ಯಲ್ಲೇ ? "

"ನನ್ನನ್ನು ಕ್ಷಮಿಸು ರಾಜ. ನಂಗೇನೂ ತಿಳೀದು. ಹಾಗೆ ಮಾಡೂಂತ ಮನಸ್ಸು ಹೇಳ್ತು; ಮಾಡ್ದೆ. ಮುದುಕಿ ಮೇಲೆ ಸಿಟ್ಮಾಡ್ಕೋಬೇಡವಪ್ಪ."

"ಇದಕ್ಕೇ ಅಲ್ವಾ ನನ್ನನ್ನು ಬಿಟ್ಟಿಟ್ಟು ನೀನೊಬ್ಬಳೇ ತಿರುಪತಿಗೆ ಹೋದದ್ದು ?

"ಇದನ್ನ ಮನಸ್ಸಿಗೆ ಹಚ್ಕೋಬೇಡ ರಾಜ. ಮರೆತ್ಬಿಡಪ್ಪ. ಅಳ ಬೇಡ ಮಗು."

ರಾಜ ಅಳಲಿಲ್ಲ. ಆದರೆ ಅವನ ಹೃದಯ ಗೋಳಾಡಿತು. ಆತ ಕ್ರಾಪನ್ನು ಹಿಡಿಹಿಡಿಯಾಗಿ ಕೀಳಲೆತ್ನಿಸಿ ತಲೆ ನೋಯಿಸಿಕೊಂಡ.

ಸ್ನಾನ ಮಾಡಿ, ಪ್ರವಾಸದ ಮೈಲಿಗೆ ಕಳೆದು, ಶುಚಿರ್ಭೂತಳಾಗಿ ಬರಿಯ ಚಾಪೆಯ ಮೇಲೆ ಬರಿಹೊಟ್ಟೆಯಲ್ಲಿ ಅಮ್ಮ ಮಲಗಿಕೊಂಡಳು.

ಅವಳಿಗೆ ಬೆನ್ನು ಮಾಡಿ ಕುಳಿತು ರಾಜಣ್ಣ ತಂಗಿಗೆ ಕಾಗದ ಬರೆಯ ತೊಡಗಿದ :

"ಸುಶೀ, ನಿನಗೆ ಗೊತ್ತಾ? ನಮ್ಮಮ್ಮ ತಿರುಪತಿಗೆ ಹೋಗಿ ತಲೆ ಬೋಳಿಸ್ಕೊಂಡು ಬಂದಿದಾಳೆ. ನನಗೆ ಗೊತ್ತಿಲ್ದೇನೇ ಹೀಗಾಯಿತು."

## ೧೮

ಕಾಲೇಜಿಗೆ ತಡವಾಯಿತೆಂದು ರಾಜಣ್ಣ ಬೇಗ ಬೇಗ ಹೆಜ್ಜೆ ಇಡುತ್ತಿದ್ದ. ಬೀದಿಯ ಬಲ ಭಾಗದಲ್ಲಿ ಅವನಿಗಿಂತ ನಾಲ್ಕು ಹೆಜ್ಜೆ ಮುಂದೆ ಒಬ್ಬ ಹುಡುಗಿ ನಡೆಯುತ್ತಿದ್ದಳು, ತಾನು ಬೇಗ ಬೇಗನೆ ಹೆಜ್ಜೆ ಇಡುತ್ತ.

ನೇಯ್ದು ಇಳಿಬಿಟ್ಟಿದ್ದ ಅವಳ ನೀಳವಾದ ಜಡೆ ತಾನೂ ಚಲಿಸುತ್ತಿತ್ತು, ಹೊತ್ತಾಯಿತು-ಹೊತ್ತಾಯಿತೆಂದು.

ಎಷ್ಟು ಮಾಟವಾಗಿದ್ದ ಹೆರಳು !

ರಾಜಣ್ಣನ ದೃಷ್ಟಿ ಮತ್ತೆ ಮತ್ತೆ ಅತ್ತ ಸರಿಯಿತು. ಕ್ರಮಬದ್ಧವಾದ ನಡಿಗೆ, ಮೈಯ ಕುಲುಕಾಟ, ಚಪ್ಪಲಿಯ ತಾಳ....ಆ ಹೆಣ್ಣು ಹಾದಿ ಕ್ರಮಿಸುತ್ತಿದ್ದ ರೀತಿ ಕಲಾಮಯವಾಗಿತ್ತು.

ಹೆರಳು ನಡಿಗೆ ಹೀಗೆ, ಮುಖ ಹೇಗೋ ? ಎಂದುಕೊಂಡ ರಾಜಣ್ಣ. ನಿರ್ದುಷ್ಟವಾದ ಸಹಜ ಕುತೂಹಲ. ಆತ ಮತ್ತೂ ವೇಗವಾಗಿ ನಡೆದು, ಹುಡುಗಿಯನ್ನು ಹಿಂದಿಕ್ಕಿ, ಸರಕ್ಕನೆ ತಿರುಗಿ ನೋಡಿದ. ನೇರವಾದ ಹಾದಿಯ ಹೊರತು ಬೇರೇನೂ ಕಾಣಿಸಿದಂತೆಯೇ ತೋರಲಿಲ್ಲ ಆ ಹುಡುಗಿಯ ದೃಷ್ಟಿಗೆ. ಮುಖವೋ ಪೆದ್ದು ಪೆದ್ದು. ಅಲ್ಲಿದ್ದುದು ಮಗುತನ. ಬಣ್ಣ ಕರಿದೂ ಅಲ್ಲ - ಬಿಳಿದೂ ಅಲ್ಲ. ಎಡಗೈಗಳಲ್ಲಿ ಪುಸ್ತಕಗಳ ಹೊರೆ. ಅವಕ್ಕೆ ಶಿಖರವಾಗಿ ಕುಳಿತಿದ್ದ ತಿಂಡಿ ತುಂಬಿದ್ದೊಂದು ಪುಟ್ಟ ಜರ್ಮನ್ ಸಿಲ್ವರ್ ಡಬ್ಬ. ಅದರ ಮೇಲೆ ಬಲಗೈಯ ಬೆರಳುಗಳು. ಹಿಂದಿದ್ದಂತೆಯೇ ಮುಂದೆಯೂ—ಅದೇ ತಾಳಲಯಬದ್ಧತೆ.

ರಾಜಣ್ಣನ ತುಟಿಗಳ ಮೇಲೆ ಆತನಿಗರಿಯದೆಯೇ ನಗೆ ಮಿಂಚಿತು.

ಅದನ್ನು ನೋಡಿದಳು ಹುಡುಗಿ. ರಾಜಣ್ಣನಿಗೆ ಆ ಮುಖ ವ್ಯಗ್ರವಾದಂತೆ ತೋರಿತು.

ಆತನ ಎದೆ ಧಸಕ್ಕೆಂದಿತು. ತುಟಿಯೊಣಗಿತು. ಕೆಳಕ್ಕೆ ಬೀದಿಯನ್ನೆ ನೋಡುತ್ತ ರಾಜಣ್ಣ ಮುಂದೆ ನಡೆದ.

ಆಮೇಲೆ ಹುಡುಗಿ ನಸುನಕ್ಕುದನ್ನು ಆತ ನೋಡಲಿಲ್ಲ.

'ಹುಷಾರಾಗಿರ್ಬೇಕು. ಈ ಹುಡುಗೀರ ಸಹವಾಸವೇ ಬೇಡ' ಎಂದುಕೊಂಡ ರಾಜಣ್ಣ ಆ ರಾತ್ರೆ.

ಆದರೆ ಮರುದಿನ ಕಾಲೇಜಿಗೆ ಹೋಗಲೆಂದು ಆತ ಹೊರಟಾಗ, ರಾತ್ರೆಯ ನಿರ್ಧಾರ ಮರೆತುಹೋಯಿತು. ರಾಜಣ್ಣ ಮನೆಯಿಂದ ನೇರವಾಗಿ ಮಿಲ್ ಕಾರ್ನರಿನ ವರೆಗೂ ಬಂದು ಎಡಕ್ಕೆ ದೃಷ್ಟಿ ಹೊರಳಿಸಿ ಸಂಪಿಗೆ ರಸ್ತೆಯನ್ನು ನೋಡುತ್ತ ನಿಂತ. ಮೂರನೆಯ ಕ್ರಾಸಿನಿಂದಲೋ ಏನೋ ಆ ರಾಣಿ ನಡೆದುಬಂದಳು ನೇರವಾದ ಬೀದಿಗೆ. ಆಕೆ ತನ್ನನ್ನು ದಾಟಿ ಹೋದ ಮೇಲೆ, ರಾಜಣ್ಣ ಸಂಪಿಗೆ ರಸ್ತೆಗಿಳಿದು ಏನೂ ತಿಳಿಯದವನ ಹಾಗೆ ಹಿಂದಿನಿಂದಲೇ ನಡೆದ.

ಆತ ತನ್ನನ್ನು ದಾಟಿ ಹೋಗಲಿಲ್ಲವೆಂದೋ ಏನೋ ಈ ಸಾರೆ ಆಕೆಯೊಮ್ಮೆ ತಿರುಗಿ ನೋಡಿದಳು. ಆ ಮುಖ ನಿಶ್ಚಲವಾಗಿತ್ತು.

ಆ ಹಾದಿಯಲ್ಲೆ ಹೋಗುತ್ತಿದ್ದ ಬರುತ್ತಿದ್ದ ಇನ್ನೆಷ್ಟೋ ಜನರ ನಡುವೆ ರಾಜಣ್ಣ, ತನ್ನನ್ನೆಲ್ಲರೂ ಅಪರಾಧಿಯಾಗಿ ಕಾಣುತ್ತಿರುವರೆಂದೇ ಭಾವಿಸಿಕೊಂಡು, ಮುಂದೆ ನಡೆದ.

ಮಾರನೆಯ ದಿನ ರಾಜಣ್ಣ ಮಿಲ್ ಕಾರ್ನರಿನ ಬಳಿ ಬಂದಾಗ, ಮಿಲ್ಲಿನ ಗಡಿಯಾರ 'ಐದು ನಿಮಿಷ ತಡವಾದೆ. ಆಕೆ ಹೊರಟುಹೋಗಿರಬೇಕು' ಎಂದಿತು. ಮೊದಲು ರಾಜಣ್ಣ ಬಲಕ್ಕೆ ನೋಡಿದ. ಯಾರೂ—ಅಂದರೆ ಆಕೆ—ಕಾಣಿಸಲಿಲ್ಲ. ಎಡಕ್ಕೆ ದೃಷ್ಟಿ ಬೀರಿದ. ಮೂರನೆಯ ಕ್ರಾಸು ಸಂಪಿಗೆ ರಸ್ತೆ ಸೇರುವಲ್ಲೆ ಆಕೆ ನಿಶ್ಚಲಳಾಗಿ ನಿಂತಿದ್ದಳು. ಎಲ್ಲವೂ ಹಿಂದಿನಂತೆಯೇ. ಸೀರೆಯ ಬಣ್ಣವೊಂದೇ ಬೇರೆ. ಮಿಲ್ಲಿನ ಗಡಿಯಾರ ತಡವಾದೆನೆಂದು ಸತ್ಯವನ್ನೂ ಹೇಳಿತ್ತು; ಆಕೆ ಹೊರಟು ಹೊದಳೆಂದು ಸುಳ್ಳನ್ನೂ ಹೇಳಿತ್ತು.

ತಾನು ತಡವಾದೆನೆಂದು ಆಕೆ ಅಲ್ಲೆ ಇರುವಳೆ? ಎಂದು ಆಶ್ಚರ್ಯ ಪಡುತ್ತ ರಾಜಣ್ಣ ನಿಂತ.

ಆತ ಬಂದುದನ್ನು ನೋಡಿದಳೋ ಇಲ್ಲವೋ, ಆ ಹುಡುಗಿ ಚಲಿಸಿದಳು. ಹಿಂಬಾಲಿಯಲು ಧೈರ್ಯಬಾರದೆ, ಈ ದಿನ ರಾಜಣ್ಣನೇ ಮುಂದೆ ನಡೆದ.

ಮತ್ತೆಯೂ ಕೆಲವು ದಿನ, ಒಂದಲ್ಲ ಒಂದು ರೀತಿಯಾಯಿತು.

ಅತಿಯಾದ ಬೆಡಗು ಬಿನ್ನಾಣವಿರಲಿಲ್ಲ. ರೂಪಕ್ಕೆ ಮೆರಗು ಕೊಡುವ ಗಾಂಭೀರ್ಯವಿತ್ತು. ಗೆಳತಿ ಯಾರೂ ಇರಲಿಲ್ಲವೇನೊ ಪಾಪ!

...ಏನೇ ಆಗಲಿ, ಮಾತನಾಡಿಸಿಬಿಡಬೇಕು—ಎಂದು ರಾಜಣ್ಣ ತೀರ್ಮಾನಿಸಿದ.

ಹಾಗೆ ತೀರ್ಮಾನಿಸಿದ ಮರುದಿನ ರಾಜಣ್ಣ ಮೆಲ್ಲನೆ ನಡೆದು ಹೋದ. ಆಕೆ ತನ್ನನ್ನು ದಾಟುವ ಹೊತ್ತಿಗೆ ಮಾತನಾಡಿಸಬೇಕು, ಎಂದುಕೊಂಡ.

ಆದರೆ ಆ ಘಾಟಿ ಹುಡುಗಿಯೂ ನಡಿಗೆಯಲ್ಲಿ ಇರುವೆಯಾಗಬೇಕೆ ಆ ದಿನ? ಎಷ್ಟೆಷ್ಟೋ ಜನ ಮುಂದೆ ಹೋದರು - ಆಫೀಸು ಕಾಲೇಜುಗಳಿಗೆ ಹೋಗುವವರು. ಇನ್ನೆಷ್ಟೋ ಜನ ಹಾದು ಹೋದರು. ಬೇರೆ ಹುಡುಗಿಯರೂ ಕೂಡಾ. ಈಕೆ ಮಾತ್ರ ಹಿಂದೆಯೇ ಇದ್ದಳು.

ಸೆಂಟ್ರಲ್ ಜೈಲು ತಲಪುವ ಹೊತ್ತಿಗೆ ಕೋಮಲ ಕಂಠವೊಂದು ತನ್ನ ಹೆಸರು ಹಿಡಿದು ಕೂಗಿದಂತೆ ಕೇಳಿಸಿತು ರಾಜಣ್ಣನಿಗೆ.

ಕೋಮಲಕಂಠ ಆ ಹುಡುಗಿಯದೇ ಆಗಿರಬೇಕೆಂಬುದೇನೂ ಇರಲಿಲ್ಲವಲ್ಲ!

ರಾಜಣ್ಣ ಹಿಂತಿರುಗಿ ನೋಡಿದ. ಆ ಹುಡುಗಿಯೇ! ತನ್ನ ಹೆಸರು ತಿಳಿದಿತ್ತು ಆಕೆಗೆ!

"ನಿಲ್ಲಿ!"

ರಾಜಣ್ಣನ ಮುಖ ಲಜ್ಜೆಯಿಂದ ಕೆಂಪಗಾಯಿತು. ಆದರೂ ಆಕೆ ಸಮೀಪಕ್ಕೆ ಬರುವುದರೊಳಗೇ ಆತ ಚೇತರಿಸಿಕೊಂಡ.

"ನಿಮ್ಮನ್ನ ನಾನೇ ಆ ದಿನ ಮಾತಾಡಿಸ್ಬೇಕೊಂತಿದ್ದೆ. ಅಷ್ಟರಲ್ಲಿ ನೀವೇ—"

ಆ ಹುಡುಗಿ ಸ್ವಲ್ಪ ನಕ್ಕಳು,—ಇನ್ನಷ್ಟು ಬೇಕು ಎನ್ನಿಸುವ ಹಾಗೆ.

"ಸರಿ! ಸರಿ! ನೀವು ಮಾತಾಡಿಸ್ತೀರೀಂತ ಕಾದು ಕೂತ್ರೆ-ಅದೇನೋ ಇದೆಯಲ್ಲಾ ಗಾದೆ."

ರಾಜಣ್ಣನಿಗೆ ಮಾತೇ ಹೊರಡಲಿಲ್ಲ.

"ಅವಮಾನವಾಯ್ತೇನು? ರೇಗ್ಬೇಡಿ...ವೇದಿಕೆಯ ಮೇಲೆ ಭಾಷಣ ಕೊಡೋವರು ಇಷ್ಟು ಪುಕ್ಕಲೂಂತ ಗೊತ್ತಿರ್ಲಿಲ್ಲ..."

ವೇದಿಕೆ—ಭಾಷಣ—ತನ್ನ ಹೆಸರು ಕೂಡಾ...

"ಯಾಕೆ ಆಶ್ಚರ್ಯವಾಯ್ತೇನು? ಹೋದ ವರ್ಷ ಇಂಟರ್ ಕೊಲಿಜಿಯೇಟ್ ಡಿಬೇಟ್ ಆದಾಗ ನೀವು ಮಾತಾಡಿರ್ಲಿಲ್ಲ—'ಸಹ ವಿದ್ಯಾಭ್ಯಾಸ' ವಿಷಯದ ಮೇಲೆ?"

"ಓ! ಆದರೆ ನನಗೆ ಬಹುಮಾನ ಬರ್ಲಿರ್ಲಿಲ್ಲ."

"ನಾನು ಜಡ್ಜ್ ಆಗಿದ್ರೆ ಬರ್ತಿತ್ತು. ಅದಕ್ಕೇನು ಮಾಡೋಣ?"

"ಮುಖಸ್ತುತಿಗೆ ಥ್ಯಾಂಕ್ಸ್."

"ಆಗ್಩ೇ ನಿಮ್ಮ ಹೆಸರು ನೋಟ್ ಮಾಡ್ಕೊಂಡಿದ್ದೆ...ಈ ವರ್ಷ ನೀವು ಜೂನಿಯರ್ ಬಿ. ಎಸ್ ಸಿ ತಾನೆ?"

"ಹೌದು, ನೀವು?"

"ಸೀನಿಯರ್ ಇಂಟರು."

"ಕಾಂಬಿನೇಷನ್ನು ಯಾವುದು?"

"ಪಿ.ಸಿ.ಎಂ."

"ಮುಂದೇನಾಗ್ಬೇಕೊಂತಿದೀರಾ?"

"ಗೃಹಿಣಿ!"

"ಎಷ್ಟು ತಮಾಷೆಯಾಗಿ ಹೇಳ್ತಿದೀರಿ!"

ಅಷ್ಟರಲ್ಲೆ ಕಾಲೇಜು ಸರ್ಕಲ್ ಬಂತು. ಆಗ ಆ ಹುಡುಗಿಯೆಂದಳು:

"ನೋಡಿ ನಾಳೆಯಿಂದ ಮಿಲ್ ಕಾರ್ನರಿಂದ ಹಿಡ್ದು ಜತೆಯಾಗೇ ನಡಕೊಂಡು ಬರೋಣ, ಧೈರ್ಯವಾಗಿ."

"ನಿಮ್ಹೆಸರು?"

"ಇಷ್ಟು ದಿನ ತಡೆದದ್ದೇ ಉಂಟಂತೆ. ಈಗ ನೆನಪಾಯ್ತಲ್ಲ ಕೇಳೋಕೆ! ನಾಳೆ

ಹೇಳ್ತೀನಿ!"

ಮನಸ್ಸಿಗೆ ಸಂತೋಷವಾದರೂ ಮುಖ ಪೆಚ್ಚು ಪೆಚ್ಚಾಯಿತು ರಾಜಣ್ಣನಿಗೆ.

...ಮರುದಿನ ಕಂಡೊಡನೆ ಆಕೆ ಆಡಿದ ಮಾತು:

"ನನ್ನ ಹೆಸರು ರಮಾ. ಚೆನ್ನಾಗಿದ್ಯೇನು?"

"ಯಾಕೆ ಹಾಗೆ ಕೇಳ್ತೀರಾ?"

"ಸಾಮಾನ್ಯವಾಗಿ ಹುಡುಗರು ಹಾಗೇ ಅಲ್ವೆ? ಹೆಸರು ಹೇಳಿದ್ಕೂಡ್ಲೆ, ಎದೆ ಮೇಲೆ ಕೈಯಿಟ್ಟು, ಎಷ್ಟು ಚೆನ್ನಾಗಿದೆ! ಅನ್ನೋದು."

ರಾಜಣ್ಣ ನಕ್ಕುಬಿಟ್ಟ.

...ಹಾಗೆ ಆರಂಭವಾದ ಗೆಳೆತನ.

ಆ ಸ್ನೇಹಮಯಿ ಹರಟೆಮಲ್ಲಿಯಾಗಿದ್ದಳು. ಆದರೆ ಅದು ರಾಜಣ್ಣನಿಗೆ ಎಂದೂ ಬೇಸರವಾಗದೆ ಇದ್ದ ಹರಟೆ. ಆಕೆಯು ಇಲ್ಲವೆ ಆತನ ಸಹಪಾಠಿಗಳೆಷ್ಟೋ ಬಾರಿ ಅವರನ್ನು ಕಂಡು ನಗೆ ಮಾತನಾಡಿದ್ದರೂ ಅವರು ಕಾಲೇಜಿಗೆ ಹೋಗುವಾಗಲೂ ಹಿಂತಿರುಗುವಾಗಲೂ ಒಬ್ಬರನ್ನು ಬಿಟ್ಟು ಇನ್ನೊಬ್ಬರಿರುತ್ತಿರಲಿಲ್ಲ. ಮೊದಮೊದಲು ಮಾತುಕತೆಗೆಲ್ಲ ಪಾಠ ಆಟಗಳೆ ಪರಿಧಿಯಾಗಿದ್ದುವು. ಆ ಬಳಿಕ ಲೋಕ ವಿಚಾರ. ಅದಾದ ಮೇಲೆ ತಮ್ಮ ತಮ್ಮ ಮನೆತನದ ವಿಷಯ—ಸ್ವವಿಷಯ.

ರಮೆಯ ತಂದೆ ಶಿರಸ್ತೇದಾರರು ಊರೂರಿಗೆ ವರ್ಗವಾಗುವ ಗೊಂದಲದಲ್ಲಿ ಎಲ್ಲಿಯೋ ಕೆಟ್ಟ ಆಹಾರ ತಿಂದು ಕಾಯಿಲೆ ಮಲಗಿ ಪ್ರಾಣನೀಗಿದ್ದರು. ಆಗ ಹನ್ನೆರಡು ವರ್ಷ ರಮೆಗೆ. ಆಕೆಯ ತಾಯಿ ಷಾರ್‌ಮನ್ ಹೈಸ್ಕೂಲಿನಲ್ಲಿ ಉಪಾಧ್ಯಾಯಿನಿಯಾಗಿದ್ದರು. ಮುಂದೆ ಆ ಹೈಸ್ಕೂಲಿನ ಮುಖ್ಯಸ್ಥೆ ಆಂಗ್ಲಳೊಬ್ಬಳಿಗೂ ರಮೆಯ ತಾಯಿಗೂ ಭಿನ್ನಾಭಿಪ್ರಾಯ ಬಂದು, ರಮೆಯ ತಾಯಿ ಕೆಲಸಕ್ಕೆ ರಾಜೀನಾಮೆ ಕೊಟ್ಟರು.

"ತಾಯಿಯ ದೂರದ ಮಾವನೊಬ್ಬನಿದ್ದಾನೆ. ಈಗ ಅಲ್ಲೇ ನಾವಿರೋದು. ಅಮ್ಮ ಎರಡು ಮೂರು ಶ್ರೀಮಂತ ಮನೆಗಳಲ್ಲಿ ಟ್ಯೂಷನ್ ಇಟ್ಕೊಂಡಿದಾಳೆ. ತಂದೆ ಬಿಟ್ಟು ಹೋಗಿರೋ ಹಣ ಒಂದಿಷ್ಟಿದೆ. ಇನ್ನೇನು ಬೇಕು ಹೇಳಿ?"

"ನಿಮ್ಮ ಅಮ್ಮನ್ನ ನಾನು ನೋಡ್ಬೇಕು."

"ಅಗತ್ಯವಾಗಿ. ಆಗಲೆ ನಿಮ್ಮ ವಿಷಯ ಅವಳಿಗೆ ಹೇಳಿದೀನಿ, ಕರಕೊಂಬಾ ಅಂದಿದ್ಲು. ಇವತ್ತೇ ಬರ್ತೀರೇನು?"

"ಇನ್ನೊಂದಿವ್ಸ ಬರ್ತೀನಿ."

...ಆ ಹುಡುಗಿ, ಗಂಡು - ಹೆಣ್ಣುಗಳ ನಡುವೆ ಅರ್ಥಹೀನ ಸಂಕೋಚ ಪ್ರವೃತ್ತಿಯು ಇಲ್ಲವೆ ಅನರ್ಥಕಾರಿ ಸ್ವೈರವೃತ್ತಿಯ ಸಂಬಂಧಗಳಲ್ಲದೆ, ಯೋಗ್ಯವಾದ ಅಪೇಕ್ಷಣೀಯವಾದ ಬೇರೊಂದು ಸಂಬಂಧವೂ ಸಾಧ್ಯವೆಂಬುದನ್ನು ರಾಜಣ್ಣನಿಗೆ ತೋರಿಸಿಕೊಟ್ಟಳು.

ರಾಜಣ್ಣ ಅವರ ಮನೆಗೆ ಹೋಗಿ ಬಂದ.

ತನ್ನ ವಿಚಾರದ ತಕ್ಕಡಿಯಲ್ಲಿ ಹಲವಾರು ಸಾರಿ ಆಕೆಯನ್ನು ಇರಿಸಿ ಆತ ತೂಗಿದ.

ಆಮೇಲೆ ಆಕೆಯನ್ನು ಪ್ರೀತಿಸಿದ, ಮನಃಪೂರ್ವಕವಾಗಿ, ಪ್ರಾಮಾಣಿಕವಾಗಿ, ನಿರ್ಮಲವಾಗಿ.

ರಮೆಯೂ ಆತನನ್ನು ಪ್ರೀತಿಸಿದಳು, ಹಾಗೆಯೇ.

ಆ ಆತ್ಮೀಯತೆ ಉಪಚಾರದ ಅಡ್ಡಗೋಡೆಗಳನ್ನು ಕಡಿದು ಹಾಕಿತು.

ರಾಜಣ್ಣನೊಮ್ಮೆ ಹೇಳಿದ :

" ನಾವು ವಿದ್ಯಾರ್ಥಿಗಳು ಪ್ರೀತಿ - ಪ್ರೇಮದ ಮಾತು ಆಡಬಾರದು ಗೊತ್ತೆ ? "

ರಮಾ ಉತ್ತರವಿತ್ತಳು :

" ನಾನೊಪ್ಪೋದಿಲ್ಲ, ನನ್ನ ಅಭಿಪ್ರಾಯದಲ್ಲಿ ವಿದ್ಯಾರ್ಥಿಗಳು ಪ್ರೀತಿ—ಪ್ರೇಮದ ಮಾತು ಆಡಬಹುದು,—ಬರೇ ಮಾತು, ಅಷ್ಟೆ."

" ಘಾಟಿ ನೀನು ! "

" ಹಾಗೇಂತ ಸೆಂಟ್ರಲ್ ಜೈಲಿನೆದುರಲ್ಲೇ ನೀನು ಕಂಡುಹಿಡಿದು ಎಷ್ಟೋ ಸಮಯ ವಾಯ್ತಲ್ಲಪ್ಪ ! "

...ಆ ವರ್ಷದ ಪರೀಕ್ಷೆಯೂ ಕಳೆದು ಬೇಸಗೆಯ ರಜಾ ಬಂತು.

ರಮೆಯನ್ನು ತಾನು ಪ್ರೀತಿಸತೊಡಗಿದ್ದ ದಿನದಿಂದ ವೊದಲಾಗಿ ಎರಡು ಸಂದೇಹಗಳು ರಾಜಣ್ಣನನ್ನು ಬಾಧಿಸಿದ್ದುವು.

ಒಂದು, ಆತನ ಮನೆತನಕ್ಕೆ ಸಂಬಂಧಿಸಿದ್ದು.

ಆ ಕತೆ ಕೇಳಿ ರಮಾ ಬೇಸರಗೊಂಡಿರಲಿಲ್ಲ. ಬದಲು, ಅವಳೆಂದಿದ್ದಳು :

" ಈ ಕತೆ ಬೇರೆ ಯಾರದೋ ಅಂತ ಭಾವಿಸೋಣ. ಆಗ ಅಮ್ಮಿಯ ವಿಷಯವಾಗಿ ಸಹಾನುಭೂತಿ ತೋರಿಸದೆ ಇರೋದು ಸಾಧ್ಯವೆ? ಆ ತಾಯಿ ಮಾಡಿದ ತ್ಯಾಗವನ್ನು ಗೌರವಿಸದೆ ಇರೋದು ಸಾಧ್ಯವೆ? ಅದರ ಬದಲು ಎಲ್ಲರ ಹಾಗೆ ನಾವೂ ರಾಗವೆಳೆದರೆ ಬೇರೆಯವರಿಗೂ ನಮಗೂ ಏನು ವ್ಯತ್ಯಾಸ ಉಳಿದ ಹಾಗಾಯಿತು ? "

ಅದು ಹಾಗೆ ಬಗೆಹರಿದಿತ್ತು.

ಆ ಇನ್ನೊಂದು ಅಷ್ಟು ಸುಲಭದ್ದಾಗಿರಲಿಲ್ಲ. ಅದು ರಮೆಯ ಜಾತಿಗೆ ಸಂಬಂಧಿಸಿದ್ದು.

" ಎಷ್ಟು ಸಂಕಟಪಟ್ಟು ಹಣ್ಣಾಗಿದ್ದರೂ ನಮ್ಮಮ್ಮೀಗೆ ಕುಲದ ಗೀಳು ಹೋಗಿಲ್ಲ ರಮಾ. ವಯಸ್ಸಾದ ಹಾಗೆ ಆಕೆಯ ವ್ರತ ನಿಯಮ ನಿಷ್ಠೆ ಹೆಚ್ತಾ ಇವೆ."

" ಅವರ ಮನಸ್ಸಲ್ಲಿರೋದು ನನಗೆ ಅರ್ಥವಾಗುತ್ತೆ. ಈ ಪ್ರಾಯಶ್ಚಿತ್ತದ ಮಾತೆಲ್ಲ ತನಗೊಬ್ಬಳಿಗೋಸ್ಕರ ಮಾಡ್ತಾ ಇಲ್ಲ, ಮಗನಿಗೋಸ್ಕರವೂ ಮಾಡ್ತಾ ಇದ್ದಾರೆ. ಮಗನಿಗೊಂದು ಅಂತಸ್ತು ಜಾತಿಗೌರವ ಮನ್ನಣೆ ದೊರೆಯಬೇಕೂಂತ ಆಕೆ ಚಡಪಡಿಸ್ತಿದಾರೆ. ಅಲ್ಲ ? "

" ಅದೇನು ಸುಡುಗಾಡು ಅಂತಸ್ತೊ ಮನ್ನಣೆಯೊ ? "

" ಹಾಗೆಲ್ಲ ಅಂದು ಹೆತ್ತವರ ಮನಸ್ಸು ನೋಯಿಸಬಾರದು."

...ಅಮ್ಮಿ , ಕಾಯಿಲೆಯಿಂದ ನರಳುತ್ತಾ ಬಡವಾಗುತ್ತಾ ಇಹದ ಚಿಂತನೆಯನ್ನೂ ಮಾಡುತ್ತಿದ್ದಳು—ಮಗನ ಮದುವೆಯ ಮಟ್ಟಿಗೆ. ಉಳಿದುದೆಲ್ಲವೂ ಪರದ ಚಿಂತನೆ. ಇನ್ನು ಬಹಳ ದಿನ ತಾನು ಬದುಕುವುದಿಲ್ಲವೆಂಬೊಂದು ಅಂಶ ಆಕೆಯ ಮನಸ್ಸಿನಲ್ಲಿ ಗಟ್ಟಿಯಾಗಿತ್ತು.

ಆದುದಾಗಲೆಂದು ಒಂದು ದಿನ ರಾಜಣ್ಣ , ರಮೆಯನ್ನು ಮನೆಗೆ ಕರೆದುಕೊಂಡು ಬಂದ. ತಾಯಿಯ ಎದುರು ಬಹುವಚನದಲ್ಲೆ ರಮೆಯನ್ನು ಸಂಬೋಧಿಸುತ್ತ ರಾಜಣ್ಣನೆಂದ :

"ನೋಡಿ ರಮಾ, ಇದೇ ನಮ್ಮ ಮನೆ—ಲೈಟಿಲ್ಲದ್ದು. ಇದೇ ವಠಾರ...ಇವರೇ ನನ್ನ ಅಮ್ಮೀ—ಮಮ್ಮೀ. ನೋಡಿ ಈ ಫೋಟೋ ಇಲ್ಲಿದೆಯಲ್ಲಾ, ಇದರಲ್ಲಿರೋರು ತಂಗಿ ಸುಶೀಲ ಮತ್ತು ಆಕೆ ಗಂಡ ಮಾಧವ..."

ಬೆರಗು ದೃಷ್ಟಿಯಿಂದ ರಮೆಯನ್ನು ನೋಡಿದಳು ಅಮ್ಮಿ.

"ಚೆನ್ನಾಗಿದೀರ ಅಮ್ಮ ?" ಎಂದು ರಮಾ ತನ್ನ ಕೊಳಲು ಧ್ವನಿಯಲ್ಲಿ ಕೇಳಿದಳು.

"ಇದೀನಿ ಹಾಗೆ. ವಯಸ್ಸಾದ್ಮೇಲೆ ಎಷ್ಟು ಚೆನ್ನ ಅಂದ್ರೂ ಅಷ್ಟೇ ಅಲ್ವೆ ?"

ತಾಯಿಯ ನೆರವಿಗೆ ಬರುತ್ತ ರಾಜಣ್ಣ ಹೇಳಿದ :

"ಅಮ್ಮಿ, ಈಕೆ ಕಾಲೇಜ್ನಲ್ಲಿ ಓದ್ತಿದಾರೆ. ಈ ವರ್ಷ ಇಂಟರು ಮುಗೀತು. ಇವರಪ್ಪ ಶಿರಸ್ತೇದಾರರಾಗಿದ್ರು. ಈಗ ಅವರಿಲ್ಲ. ಇವರಮ್ಮ ಇಲ್ಲೇ ಒಂದು ಹೈಸ್ಕೂಲಲ್ಲಿ ಉಪಾಧ್ಯಾಯಿನಿ ಆಗಿದ್ರು. ಈಗ ಕೆಲ್ಸ ಬಿಟ್ಬಿಟ್ಟಿದಾರೆ."

ಅಮ್ಮಿ ನೇರವಾಗಿ ರಮೆಯನ್ನೆ ಉದ್ದೇಶಿಸಿ, "ಒಡಹುಟ್ಟಿದೋರು ಯಾರೂ ಇಲ್ವೆ ನಿಂಗೆ ?" ಎಂದು ಮೃದು ಧ್ವನಿಯಲ್ಲಿ ಕೇಳಿದಳು.

"ಇಲ್ಲವಮ್ಮಾ, ಆ ಭಾಗ್ಯ ನನಗಿಲ್ಲ. ನನಗೆ ಅಣ್ಣನೂ ಇಲ್ಲ. ತಂಗಿಯೂ ಇಲ್ಲ. ಅಕ್ಕನೂ ಇಲ್ಲ, ತಮ್ಮನೂ ಇಲ್ಲ..."

"ಆ ವಿಷಯದಲ್ಲಿ ನಾನೇ ಭಾಗ್ಯವಂತ, ಅಲ್ವೆ ಅಮ್ಮಿ ?" ಎಂದ ರಾಜಣ್ಣ.

"ನನ್ನ ರಾಜಣ್ಣ ಬಲು ಜಂಭಗಾರ," ಎಂದಳು ಅಮ್ಮಿ ನಗುತ್ತಾ.

ಅಷ್ಟು ಹೇಳಿದ ಅಮ್ಮಿ ಒಮ್ಮೆಲೆ ಮೌನವಾಗಿ ಅಂತರ್ಮುಖಿಯಾದಳು. ತಾಯಿಯ ಸ್ವಭಾವವನ್ನು ಚೆನ್ನಾಗಿ ಅರಿತಿದ್ದ ರಾಜಣ್ಣ, ರಮೆಯನ್ನು ಕರೆದುಕೊಂಡು ಹೊರಬಿದ್ದ.

ಹಾದಿ ನಡೆಯುತ್ತ ಆತ ಹೇಳಿದ :

"ನಿಮ್ಮನೇಗೆ ಬಂದ್ರೆ ಕಾಫಿ ಕೊಡ್ತೀರಾ, ಉಪ್ಪಿಟ್ಟು—ಬಿಸ್ಕತ್ತು ಕೊಡ್ತೀರಾ. ನಮ್ಮನೇಲಿ ಏನೂ ಇಲ್ಲ."

"ನಿಮ್ಮನೆ ಬೇರೇಂತ ಸಾಧಿಸ್ತಾ ಇದಿಯೇನು ಈಗ್ಲೆ ?"

"ನೋಡು ನಮ್ಸಮಾಜ ಅನ್ನೋದು ಹ್ಯಾಗಿದೆ ? ಆ ಗಾಣಕ್ಕೆ ಸಿಕ್ಕಿ ಒಮ್ಮೆ ನಜ್ಜು ಗುಜ್ಜಾದವರ ವಿಚಾರವೇ ಹ್ಯಾಗೆ ವಿರೂಪವಾಗುತ್ತೆ !"

"ದಯವಿಟ್ಟು ಆ ಯೋಚ್ನೆಮಾಡಿ ಮುಖ ಬಾಡಿಸ್ಕೋಬೇಡ ರಾಜ. ಇನ್ನೊಂದು ವರ್ಷ ಚೆನ್ನಾಗಿ ಓದು. ರ್ಯಾಂಕ್ ಸಂಪಾದ್ಸು. ಅಷ್ಟರೊಳಗಾಗಿ ನಿಮ್ಮಾಯೀನ ನಾನೊಪ್ಸಿ ಸ್ತೀನಿ. ಸರಿಯೇನಪ್ಪ ?"

"ನೀನು ಆಶಾವಾದಿ ರಮಾ..."

...ರಾಜಣ್ಣ ಹಿಂತಿರುಗಿ ಬರುವುದನ್ನೆ ಅಮ್ಮಿ ಕಾಯುತ್ತಿದ್ದಳು.

"ಹೋದಳೇನು ಹುಡುಗಿ ?"

"ಹೌದಮ್ಮ, ಬಸ್ಸು ಹತ್ತಿಸ್ಬಿಟ್ಟು ಬಂದೆ."

"ಒಂದಿಷ್ಟು ತಿಂಡೀನೂ ಕೊಡದೆ ಕಳಿಸಿದ್ವಲ್ಲೊ ?"

"ನಿಂಗೆ ಸುಮ್ನೆ ತೊಂದರೆ ಆಗುತ್ತೇಂತ ಹೇಳ್ಲಿಲ್ಲ."

"ಅದೆಲ್ಲಾ ಎಂಥಾ ತೊಂದ್ರೆ ರಾಜ ? ನನಗೆ ಮರೆವು...ನಾನು ಸುಮ್ನೆ ಕೂತಿದ್ರೆ

ನೀನಾದರೂ ಹೇಳ್ಬೇಡ್ವೆ ? "

"ಹೋಗಲಿ ಬಿಡಮ್ಮ. ಇನ್ನೊಮ್ಮೆ ಯಾವತ್ತಾದರೂ ಬಂದಾಗ ಕೊಟ್ಟರಾಯ್ತು."

ಅಮ್ಮ ಆಳವಾಗಿ ಪರೀಕ್ಷಿಸುವಂತೆ ಮಗನ ಮುಖವನ್ನೆ ನೋಡಿದಳು. ಆಕೆಯ ಹೃದಯದಲ್ಲಿ ಮೂಡಿ ನಿಂದಿದ್ದ ಪ್ರಶ್ನೆಗಳಿಗೆ ಅಲ್ಲೇನೂ ಉತ್ತರ ಸಿಗಲಿಲ್ಲ.

ಮೃದುವಾದ ಸ್ವರದಲ್ಲಿ ಆಕೆಯೊಂದು ಪ್ರಶ್ನೆ ಕೇಳಿದಳು :

"ಆಕೆ ನಮ್ಜನವೆ ರಾಜ ? "

ಸ್ವರ ಮಾತ್ರ ಮೃದುವಾಗಿತ್ತು. ಆದರೆ ಪ್ರಶ್ನೆಯೋ ರಾಜಣ್ಣನ ಪಾಲಿಗೆ ಬಲು ಕಹಿ.

"ನಮ್ಜನ ಅಂದರೆ ಏನಮ್ಮ ಅದು ? "

"ಯಾಕೆ ರಾಜ ಹೀಗಂತೀಯಾ ? "

"ನೀನೇ ಅಲ್ವೆ ಅಮ್ಮ ಆ ದಿನ ಹೇಳಿದ್ದು—ಅದೇನೊ ಅವರಪ್ಪನ ಘಟಶ್ರಾದ್ಧವೊ ಬಹಿಷ್ಕಾರವೊ ಮಾಡಿದ್ರೂಂತ ? "

"ಅವರೇನೊ ಮಾಡಿದ್ರು. ಆದರೆ ನೀನು ಹಾಗೆಲ್ಲ ಕೆಟ್ಟ ಮಾತು ಅನ್ಬಾರ್ದಪ್ಪ."

"ಹೋಗಲಿ ಬಿಡಮ್ಮ. ಯಾಕೆ ಆ ಮಾತು ? ಈಗ ಏನೂಂತ ನೀನು ಕೇಳೋದು ? "

"ನನ್ನ ಯಾಕೆ ಹಿಂಸಿಸ್ತೀಯ ರಾಜ ? ಯಾರ ಒಳ್ಳೇದಕ್ಕೆ ನಾನು ಹೀಗನ್ನೋದು ? ಹುಡುಗಿ ಚೆನ್ನಾಗಿದ್ದಾಳೆ...ನಮ್ಜನವೇ ಆದರೆ...ಜಾತಕ—ಗೀತಕ..."

"ಅಮ್ಮೋ ! ಸಾಕು ನಿಲ್ಸು !" ಎನ್ನುತ್ತ ರಾಜಣ್ಣ ಮನೆಯ ಹೊರಹೋದ.

ಅಮ್ಮ ತನ್ನ ದುರ್ವಿಧಿಯನ್ನು ಹಳಿದು ಅತ್ತಳು. ರಾಜಣ್ಣನೋ ಯಾವ ಗುರಿಯೂ ಇಲ್ಲದೆ ಯಾವು ಯಾವುದೋ ಬೀದಿ ತುಳಿಯುತ್ತ ಮನಸಿನೊಳಗೇ ಮೌನರೋದನ ನಡೆಸಿದ.

ರಮಾ ಎರಡನೆಯ ತರಗತಿಯಲ್ಲಿ ಪಾಸಾದಳು.

ಆಕೆಯ ತಾಯಿ ರಾಜಣ್ಣನನ್ನು ಕೇಳಿದರು :

"ಏನಪ್ಪಾ ಏನ್ಮಾಡಂತೀಯಾ ರಮಾಗೆ ? "

"ಅವಳಿಷ್ಟ...ನಾನೂ ಟೀಚರಾಗ್ತೀನಿ ಅಂದಿದ್ಲು ಯಾವತ್ತೊ."

"ಆಗ್ಲೇಳು...ಬಿ.ಎಸ್.ಸಿ. ಮುಗಿಸ್ಕೊಳ್ಲಿ ಆಮೇಲೆ ಹ್ಯಾಗ್ಬರುತ್ತೋ ಹಾಗೆ ನೋಡ್ಕೊಂಡ್ರಾಯ್ತು."

...ತನಗೆ ಸಂಬಂಧಿಸಿಯೂ ರಾಜಣ್ಣ ಅದೇ ಮಾತನ್ನಾಡಿದ :

"ಆಮೇಲಿನ ಮಾತು ಆಮೇಲೆ."

ಈಗ ಆತನ ಮುಂದೆ ಈ ವರ್ಷಕ್ಕಾಗಿ ಇದ್ದ ಕಾರ್ಯಕ್ರಮವೊಂದೇ—ಚೆನ್ನಾಗಿ ಓದಿ ಉತ್ತೀರ್ಣನಾಗುವುದು...

—ನಾಳೆಯ ಹತ್ತಾರು ಯೋಚನೆಗಳಿಂದ ಈ ದಿನವೇ ಮನಸ್ಸು ಕೆಡಿಸಿಕೊಳ್ಳಬಾರದು.

ಹೆತ್ತ ತಾಯಿಯಾದ ಅಮ್ಮಯನ್ನು ತಾನು ಆದಷ್ಟು ಕಾಲ ಆದಷ್ಟು ಸುಖಿಯಾಗಿ ಇರಿಸಬೇಕು—ಎಂದು ತನಗೆ ತಾನೇ ಮತ್ತೆ ಮತ್ತೆ ರಾಜಣ್ಣ ಹೇಳಿಕೊಂಡ.

## ೧೯

ಮಳೆಗಾಲ ಕಳೆಯಿತು. ಆ ಬಳಿಕ ಬೆಂಗಳೂರಿನ ಡಿಸೆಂಬರ್ ಚಳಿ. ಆದಾದ ಮೇಲೆ ಬಿಸಿಲು ಮತ್ತೊಮ್ಮೆ ಮುಗುಳ್ನಕ್ಕಿತು.

ದಿನ ಕಳೆಯುತ್ತಿದ್ದರೂ ಅಮ್ಮಿಯ ದೇಹಸ್ಥಿತಿಯಲ್ಲಿ ಸುಧಾರಣೆಯಾಗಲಿಲ್ಲ.

ರಾಜಣ್ಣನ ಒತ್ತಾಯಕ್ಕೆ ಅಮ್ಮಿ ಇಂಗ್ಲಿಷ್ ಔಷಧಿಯನ್ನೂ ಸೇವಿಸಿದಳು. ಒಂದು ದಿನ ಎಷ್ಟೋ ಮೇಲು ಎನಿಸಿದರೆ, ಮರುದಿನ ಜಾಡ್ಯ ಆವರಿಸುತ್ತಿತ್ತು.

ರಾತ್ರೆ ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ ಆಕೆಗೆ. ಕೆಟ್ಟ ಕನಸುಗಳು ಬೀಳುತ್ತಿದ್ದುವು. ಕನಸಿನಲ್ಲಿ ಯಾರೋ ತನ್ನನ್ನು ಅಣಕಿಸಿದ ಹಾಗೆ, ಮಾತನಾಡಿಸಿದ ಹಾಗೆ, ಯಾಕೆ ಇನ್ನೂ ಇಲ್ಲೇ ಇದ್ದೀಯಾ—ಎಂದು ಗದರಿಸಿದ ಹಾಗೆ...

ಇದೆಲ್ಲವನ್ನೂ ಪ್ರತಿ ದಿನವೂ ಎಷ್ಟೆಂದು ಏನೆಂದು ರಾಜಣ್ಣನಿಗೆ ಹೇಳಬೇಕು? ಅತನ ದೊಡ್ಡ ಪರೀಕ್ಷೆ ಹತ್ತಿರ ಬರುತ್ತಿತ್ತು. ಪಾಪ ಆತ ಪರೀಕ್ಷೆಗೆ ಓದಬೇಕೆ ಅಥವಾ ಅರ್ಥವಾಗದ ತನ್ನ ಕಾಯಿಲೆಯ ಬಗ್ಗೆ ಚಿಂತಿಸುತ್ತ ಕುಳಿತಿರಬೇಕೆ?

ಒಮ್ಮೆ ನಿಷ್ಣಾತರಾದೊಬ್ಬ ಡಾಕ್ಟರನ್ನು ರಾಜಣ್ಣ ಮನೆಗೆ ಕರೆದುಕೊಂಡು ಬಂದ. ಅವರು ಅಮ್ಮಿಯನ್ನು ಪರೀಕ್ಷೆ ಮಾಡಿದರು. ಹಲವಾರು ಪ್ರಶ್ನೆ ಕೇಳಿದರು.

ಹಿಂತಿರುಗಿದಾಗ ಜತೆಯಲ್ಲಿ ರಾಜಣ್ಣನನ್ನೂ ಕರೆದೊಯ್ಯುತ್ತ ಅವರೆಂದರು :

"ನೀವು ಹೆದರ್ಬೇಕಾದ್ದಿಲ್ಲ...ಆದರೆ ನೀವೇನೂ ಮಗುವಲ್ಲ. ಜವಾಬ್ದಾರಿಯುಳ್ಳ ಯುವಕ. ಒಂದೆರಡು ವಿಷಯ ನಿಮಗೆ ಹೇಳ್ತೀನಿ."

"ಹೇಳಿ ಸಾರ್."

"ಯೌವನದಲ್ಲಿ ಆಕೆ ಒಳ್ಳೇ ದೃಢಕಾಯರಾಗಿದ್ರು ಅಲ್ವೆ?"

"ಇದ್ರಂತೆ ಸಾರ್."

"ನೀವೇ ಮೊದಲ್ನೆ ಹೆರಿಗೆಯೇನೋ?"

"ಹೌದು."

"ಸರಿ ಹಾಗಾದರೆ...ಮೊದಲನೆ ಹೆರಿಗೆಯಿಂದಾನೇ ಈ ಕಷ್ಟಗಳು ಹುಟ್ಟಿವೆ. ಮನೋ ವಿಕಾರಗಳು ನಾರ್ಮಲ್ ಆಗದೆ ಇದ್ದಾಗಿನ ಲೈಂಗಿಕ ಜೀವನದ ಪರಿಣಾಮ ಇದು. ಅವರ ಜೀವನದಲ್ಲಿ ಸಹಿಸೋಕಾಗದ ಘಟನೆಗಳೂ ಆಗಿವೆಯೇನೊ?"

"ಬೇಕಾದಷ್ಟು."

"ಮುಟ್ಟು ನಿಂತಾಗಲಂತೂ ನರನಾಡಿಗಳು ಹತೋಟಿ ತಪ್ಪಿವೆ...ಇದೆಲ್ಲದರ ಪರಿಣಾಮ ಮಾನಸಿಕ ಶಿಥಿಲತೆ. ಆದರೂ ನೀವು ಹೆದರ್ಬೇಕಾದ್ದಿಲ್ಲ. ಸಣ್ಣ ಪುಟ್ಟದಾಗಿ ಇಷ್ಟು ಮಾಡಿ... ಅವರ್ಗೇನಾದರೂ ಆಸೆ ಇದ್ರೆ, ಆಗೊಲ್ಲ ಅನ್ಬೇಡಿ. ಅದಷ್ಟು ಮಟ್ಟಿಗೆ ಈಡೇರ್ಸಿ. ಅವರ ಮನಸ್ಸು ನೋಯುವಂಥಾದ್ದು ಏನನ್ನೂ ಮಾಡ್ಬೇಡಿ, ಆಡ್ಬೇಡಿ..."

ಡಾಕ್ಟರರು ಹೋದ ಮೇಲೆ ರಾಜಣ್ಣನಿಗೆ ಅಮ್ಮಿಯ ದೇಹಸ್ಥಿತಿಯ ವಿಷಯದಲ್ಲಿ

ಹೆದರಿಕೆಯೇನೂ ಆಗದೇ ಇದ್ದರೂ, ತನ್ನ ಹೆತ್ತ ತಾಯಿ ಪಡುತ್ತಿದ್ದ ಸಂಕಟಕ್ಕಾಗಿ ಮನಸ್ಸು ಕರಗಿಹೋಯಿತು.

ಇಂತಹ ಸಂಕಷ್ಟಗಳೆಡೆಯಲ್ಲೂ ರಾಜಣ್ಣ ತನ್ನ ಕೊನೆಯ ಪರೀಕ್ಷೆಗೆ ಸಿದ್ಧತೆ ನಡಸಿದ.

ದಿನ ಕಳೆದಂತೆ ಅಮ್ಮಿಗೆ, ಹಳೆಯ ನೆನಪುಗಳ ಕಾಟ ಹೆಚ್ಚಿತು…ದೀಪಾವಳಿಯ ರಾತ್ರೆ… ಅಂಚೆಯ ಮುನಿಯಪ್ಪ…ದೇವರಂತಹ ಮಾವ…ಹಾವು—ಸಾವು…ಕಾವೇರಿ…ಸುಂದರಮ್ಮ …ಚಿಕ್ಕಿ…ನಾರಾಯಣರಾಯರ ಹೆಂಡತಿ ಕೊಟ್ಟಿದ್ದ ಶಾಪ…

ಒಮ್ಮೆಲೆ ಸುಶೀಲೆಯ ನೆನಪಾಗುತ್ತಿತ್ತು. ಮಗಳನ್ನು ನೋಡಬೇಕೆಂಬ ಆಸೆ. ಆದರೆ ಆಕೆ ಬರುವ ಸ್ಥಿತಿಯಲ್ಲಿರಲಿಲ್ಲ. ಬಹಳ ದಿನಗಳ ಮೇಲೆ ಗರ್ಭ ನಿಂತು, ಆಕೆ ತಾಯ್ತನದ ಸ್ಥಾನವೇರುವ ಸಿದ್ಧತೆಯಲ್ಲಿದ್ದಳು…

ಅಮ್ಮಿ ನಿದ್ದೆ ಹೋಗುತ್ತಿದ್ದರೆ ಒಮ್ಮಿಂದೊಮ್ಮೆಲೆ ಅಮ್ಮಿಗೆ ರಮೆಯ ನೆನಪಾಗುತ್ತಿತ್ತು. ರಮಾ—ಒಳ್ಳೆಯ ಹುಡುಗಿ—ರಾಜಣ್ಣನಿಗೆ ತಕ್ಕವಳು…ಆದರೆ—ಆದರೆ—

ಹೊರ ಕೊಠಡಿಯಲ್ಲಿ ರಾಜಣ್ಣ ಓದುತ್ತ ಅಭ್ಯಾಸಮಾಡುತ್ತ ಕುಳಿತಿದ್ದರೆ, ಅಡುಗೆ ಮನೆಯಲ್ಲೆ ಚಾಪೆ ಮೇಲುರುಳುತ್ತಾ ಅಮ್ಮಿ ನಿದ್ದೆ ಹೋಗಲು, ರಾತ್ರೆ ಕಳೆದು ಬೆಳಗುಮಾಡಲು, ಯತ್ನಿಸುತ್ತಿದ್ದಳು.

ರಾಜಣ್ಣನ ಪರೀಕ್ಷೆ ಒಂದು ತಿಂಗಳು ಇದೆ ಎನ್ನುವ ಹೊತ್ತಿಗೆ ಒಂದು ವಾರವೆಲ್ಲ ಇರುಳು ಅಮ್ಮಿ ಅಸಹನೀಯ ಸಂಕಟ ಅನುಭವಿಸಿದಳು. ಆಕೆಗೆ ಕೇಳಿಬರುತ್ತಿದ್ದುದೊಂದೆ ತನ್ನ ಹುಟ್ಟೂರಿನ ಕರೆ……

ನಿದ್ದೆ ಬಂದಾಗಲೂ ಅಮ್ಮಿ ಬಡಬಡಿಸುತ್ತಿದ್ದಳು :

" ಬಂದೆ ತಾಳಿ. . .ರಾಜಣ್ಣ ಹೋಗ್ಬರ್‍ತೀನಿ. . .ಅವರೆಲ್ಲಾ ಕರೀತಿದಾರೆ. . ."

ರಾಜಣ್ಣನಿಗೆ ಚಿಂತೆ. ತಾಯಿ ಜೀವನಹಳ್ಳಿಗೆ ಹೋಗಿ ಬರುವುದರ ಬಗೆಗೆ ತಾನೇ ಏನಾದರೂ ಸಲಹೆ ಮಾಡಬೇಕೆಂದು ಆತ ಯೋಚಿಸುತ್ತಿದ್ದಾಗಲೇ ಅಮ್ಮಿ ಕೇಳಿದಳು :

" ರಾಜ, ನಿನ್ನ ಪರೀಕ್ಷೆಗೆ ಇನ್ನೂ ಎಷ್ಟು ದಿನ ಇದೆಯಪ್ಪ ? "

" ಷುರುವಾಗೋಕೆ ಇಪ್ಪತ್ನಾರು ದಿವಸ ಅಮ್ಮಿ. ಯಾಕಮ್ಮೀ ? "

" ಇಲ್ಲ. ನೀನು ಬರೋಕಾಗಲ್ಲ. . ."

" ಎಲ್ಲಿಗಮ್ಮೀ. . .! "

" ನಾನು ಜೀವನಹಳ್ಳಿಗೆ ಹೋಗ್ಬೇಕು ರಾಜ. . . ನಾನೀಗ ಹೋಗ್ತೀನಿ . . . ನೀನು ಪರೀಕ್ಷೆ ಆದ್ಮೇಲೆ ಬರ್‍ತೀಯಾ ? "

ರಾಜಣ್ಣನಿಗೆ ಯೋಚನೆಗಿಟ್ಟುಕೊಂಡಿತು. ಬೇಡ—ಎನ್ನುವಂತಿಲ್ಲ. ಒಬ್ಬಳನ್ನೇ ಕಳುಹಿಸುವಂತಿಲ್ಲ.

ಅಮ್ಮಿಯಂತೂ ಹೊರಡುವ ನಿರ್ಧಾರ ಮಾಡಿಯೇ ಬಿಟ್ಟಳು. ರಾಜಣ್ಣ ತನಗೆ ಪರಿಚಯವಿದ್ದೊಬ್ಬ ಹದಿನಾಲ್ಕು ವರ್ಷ ವಯಸ್ಸಿನ ಹುಡುಗನನ್ನು ಅಮ್ಮಿಯ ಜತೆ ಹೋಗಲು ಗೊತ್ತು ಮಾಡಿದ.

" ಸುಶೀಲನ್ದು ಚೊಚ್ಚಲ ಹೆರಿಗೆ. ಶಾಸ್ತ್ರ ಪ್ರಕಾರ ತವರ್ಮನೇಲೆ ಆಗ್ಬೇಕಲ್ವೆ ? "

" ಪರವಾಗಿಲ್ಲಮ್ಮ. . .ಬಹುಶಃ ಮಾಧವ ಕಳಿಸ್ಕೊಡ್ದೆ ಅಲ್ಲೇ ಏರ್ಪಾಟು

ಮಾಡ್ಬಹುದು. ಇಲ್ದಿ ಹೋದ್ರೆ ಈ ಊರಿಗೆ ಕರೆಸೋಣ. ಏನಂತೀಯಾ ?"

"ಈ ಊರಲ್ಲಾದ್ರೂ ಹ್ಯಾಗೆ ಮಾಡೋಕಾಗುತ್ತೆ ರಾಜ ? ನಾನೂ ಪೊರಟ್ಹೋಗ್ತೀನಲ್ಲಾ..."

"ಆ ವಿಷಯ ನಂಗೆ ಬಿಟ್ಬಿಡು. ನಾನು ಏನಾದರೂ ಒಳ್ಳೇ ವ್ಯವಸ್ಥೆ ಮಾಡಿಯೇ ಮಾಡ್ತೀನಿ."

"ಅಂತೂ ನಿನ್ನ ಓದಿಗೆ ತೊಂದ್ರೆ."

"ಏನೂ ಪರವಾಗಿಲ್ಲಮ್ಮ. ಇಷ್ಟರೊಳಗೇ ಚೆನ್ನಾಗಿ ಓದ್ಬಿಟ್ಟಿದೀನಿ."

"ಹುಂ. ಹಾಗಾದರೆ ಪರೀಕ್ಷೆ ಮುಗಿದ್ಮೇಲೆ ಬರ್‍ತೀಯಾ ?"

ಒಂದು ಮಾತಿಗೂ ಇನ್ನೊಂದಕ್ಕೂ ಸಂಬಂಧವಿರಲಿಲ್ಲ. ಒಮ್ಮೆ ಮಗಳನ್ನು ಬೆಂಗಳೂರಿಗೆ ಕರೆಸುವ ಯೋಚನೆ, ಮರುಕ್ಷಣವೆ ಮಗನನ್ನು ಜೀವನಹಳ್ಳಿಗೆ ಕರೆದೊಯ್ಯುವ ಯೋಚನೆ...

"ಆಗಲಮ್ಮೀ, ಪರೀಕ್ಷೆ ಶುರುವಾದ್ಮೇಲೆ ಎಲ್ಲಾ ಸೇರಿ ಎರಡು ವಾರ. ಬಂದ್ಬಿಡ್ತೀನಿ..."

"ಊಟಕ್ಕೇನ್ಮಾಡ್ತೀಯಾ ?"

"ನಾನೇ ಮಾಡ್ಕೊತೀನಮ್ಮಿ. ಬೇಜಾರಾದ್ರೆ ಹೋಟ್ಲಿಗ್ಹೋಗ್ತೀನಿ."

"ಅಂಥಿಂಥವರ ಹೋಟ್ಲಿಗೆ ಹೋಗ್ಬೇಡ್ವಪ್ಪಾ..."

"ಹೂನಮ್ಮೀ..."

"ನಿನ್ನ ನೀನೇ ನೋಡ್ಕೋಬೇಕಪ್ಪ......"

"ಹೂಂ..."

ಅಮ್ಮಿ ಹೊರಟು ನಿಂತಳು. ತಿರುಗಿ ಬೆಂಗಳೂರಿಗೆ ಬರುವ ಇಚ್ಛೆ ಅವಳಿಗಿರಲಿಲ್ಲ. ಆದರೆ ಮಗನ ಮನಸ್ಸು ನೋಯಬಾರದೆಂದು ತನ್ನ ಇಚ್ಛೆ ಏನೆಂದು ಆಕೆ ತಿಳಿಸಲಿಲ್ಲ.

ನಾಲ್ಕೇ ದಿನಗಳ ಹಿಂದೆ ಕ್ಷೌರಿಕ, ಅಲುಗೇ ಇಲ್ಲದ ಚಾಕು ಹಿಡಿದು, ಕೆರೆದು, ನೋಯಿಸಿದ್ದ ತಲೆ ಥಳಥಳಿಸುತ್ತಿತ್ತು. ಒಂದು ಕಾಲದಲ್ಲಿ ರೂಪರಾಶಿಯಾಗಿದ್ದ ಮುಖ ಬಾಡಿ ಸುಕ್ಕುಗಟ್ಟಿ ಕಳೆಗುಂದಿತ್ತು. ಎತ್ತರದ ನಿಲುವು ಮರೆಯಾಗಿ ದೇಹ ಕುಗ್ಗಿತ್ತು. ಆತ್ಮವಿಶ್ವಾಸದ ನಡಿಗೆ ಮಾಯವಾಗಿ ಹೆಜ್ಜೆಗಳು ಅಸ್ಥಿರವಾಗಿದ್ದುವು. ಉಟ್ಟದ್ದು ಕೆಂಪು ಸೀರೆ. ಅದರ ಸೆರಗಿನಲ್ಲಿ ಚಿಲ್ಲರೆ ಖರ್ಚಿಗೆಂದು ಬಿಗಿದ ಒಂದಿಷ್ಟು ಹಣವಿತ್ತು. ಎಡಗೈಯಲ್ಲಿ ಬಟ್ಟೆಯ ಗಂಟೊಂದು ಅದರೊಳಗಿದ್ದುದು ಮಡಿಯುಟ್ಟುಕೊಳ್ಳಲು ಇನ್ನೊಂದು ಸೀರೆ ಮತ್ತು ಹೊದ್ದುಕೊಳ್ಳಲು ಒಂದು ಕಂದು ಕಂಬಳಿ.

ಮೈಸೂರಿಗೆ ಹೊರಟು ನಿಂತಿದ್ದ ರೈಲುಗಾಡಿಯಲ್ಲಿ ಮೂರನೆಯ ತರಗತಿಯ ಒಂದು ಡಬ್ಬಿಯಲ್ಲಿ ಆ ರಾತ್ರೆ ಅಮ್ಮಿ ಮತ್ತು ಆ ಹುಡುಗ ಕುಳಿತರು. ಮುಂಕು ಕವಿದವನ ಹಾಗೆ ರಾಜಣ್ಣ ಅವರನ್ನು ಬೀಳ್ಕೊಟ್ಟ.

ಗಾಡಿ ಹೊರಡುತ್ತಿದ್ದಂತೆ ಅಮ್ಮಿ ಹೇಳಿದಳು :

"ಸುಶೀಯನ್ನೂ ಜತೇಲೆ ಕರ್‍ಕೊಂಡು ಬಾರಪ್ಪ."

ಹಿಂದೆ ಹೇಳಿದ್ದಕ್ಕೆಲ್ಲ ಆ ಕೊನೆಯ ಕೇಳಿಕೆ ವ್ಯತಿರಿಕ್ತವಾಗಿತ್ತು.

ಆ ಕತ್ತಲೆಯಲ್ಲಿ ಗಾಡಿ ಬೆಂಗಳೂರು ನಗರವನ್ನು ಬಿಟ್ಟು ಚಲಿಸಿತು. ಅಮ್ಮಿಯ

ಬಾಳ್ವೆಯ ಪಯಣದಲ್ಲಿ ಆ ಊರೇ ಕೊನೆಯ ನಿಲ್ದಾಣ. ಅಲ್ಲಿಂದ ವಾಪಸು ಪಳ್ಳಿಗೆ...

ಬೆಳಿಗ್ಗೆ ಮೈಸೂರು ತಲಪಿದ ಮೇಲೆ ಅಮ್ಮಿ ಮತ್ತು ಆ ಹುಡುಗ ಇನ್ನೊಂದು ಗಾಡಿಯಲ್ಲಿ ಕುಳಿತು ಮಧ್ಯಾಹ್ನದೊಳಗಾಗಿ ಹಾಸನ ಸೇರಿದರು.

ತನ್ನ ಮಕ್ಕಳು ಬೆಳೆದು ದೊಡ್ಡವರಾಗಿದ್ದ ಊರು—ಹಾಸನ.

ತಾನು ವಾಸವಾಗಿದ್ದ ಮನೆಯತ್ತ—ಕೇಶವಮೂರ್ತಿ ಮತ್ತು ಸಾವಿತ್ರಮ್ಮನ ಮನೆಯತ್ತ—ಅಮ್ಮಿ ಹೊರಟಳು...

ಆ ಮನೆಯಲ್ಲಿ ಯಾರೂ ಇರಲಿಲ್ಲ. ತಾನು ಮಕ್ಕಳೊಡನೆ ವಾಸವಾಗಿದ್ದ ಹಿಂಭಾಗದ ಮನೆಯಲ್ಲೂ ಯಾರೂ ಇರಲಿಲ್ಲ.

ಪಕ್ಕದ ಮನೆಯವರೆಂದರು :

" ಅವರೆಲ್ಲಿಯೋ ದೂರ ಮಧುಗಿರಿಯಾಚೆಗೆ ಹೊರಟುಹೋದರಪ್ಪಾ. ಅಲ್ಲಿ ಅವರ ಸಂಬಂಧಿಕರದು ಯಾವುದೋ ಸ್ವಲ್ಪ ಆಸ್ತಿ ಬಂತಂತೆ ಅವರಿಗೆ."

ಹಾಗೆ ಉತ್ತರ ಕೊಡುತಿದ್ದಾಗಲೆ ಆ ಹೆಂಗಸಿಗೆ ಅಮ್ಮಿಯ ಗುರುತು ಹಿಡಿಯಿತು.

" ಅಯ್ಯೊ, ಬನಶಂಕರಿ ಅಲ್ವೇನಮ್ಮ ? ಇದೇನಮ್ಮ ಹೀಗಾಗ್ಬಿಟ್ಟಿದೀಯ ! ಬಾರೇ... ಕೊನೆಗೂ ಅವರು ಬರಲೇ ಇಲ್ವೇನೆ...ಪಾಪ ! "

ಅಂತಹ ಸಹಾನುಭೂತಿಗೆಲ್ಲ ಅಳಲು ಅಮ್ಮಿಯ ಬತ್ತಿದ್ದ ಕಡಲಿನಲ್ಲಿ ಸಾಕಷ್ಟು ತೇವವಿರಲಿಲ್ಲ.

" ಮಕ್ಕಳೆಲ್ಲವಮ್ಮಾ ? "

" ಸುಶೀಗೆ ಮದುವೆ ಆಯ್ತು ಇವರೆ. ಬೊಂಬಾಯಿಗೆ ಕೊಟ್ಟಿದೆ. ರಾಜಣ್ಣ ಬೆಂಗಳೂರಲ್ಲಿ 'ಬಿ. ಸಿ.' ಓದ್ತಿದಾನೆ. ನನ್ಜತೇಲೆ ಅವನೂ ಬರ್ಬೇಕಾಗಿತ್ತು...ಆದರೆ ಈಗ ಪರೀಕ್ಷೆ ... ಇಗೋ, ಯಾವನೋ ಈ ಹುಡುಗನ್ನ ನನ್ಜತೆ ಕಳಿಸಿದಾನೆ."

" ಅಂತೂ ಚೆನ್ನಾಗಿದೀಯಾ ಅನ್ನು."

ಅಮ್ಮಿ ಚೆನ್ನಾಗಿಯೇ ಇದ್ದಳು, ಅಲ್ಲವೆ?

ಪಕ್ಕದ ಇನ್ನೊಂದು ಮನೆಯ ಹೆಂಗಸೆಂದಳು :

" ಇಲ್ಲಿಂದ ಎಲ್ಲಿಗಮ್ಮ ಪ್ರಯಾಣ ? "

" ಬಾಳೆಮಣ್ಣೂರಿಗೆ ಹೋಗ್ಬೇಕು."

" ಹಾಗೇನು ? ಸಾಯಂಕಾಲ ಒಂದು ಬಸ್ಸಿದೇಂತ ಕಾಣುತ್ತೆ. ಬೆಳಗ್ಗೆ ಅಲ್ಲಿಗೆ ಹೋಗಿ ಸೇರ್ತೀರ."

" ಅದೇ ಅನುಕೂಲ."

" ಊಟಕ್ಕೆ ನಮ್ಮಲ್ಲೆ ಇದ್ಬಿಡಿ."

" ಇಲ್ಲ, ಬಾಳೆಮಣ್ಣೂರು ಸೇರಿ ದೇವರ ದರ್ಶನ ಆಗೋ ತನಕ ನಾನೇನೂ ತಗೊಳ್ಳೊಲ್ಲ. ಈ ಹುಡುಗ್ನಿಗೆ ಬಡಿಸಿ."

ಹುಡುಗ ಊಟ ಮಾಡಿದ. ಅಲ್ಲಿಂದ ಮೋಟಾರು ಪ್ರಯಾಣ. ಬೆಂಗಳೂರಿನಲ್ಲಿ ಜೀವನ ನಡಸಿದ್ದ ಅಮ್ಮಿಗೆ ಈ ಮೋಟಾರು ಬಸ್ಸುಗಳೇನೂ ವಿಚಿತ್ರವಾಗಿ ತೋರಲಿಲ್ಲ. ಆದರೆ ಈ ಮೋಟಾರುಗಳು ಮಾತ್ರ, ಕೊರಕಲು ಹಾದಿಯ ಮೇಲೆ ಅಲ್ಲಲ್ಲಿ ನಿಂತು ನಿದ್ದೆ

ಮಾಡಿ, ಎಚ್ಚರವಾದೊಡನೆ ಹಾರಿ ಕುಪ್ಪಳಿಸಿ ಓಡಿಹೋಗುತ್ತಿದ್ದುವು.

ಮಧ್ಯಾಹ್ನದ ಅಡುಗೆಗೆ ಒಲೆ ಹಚ್ಚುವ ಹೊತ್ತಿಗೆ, ಮೋಟಾರು ಬಾಳೆಮಣ್ಣೂರು ಸೇರಿತು. ಅಮ್ಮಿಯ ಮೈಕೈಯೆಲ್ಲ ಪುಡಿಪುಡಿಯಾಗಿ ನೋಯುತ್ತಿತ್ತು. ಆ ಹುಡುಗನೂ ಸೊರಗಿ ಸುಣ್ಣವಾಗಿದ್ದ.

ಆ ಊರಲ್ಲಿ ಆಕೆ ಹೋಗಬಯಸಿದ್ದೊಂದೇ ಮನೆ—ರಾಮಶಾಸ್ತ್ರಿಯದು; ತನ್ನ ಅಕ್ಕನದು.

ಹುಡುಗನನ್ನೂ ಕರೆದುಕೊಂಡು ಮೆಲ್ಲನೆ ನಡೆಯುತ್ತ ಅಮ್ಮಿ ಅತ್ತ ಸಾಗಿದಳು.

ಆ ಮನೆಯ ಬಾಗಿಲು ತೆರೆದಿದ್ದುದು ದೂರದಿಂದಲೆ ಕಾಣಿಸುತ್ತಿತ್ತು. ಹಿಂದೆ ಎಷ್ಟೋ ಸಾರೆ ಕೂಗಿದ್ದ ಹಾಗೆಯೇ, "ಅಕ್ಕಾ ಅಕ್ಕಾ" ಎನ್ನುತ್ತ ಅಮ್ಮಿ ಆ ಮನೆಯ ಬಳಿ ಹೋದಳು.

ರೇಷ್ಮೆಯ ಸೀರೆಯುಟ್ಟು ಆಭರಣ ತೊಟ್ಟಿದ್ದ ಹೆಂಗಸೊಬ್ಬಳು ಒಳಗಿನಿಂದ ಬಂದು ಗಡಸು ಧ್ವನಿಯಲ್ಲಿ ಕೇಳಿದಳು :

"ಯಾರದು ?"

ಅಕ್ಕನನ್ನೆ ಇದಿರು ನೋಡುತ್ತಿದ್ದ ಅಮ್ಮಿಗೆ ಆ ನಿರಾಶೆ ಅಸಹನೀಯವಾಯಿತು.

"ಯಾರು ಬೇಕು ?"

"ಸುಂದರಮ್ಮ ಇಲ್ವಾ ?"

"ಯಾವ ಸುಂದರಮ್ಮ ?"

"ಸುಂದರಮ್ಮ ಗೊತ್ತಿಲ್ವೆ ನಿಮ್ಗೆ ? ನನ್ನ ಅಕ್ಕ—ರಾಮಶಾಸ್ತ್ರಿಗಳ ಹೆಂಡತಿ."

"ಓ—ಅವರಾ !"

"ಯಾಕೆ ಅವರಿಲ್ವೇನು ?"

"ಬಹಳ ವರ್ಷದಿಂದ ನೀವು ಈ ಊರಲ್ಲಿ ಇರ್‍ಲಿಲ್ಲಾಂತ ಕಾಣುತ್ತೆ."

"ಇರ್‍ಲಿಲ್ಲವಮ್ಮ—ಈಗ ತಾನೆ ಬಂದೆ. ಯಾಕೆ, ಏನಾಯಿತು ?"

"ನಾವೂ ಊರಿಗೆ ಹೊಸಬ್ರೇನೇ...ಈ ಮನೆಗೆ ಬಂದು ಒಂದು ವರ್ಷವಾಯ್ತು."

"ಸುಂದರಮ್ಮ ಈ ಮನೆ ಬಿಟ್ಬಿಟ್ರೆ ಹಾಗಾದರೆ ?"

"ಪಾಪ...ನಿಮಗೊಂದೂ ತಿಳೀದು..... ಸುಂದರಮ್ಮ ಸತ್ಹೋದ್ರು ಕಣ್ರೀ..."

"ಸತ್ಹೋದ್ರೇ ?...ಏನಂದಿರಿ ?"

"ಸತ್ಹೋದ್ರು ಅಂದೆ...ರಾಮಶಾಸ್ತ್ರಿ ಅದೆಲ್ಲೋ ಅವರ ಅಳಿಯನ್ಮನೇಲಿ ಇದಾರಂತೆ... ನೀವು ಯಾರು ?"

"ನಾನು... ನಾನು ಬನಶಂಕರೀಂತ...ಈ ಮನೇಲಿ ಇದ್ದೆ ಹಿಂದೆ."

"ಓ ಹಾಗೋ..."

ಅಮ್ಮಿ ಅಲ್ಲಿಯ ಮನೆಯ ಮೆಟ್ಟುಗಲ್ಲಿನ ಮೇಲೆ ಕುಳಿತು, ಹಣೆಗೆ ಕೈಯಿಟ್ಟು, ಸರಾಗವಾಗಿ ಉಸಿರಾಡಲು ಯತ್ನಿಸಿದಳು.

ಆ ಹುಡುಗ ಹೇಳಿದ :

"ಹೋಗೋಣ ಅಜ್ಜಿ. ಇಲ್ಲಿ ಯಾರೂ ಇಲ್ಲ...ಹೋಗೋಣ."

ಮೆಲ್ಲನೆದ್ದು ಅಮ್ಮಿ ಆ ಹುಡುಗನ ಭುಜವನ್ನೆ ಆಧಾರವಾಗಿ ಮಾಡಿ ಬೀದಿಗಿಳಿದಳು

ಅಕ್ಕನನ್ನು ಕಳೆದುಕೊಂಡ ತಬ್ಬಲಿ ತಾನು ಇನ್ನೆಲ್ಲಿಗೆ ಹೋಗಬೇಕು ?
ತಾನು ತಾಯಿಯಾದ ಮನೆ. ಅಲ್ಲಿಗೆ ಹೋಗುವುದರಲ್ಲಿ ಅರ್ಥವಿರಲಿಲ್ಲ.
ಮಠ. ತನಗೆ ಬಹಿಷ್ಕಾರ ಹಾಕಿದ ಆ ಜನ !
ದೇವರ ದರ್ಶನ ಮಾಡಿ ಆ ಊರು ಬಿಡುವುದೇ ಮೇಲು.
ದರ್ಶನಕ್ಕೆ ಮುಂಚಿತವಾಗಿ ಭದ್ರಾನದಿಯಲ್ಲೊಂದಿಷ್ಟು ಸ್ನಾನ—ಮಡಿ ಬಟ್ಟೆ...
" ನಡೀ ಮಗು...ನದೀದಂಡೆಗೆ ಹೋಗೋಣ..."
" ಹಸಿವಾಗುತ್ತೆ..."
" ಸ್ನಾನ ಮಾಡಿ ಬಂದ್ಬಿಡೋಣ ಮಗು...ದೇವಸ್ಥಾನದಲ್ಲೇ ಪ್ರಸಾದ ಕೊಡ್ತಾರೆ..."

ನದಿಯ ಸ್ನಾನ...ಇಪ್ಪತ್ತೈದು ವರ್ಷಗಳಿಗೆ ಹಿಂದೆ, ಅಲ್ಲೆ ತನ್ನ ಜೀವನದ ದೋಣಿಗೆ ಚುಕ್ಕಾಣಿ ಹಾಕಿ ರಾಯರು ಅದರ ದಿಕ್ಕನ್ನು ಬದಲಿಸಿದ್ದರು...

...ರಾಯರಿಲ್ಲ ಈಗ...ತಾನು ವಿಧವೆ...

...ದೇವಸ್ಥಾನ ತಲಪಿದಾಗ ಮಂಗಳಾರತಿಯ ಸಿದ್ಧತೆಯಾಗುತ್ತಿತ್ತು. ಅಲ್ಲಿ ಹೆಚ್ಚು ಜನ ಇರಲಿಲ್ಲ. ಅರ್ಚಕರಾಗಿದ್ದವನೊಬ್ಬ ಹುಡುಗ. ಅಮ್ಮಿ ಹಣ್ಣುಕಾಯಿ ಹಿಡಿದು ಹೊರ ಅಂಗಣದಲ್ಲೇ ನಿಂತಳು.

" ಒಳಗೆ ಬರಬಹುದು " ಎಂದರು ಯಾರೋ.
" ಇಲ್ಲ, ನಾನು—"
ಜಾತಿಬಾಹಿರಳಾದವಳು ಗರ್ಭಗುಡಿಯತ್ತ ಹೋಗುವುದೆ ?
ಯಾರೋ ನಕ್ಕರು.
" ಈಗೇನು, ಹೊಲೆಯರೂ ಒಳಕ್ಕೆ ಹೋಗ್ತಾರಮ್ಮಾ ! "

ಹೊಲೆಯರು ! ದೇವರ ಎದುರೂ ಎಂತಹ ಮಾತುಗಳನ್ನಾಡುತ್ತಿದ್ದರು ಜನ, ಮೊದಲಿನ ಹಾಗೆಯೇ.

ಅಷ್ಟಾದರೂ ಅಮ್ಮಿ ಒಳಹೋಗಲಿಲ್ಲ. ಕಾಯಿಯ ಒಂದು ಭಾಗವೂ ಹಣ್ಣುಗಳೂ ಗಂಧವೂ ಆಕೆಗೆ ದೊರೆತುವು. ಆರತಿ ಅಲ್ಲಿಗೇ ಬಂತು.

" ಒಂದಿಷ್ಟು ಪ್ರಸಾದ ಆಗ್ಬೇಕಲ್ಲ. ಪರ ಊರಿನವರು ನಾವು."

" ಪ್ರಸಾದ ? ಆ ಪದ್ಧತಿ ನಿಂತುಹೋಯ್ತುಮ್ಮಾ...ದೇವಸ್ಥಾನದ ಮಗ್ಗುಲಲ್ಲಿ ಜೋಯಿಸರ ಮನೆಯಿದೆ. ಆರಾರಾಣೆ ಕೊಟ್ಟರೆ ಮಡಿ ಊಟ ಹಾಕ್ತಾರೆ. ನೀವು ಬ್ರಾಹ್ಮಣರು ತಾನೆ ? "

ಅಮ್ಮಿ ಅಲ್ಲವೆಂದೋ ಹೌದೆಂದೋ ಏನೆಂಬುದೂ ಅರ್ಥವಾಗದ ಹಾಗೆ ತಲೆಯಾಡಿಸಿದಳು.

ಅಮ್ಮಿ ಹುಡುಗನೊಡನೆ ದೇವಸ್ಥಾನಕ್ಕೆ ಪ್ರದಕ್ಷಿಣೆ ಬಂದಳು...ತನ್ನನ್ನು ಶಪಿಸಿದ್ದ ರಾಯರ ಹೆಂಡತಿ ಎಲ್ಲಿರುವಳೋ ಈಗ ?...ಅಂತೂ ಯಾರಾದರೂ ಗುರುತು ಹಿಡಿಯುವುದಕ್ಕೆ ಮುಂಚಿತವಾಗಿಯೇ ಈ ಊರು ಬಿಡಬೇಕು . . .

ಹೊರಗೆ ಆರಾಣೆಯ ಮಡಿ ಊಟಕ್ಕೆ ಕುಳಿತರು ಇಬ್ಬರೂ.

ಬಡಿಸುತ್ತಿದ್ದ ಜೋಯಿಸರ ವೃದ್ಧ ಹೆಂಡತಿ, ಅಮ್ಮಿಯನ್ನೆ ದಿಟ್ಟಿಸುತ್ತ, "ನಿಮ್ಮನ್ನೆಲ್ಲೋ

ನೋಡಿದ ಹಾಗಿದೆಯಲ್ಲಾ" ಎಂದಳು.

ತುತ್ತು ಗಂಟಲಲ್ಲೆ ಸಿಲುಕಿತು ಅಮ್ಮಿಗೆ.

ಸುಧಾರಿಸಿಕೊಳ್ಳುತ್ತಾ, "ನಾವು ಬೆಂಗಳೂರ್ನೋರು—ಚಿಕ್ಕಮಗಳೂರಿಗೆ ಹೋಗ್ತಿದೀವಿ" ಎಂದಳು . . .

'ಚಿಕ್ಕಮಗಳೂರು'—'ಚಿಕ್ಕಮಗಳೂರು' ಎಂದು ಕಿರಿಚಿಕೊಳ್ಳುವ ಸದ್ದಿನೊಡನೆ ದೇವಸ್ಥಾನದ ಅಂಗಣಕ್ಕೇ ಬಸ್ಸು ಬಂತು. ಮತ್ತೊಮ್ಮೆ ಅಮ್ಮಿ ಮತ್ತು ಹುಡುಗ ಒಬ್ಬರಿಗೊಬ್ಬರು ಅಂಟಿಕೊಂಡು ಕುಳಿತರು.

ಕತ್ತಲಾಗುವ ಹೊತ್ತಿಗೆ ಬಸ್ಸು ಚಿಕ್ಕಮಗಳೂರು ಸೇರಿತು. ಅಲ್ಲಿಯೆ, ಬಸ್ ನಿಲ್ದಾಣದಲ್ಲಿಯೆ, ಅಮ್ಮಿ ಮತ್ತು ಆ ಹುಡುಗ ಕಂಬಳಿ ಹೊದ್ದುಕೊಂಡು ಮಲಗಿದರು.

. . . ಅದೇ ಊರು . . . ಅಲ್ಲಿಯೇ ಗುಮಾಸ್ತೆಯಾಗಿದ್ದುದು ತನ್ನ ಪತಿರಾಯ . . . ಅಲ್ಲಿಯೆ ಸಾವು . . . ಅಗಿನಿಂದ ಆರಂಭ ತನ್ನ ಬನ್ನ ಭವಣೆ . . . ಓ ಶಿವನೆ! . . .

ಯೋಚನೆ ಮಾಡಿ ಮಾಡಿ ಆಯಾಸವಾಗಲು, ಬೆಳಗಾಗುವ ಹೊತ್ತಿಗೆ ಅಮ್ಮಿ ಸ್ವಲ್ಪ ನಿದ್ದೆಹೋದಳು.

ಬೆಳಗಾದ ಮೇಲೆ ಹುಡುಗ ಹೋಟೆಲಿಗೆ ಹೋಗಿ ತನ್ನ ಹೊಟ್ಟೆ ತುಂಬಿಸಿಕೊಂಡು ಬಂದ.

ರಾಜಣ್ಣ ಹೇಳಿದ್ದ ಹಾಗೆಯೇ ಚಿಕ್ಕಮಗಳೂರಿನಿಂದ ಹೊರಡುತ್ತಿದ್ದ ಬಸ್ಸು ರಾಯನಹಳ್ಳಿ ಜೀವನಹಳ್ಳಿಗಳಿಗೂ ಹೋಗುತ್ತಿತ್ತು.

ರಾಯನಹಳ್ಳಿಯಲ್ಲಿ ಬಸ್ ನಿಂತಾಗ ಅಮ್ಮಿಗೆ ದಿಗ್ಭ್ರಮೆಯಾಯಿತು. ತಾನಿಲ್ಲಿ ಇಳಿಯಬೇಕೇ ಬೇಡವೆ? ಅದೇನು ಹೊಸ ಅಶುಭ ಸಮಾಚಾರ ಇಲ್ಲಿ ತನಗಾಗಿ ಕಾದಿದೆಯೊ! ಆದರೆ ಆ ಹಳ್ಳಿಯಲ್ಲಿ ಎಂದೋ ನಡೆದ ಘಟನೆಗಿಂತ ಹೆಚ್ಚು ಅಶುಭವಾದುದು ಬೇರೊಂದು ಇರಲಾರದಲ್ಲವೆ?

ಕಂಡಕ್ಟರು ಹೇಳುತಿದ್ದ:

"ಇದೇ ರಾಯನಹಳ್ಳಿ. ನಿಮ್ಮ ಟಿಕೀಟು ಇಲ್ಲಿಗಾಯ್ತು. ಇಳೀರಿ ಅಜ್ಜಿ."

ಸುಶೀಲೆಗೆ ಹೆರಿಗೆಯಾಗುವುದಕ್ಕೆ ಮುಂಚೆಯೇ ತಾನು ಅಜ್ಜಿಯ ಪಟ್ಟಕ್ಕೇರಿದ್ದೆ. ವಯಸ್ಸು ಐವತ್ತೇ ಆದರೂ ತಾನು ಅಜ್ಜಿ . . .

ಹುಡುಗನೊಡನೆ ಆಕೆ ಕೆಳಕ್ಕಿಳಿದಳು . . . ಸುಮಾರು ನಾಲ್ಕು ದಶಕಗಳ ಹಿಂದೆ ತಾನು ಇಲ್ಲಿಗೆ ಬಂದಿದ್ದ ಹಳ್ಳಿ ಇದೇ ಏನು? ಗುರುತು ಸಿಗುವ ಹಾಗೆಯೇ ಇರಲಿಲ್ಲ. ಎಷ್ಟೊಂದು ಮಾರ್ಪಾಟು!

ಪೂರ್ವದ ಬೆಟ್ಟಗಳತ್ತ ಅಮ್ಮಿ ದೃಷ್ಟಿ ಹರಿಸಿದಳು. ಸುತ್ತ ಮುತ್ತಲಿನ ಕಾಡುಗಳು ಮಾಯವಾಗಿದ್ದರೂ ಬೆಟ್ಟಗಳಿದ್ದುವು. ಅಲ್ಲೆ, ಒಂದರ ಕೆಳಗೆ ಆ ಮೂಲೆಯಲ್ಲಿ, ಬಾಳ್ವೆಯ ಹಸುರು ಹುಲ್ಲಿನ ಬಣವಿಗೇ ಬೆಂಕಿ ಹಚ್ಚಿದ್ದರು ಆ ದಿನ.

ಮೋಟಾರು ಹಾದಿಯಾದ ಮೇಲೆ ಆ ಊರಿಗೆ ಬರುವವರೆಷ್ಟೋ ಹೋಗುವವರೆಷ್ಟೋ. ಆದುದರಿಂದಲೇ ಅಮ್ಮಿಯೂ ಆ ಹುಡುಗನೂ ಹಳ್ಳಿಯ ಕಾಲು ಹಾದಿಗಳಲ್ಲಿ ನಡೆದು ಹೋದಾಗ, ಯಾರೂ ಗಮನಿಸಲಿಲ್ಲ.

ಪ್ರಯಾಸಪಟ್ಟು ಹುಡುಕುತ್ತ ಆ ಅಂಗಳವನ್ನು ಅಮ್ಮಿ ತಲಪಿದಳು. ಅದೇ ಅಂಗಳ . . . ದೀಪಾವಳಿಯ ಸಾಲು ದೀಪಗಳನ್ನು ತಾನು ಬೆಳಗಿದ್ದ ಅಂಗಳ . . . ಆದರೆ ಆ ಮನೆಗೀಗ ಮಂಗಳೂರು ಹೆಂಚು ಹೊದಿಸಿದ್ದರು . . . ಯಾರಿರುವರೊ ಒಳಗೆ ?

ನಡೆಯುತ್ತ ಬಂದು ಮನೆಯ ಬಾಗಿಲ ಬಳಿ ನಿಂತ ಅಮ್ಮಿಯನ್ನೂ ಹುಡುಗನನ್ನೂ ಕಂಡು ಜಗಲಿಯ ಮೇಲೆ ಒಬ್ಬಳೇ ಪಗಡೆಯಾಡುತ್ತ ಕುಳಿತಿದ್ದ ಹುಡುಗಿ, "ಅಮ್ಮಾ, ಯಾರೋ ಬಂದಿದಾರೆ ನೋಡೆ" ಎಂದಳು.

ಯಾರು ಈ ಹುಡುಗಿ? ಆಕೆಯ ಅಮ್ಮನಾಗಿ ಹೊರಬರುವಾಕೆ ಯಾರು ?

ಹೊರಬಂದು ಅಮ್ಮಿಯನ್ನು ನೋಡಿದವಳು ನಾಲ್ವತ್ತರೊಳಗೇ ಇದ್ದೊಬ್ಬ ಹೆಂಗಸು. ಆಕೆಯನ್ನು 'ಯಾರಮ್ಮ ನೀನು ?' ಎಂದು ಕೇಳಬೇಕೆಂದು ಅಮ್ಮಿಗೆ ತೋರಿತು. ಅಷ್ಟರಲ್ಲಿ ಆಕೆಯೇ ಕೇಳಿದಳು :

"ಯಾರಮ್ಮ ನೀವು ?"

". . . ಮನೇಲಿ ಬೇರೆ ಯಾರೂ ಇಲ್ವೇನಮ್ಮ ?"

ಆ ಪ್ರಶ್ನೆ ಕೇಳಿ, ಕಟ್ಟುಮಸ್ತಾದ ಗಂಡಸೊಬ್ಬನು ಹೊರಬಂದ :

"ಯಾರು ಬೇಕಮ್ಮ ?"

ಆತ ಏನೆಂದನೆಂಬುದು ಕೇಳಿಸಲಿಲ್ಲ ಅಮ್ಮಿಗೆ. ಆಕೆಯ ದೇಹವೆಲ್ಲ ದೃಷ್ಟಿಯಾಗಿ ಅವನನ್ನು ನೋಡುತ್ತಿತ್ತು. ಹಲವು ವರ್ಷಗಳ ಹಿಂದಿನ ಮಗುವಾಗಿ ಆತನನ್ನು ಮಾರ್ಪಡಿಸಿ ನೋಡುತ್ತಿತ್ತು.

"ನಾಣಿ ! ನಾಣಿ ಅಲ್ವೇನಪ್ಪಾ . . . ನಾನು . . . ಗುರುತು ಸಿಗಲಿಲ್ವೇನು ? ಅಮ್ಮಿ . . . ಅಮ್ಮಿ !"

ಆತನ ತೆರೆದ ಬಾಯಿ ಹಾಗೆಯೇ ನಿಂತಿತು, ಆಶ್ಚರ್ಯದಿಂದ.

"ಅಮ್ಮಿ ! ಹೌದಲ್ಲಾ ! ಬನ್ನಿ ಅಮ್ಮಿ . . . ಇದೇನು ಅಲ್ಲೇ ನಿಂತಿದೀರ ?"

ಅದರ ಜತೆಯಲ್ಲೆ ಮೆಲುದನಿಯಲ್ಲಿ ಆತ ಹೆಂಡತಿಗೂ ಪರಿಚಯ ಮಾಡಿಸಿ ಕೊಟ್ಟ ಮಾತುಗಳು...

"ನಿಜವೆ ? ! ನಾನು ಯಾರೋಂತಿದ್ದೆ. ಬನ್ನೀಮ್ಮಾ ಒಳಕ್ಕೆ."

ಅಮ್ಮಿ ಕೈಕಾಲು ತೊಳೆದುಕೊಂಡಳು. ಮೊದಲ ಸಾರೆ ಬಂದಿದ್ದಾಗಲೂ ಹಾಗೆಯೇ— . . .

ಎಲ್ಲಿಲ್ಲದ ಗೌರವ ತನಗೆ . . . ನಾಣಿಯಿಂದಲೂ ಬಹುವಚನ . . . ರಂಗ ಎಲ್ಲಿದಾನೋ . . . ಅತ್ತೆ—ಮಾವ . . .

ಬಳಿಕ ಆ ಮೈದುನ ಯುಗಯುಗಗಳ ಹಿಂದಿನ ಸಲಿಗೆಯಿಂದಲೇ ಆತ್ಮೀಯತೆಯಿಂದಲೇ ಮಾತನಾಡಿದ :

"ಅಮ್ಮಿ, ನೀನು ನಮ್ಮನ್ನು ಮರೆತೇ ಬಿಟ್ಟೆ. ಆಮೇಲೆ . . . ಎಷ್ಟೊಂದು ಜ್ಞಾಪಿಸ್ಕೋತಿದ್ದೆವು ನಿನ್ನನ್ನು...ಅಮ್ಮ ತೀರ್ಕೊಂಡ್ರು . . . ಅಪ್ಪಯ್ಯನೂ . . . ಅದಾದ ಮೇಲೆ ಯಾರೋ ಬಂದು ನಿನ್ನ ವಿಷಯ ಏನೋ ಕಿಂವದಂತಿ ಹೇಳಿದ್ರು. ನಾವು ನಂಬ್ಲಿಲ್ಲ ಅಮ್ಮಿ..."

ಅವರು ನಂಬಿರಲಿಲ್ಲ, ಅವರು ಯಾರೂ ನಂಬಿರಲಿಲ್ಲ.

" ಈಗೆಲ್ಲಿಂದ ಬಂದೆ ಅಮ್ಮಿ ? "

" ಬೆಂಗಳೂರಿಂದ ಬಂದೆ ಕಣಪ್ಪ. ನನ್ನ ಮಗ ಅಲ್ಲೇ ಇದಾನೆ ಕಾಲೇಜ್ನಲ್ಲಿ ಓದ್ತಿದಾನೆ.... ಈಗ ಪರೀಕ್ಷೇಂತ ಪಕ್ಕದ್ಮನೆ ಈ ಹುಡುಗನ್ನ ಜತೆ ಕೊಟ್ಟು ಕಳಿಸಿದಾನೆ. ಪರೀಕ್ಷೆ ಮುಗಿಸಿ ಆತನೂ ಬಂದ್ಬಿಡ್ತಾನೆ . . . ಮಗಳ್ನ ಬೊಂಬಾಯಿಗೆ ಕೊಟ್ಟಿದೀನಿ ನಾಣಿ... ಈಗ ಬಸುರಿ . . . ಚೊಚ್ಚಲು . . ."

ಆ ಕಿಂವದಂತಿಗೆ ಆಧಾರವಿತ್ತು ಹಾಗಾದರೆ. ನಾಣಿ ಗಾಬರಿಯಿಂದ ಎಡಕ್ಕೂ ಬಲಕ್ಕೂ ನೋಡಿದ. ಬಂದವರಿಗಾಗಿ ಅಡುಗೆಯ ಏರ್ಪಾಡಿಗೆಂದು ಅವನ ಹೆಂಡತಿ ಒಳ ಹೋಗಿದ್ದಳು.

ನಾಣಿ ನಿಟ್ಟುಸಿರುಬಿಟ್ಟರೂ ಸಂತೋಷವಾಗಿರಲು ಯತ್ನಿಸುತ್ತ, " ಚೆನ್ನಾಗಿದೀಯಾ ಒಟ್ನಲ್ಲಿ ? " ಎಂದ.

ಒಟ್ಟಿನಲ್ಲಿ—

" ನನ್ನ ನೋಡಿದರೆ ಹ್ಯಾಗನಿಸುತ್ತಪ್ಪಾ ? "

ತನ್ನದು ತಪ್ಪಿಲ್ಲ, ತನಗೊಂದೂ ತಿಳಿಯದು, ಎಂಬಂತೆ ಆತ ತಲೆಯಾಡಿಸಿದ.

" ರಂಗಣ್ಣ ಎಲ್ಲಿ ? "

" ಮರತೇ ಬಿಟ್ಟೆ ಹೇಳೋಕೆ . . . ಮದುವೆಯಾದ್ಮೇಲೆ ಈಗ ಹತ್ತು ವರ್ಷದಿಂದ ಇನ್ನೊಂದು ಹಳ್ಳೀಲಿದಾನೆ . . . ಇಬ್ಬರು ಮಕ್ಕಳು . . . ಅಲ್ಲೇ ಒಂದಿಷ್ಟು ಜಮೀನಿದೆ."

" ಪಾಲಾಯ್ತು ಅನ್ನು."

—' ಅವರು ' ಇದ್ದಿದ್ದರೆ ಸೋದರರು ಮೂವರಾಗುತ್ತಿದ್ದರು, ಮೂರು ಪಾಲು.

" ಹೂಂ. ಹಾಗೇಂತ್ಲೆ ಅನ್ಬೇಕು. ಇಲ್ಲಿ ಆಡ್ತಾ ಇದ್ಲಲ್ಲ ಹುಡುಗಿ ? ಆಕೆ ನನ್ಮಗಳು. ದೊಡ್ಡೋನು ಚಿಕ್ಕಮಗಳೂರಲ್ಲಿ ಹೈಸ್ಕೂಲ್ ಓದ್ತಾ ಇದಾನೆ . . ."

ದೇವರಂತಹ ಮಾವನಿರಲಿಲ್ಲ. ಪ್ರೀತಿಯ ಅತ್ತೆ ಇರಲಿಲ್ಲ. ಆದರೂ ಆ ಮನೆತನದ ಮಲ್ಲಿಗೆ ಬಳ್ಳಿ ಅಡರಿಕೊಂಡು ಚಪ್ಪರವೇರುತ್ತಿತ್ತು. ಹಿರಿಯ ಮಗನ ಹೆಂಡತಿಯಾಗಿ ತನ್ನದಾಗಬೇಕಾಗಿದ್ದ ಗೌರವ ಅದು. ತನಗೆ ಮಕ್ಕಳಿದ್ದಾರೆ, ಆದರೆ ಆ ಗೌರವವಿರಲಿಲ್ಲ.

ನಾಣಿ ಮನಸ್ಸಿನೊಳಗೂ ಹೊರಗೂ ಯಾವ ಭೇದಭಾವವನ್ನೂ ಕಲ್ಪಿಸದೆ, ಮಿಂದು ಮಡಿಯುಟ್ಟು ನಿಂತಿದ್ದ ಅಮ್ಮಿಯನ್ನು ಅಡುಗೆ ಮನೆಗೊಯ್ದ, ಊಟಕ್ಕೆಂದು.

. . . ತಾನು ಸೊಸೆಯಾಗಿ ಓಡಾಡಿದ್ದ ಅಡುಗೆ ಮನೆ.

ನೆನಪಿನ ಬುತ್ತಿ ಮುಗಿಯದೇ ಇದ್ದ ಆ ಹೊತ್ತಿನಲ್ಲಿ, ಎದುರಿಗಿದ್ದ ಸೊಗಸಾದ ಅನ್ನವನ್ನು ಗಂಟಲಿನೊಳಗೆ ತುರುಕುವುದು ಸಾಧ್ಯವಾಗಲಿಲ್ಲ.

" ಯಾಕಮ್ಮೀ, ಇಷ್ಟೇ ಉಣ್ತಿದೀಯಾ ? "

" ನಂಗೆ ಹಸಿವಿಲ್ಲಪ್ಪ . . ."

" ಹೋಗಲಿ, ರಾತ್ರೆ, ಬೇರೆನಾದ್ರೂ ಮಾಡಿಸೋಣವಂತೆ."

" ರಾತ್ರೆ ! ರಾತ್ರೆಯೂ ಆ ಮನೆಯಲ್ಲಿ ತಾನಿರಬೇಕೆ ? "

" ಇಲ್ಲ ನಾಣಿ . . . ಸಾಯಂಕಾಲ ಒಂದು ಮೋಟಾರಿದೆಯಂತಲ್ಲ. ಅದರಲ್ಲಿ ಜೀವನಹಳ್ಳಿಗೆ ಹೋಗ್ತೀನಿ . . ."

" ಎಲ್ಲಾದರೂ ಉಂಟೆ ? ಇಲ್ಲೇ ಇದ್ಬಿಡು ಅಮ್ಮಿ. ಅಲ್ಲಿ ಯಾರಿದಾರೆ ನಿಂಗೆ ? "

" ಯಾಕೆ, ನಾನು ಹುಟ್ಟಿದ ಹಳ್ಳಿ ಅಲ್ವೆ ಅದು ? ಕಾವೇರಿ ಇಲ್ವೆ ಅಲ್ಲಿ ? "

" ಬೇಕಿದ್ದರೆ ಹೋದರಾಯ್ತು. ಇಷ್ಟೇನು ಅವಸರ ? ಒಂದು ವಾರವಾದರೂ ಇದ್ಬಿಟ್ಟು ಹೋಗು."

ಸುಳ್ಳೆಂದು ತಿಳಿದೂ ಅಮ್ಮಿ ಅಂದಳು :

" ಒಂದು ವಾರವಾದ್ಮೇಲೆ ನಾನೇ ಬರ್‍ತೀನಪ್ಪ. ಒತ್ತಾಯ ಮಾಡ್ಬೇಡ...ನಂಗೇನೊ ಆಗ್ತಿದೆ...ನಾನಿವತ್ತು ಜೀವನಹಳ್ಳಿಗೆ ಹೋಗ್ಲೇಬೇಕು...ಖಂಡಿತ ಹೋಗ್ಬೇಕು."

" ಆಗಲಿ ಅಮ್ಮಿ," ಎಂದ ನಾಣಿ ನಿರಾಶೆಯಿಂದ, ತಾನೂ ಅನ್ನ ಬಿಟ್ಟೆದ್ದು ಕೈ ತೊಳೆಯುತ್ತ. " ಒಂದು ವಾರ ಅಲ್ಲಿದ್ದು ನೀನು ಇಲ್ಲಿಗೇ ಬರಬೇಕು. ಇಲ್ಲಿಯೇ ಇರಬೇಕು...ಬರದೇ ಇದ್ರೆ, ನಾನೇ ಅಲ್ಲಿಗೆ ಬಂದು ಕರಕೊಂಡು ಬರ್‍ತೀನಿ."

...ಕತ್ತಲಾಗುವುದರೊಳಗಾಗಿ ನಾಲ್ವತ್ತು ಮೈಲಿ ದೂರ ಸಾಗಿ ಬಂದು ಜೀವನಹಳ್ಳಿ ಸೇರಿತು ಮೋಟಾರು. ಮೋಟಾರಿಂದ ಇಳಿದಾಗ ಅಮ್ಮಿಯ ಮೈಯಲ್ಲಿ ಹೊಸ ಶಕ್ತಿಯು ಸಂಚಾರವಾಯಿತು. ತಾನು ಹುಟ್ಟಿದ ಹಳ್ಳಿಯ ಶೀತಲ ಗಾಳಿ ಕುಡಿದು ಮತ್ತೆ ಆಕೆ ಹರೆಯದ ಹುಡುಗಿಯಾದಳು.

—ಹೇಗಿರುವಳೊ ಕಾವೇರಿ ? ದಪ್ಪಗೆ—ಎಂದಿರಲಿಲ್ಲವೆ ರಾಜಣ್ಣ ?

ಶಾನುಭೋಗರ ಮನೆಯ ಬಾಗಿಲು.

" ಕಾವೇರೀ ! ಕಾವೇರೀ ! ಕಾವೇರೀ ! "

ಅಸಹನೆ ತುಂಬಿದ ಸ್ವರದ ಕರೆ...ಆ ಮನೆಯ ಗೋಡೆಗಳ ನಡುವೆ ಎಲ್ಲಿಯೋ ಅವಿತಿದ್ದ ತನ್ನ ಬಾಲ್ಯದ ಗೆಳತಿಯನ್ನು ಕಾಣುವ ಆತುರ.

...ಆಕೆ ಬಂದಳು. ಆಕೆಗೆ ತನ್ನನ್ನು ಕರೆದ ಸ್ವರ ಪರಿಚಿತವಾಗಿ ತೋರಿತ್ತು.

' ಯಾರು ? ' ಎಂದಾಕೆ ಪ್ರಶ್ನಿಸಲಿಲ್ಲ.

" ಕಾವೇರಿ ! ಇಲ್ಲಿದೀನಿ. ನಾನು ! "

" ಅಮ್ಮಿ ! ಬಂದೆಯೇನೇ ಅಂತೂ ? "

ಹೊರಗೇ ನಿಂತಿದ್ದಳು ಆ ಅಮ್ಮಿ ... ಕಾವೇರಿ ಕೈ ಹಿಡಿದು ಒಳಕ್ಕೆ ಕರೆದು ತಂದಳು. ತನ್ನ ದೊಡ್ಡ ಮಗ, ಸೊಸೆ, ಯಜಮಾನರು, ಎಲ್ಲರಿಗೂ ಕೇಳಿಸುವ ಹಾಗೆ ಕಾವೇರಿ ಅಂದಳು :

" ಅಮ್ಮಿ ಬಂದಿದಾಳೆ. ಕೇಳಿಸ್ತೆ ? ಬೆಂಗಳೂರಿಂದ ಅಮ್ಮಿ ಬಂದಿದಾಳೆ."

ಆದರೆ ಒಳಗೆ ಬೆಳಕಿನಲ್ಲಿ ಆ ಗೆಳತಿಯರು ಪರಸ್ಪರರನ್ನು ನೋಡಿದಾಗ ?

ಹೇಗಾಗಿದ್ದಳು ಅಮ್ಮಿ ! ತನ್ನ ತಾಯಿಗೆ ಸೊಗಸಾದ ಗುಂಗುರು ಬೆಳ್ಳಿಕೂದಲಿವೆ ಎಂದಿದ್ದ ರಾಜಣ್ಣ ಆ ದಿನ, ಅಭಿಮಾನದಿಂದ. ಎಲ್ಲಿ ಆ ಕೂದಲು ? ಎಲ್ಲಿ ? ಗುರುತೆ ಸಿಗದ ಹಾಗೆ ಆಳಆಳಕ್ಕೆ ಬತ್ತಿಹೋಗಿದ್ದ ಆ ಮುಖವೊ ?......

" ಮೈ ಸರಿಯಾಗಿಲ್ವೆ ಅಮ್ಮಿ ? "

" ಸರಿಯಾಗಿದೀನಮ್ಮಾ.......ಸರಿಯಾಗಿಯೇ ಇದೀನಿ ಕಾವೇರಿ. ಇನ್ನೇನೂ ಭಯವಿಲ್ಲ. ಅಂತೂ ಬಂದೆನಲ್ಲ ! "

" ಎಷ್ಟೋ ವರ್ಷಗಳ ಮೇಲೆ ನೀನು ಬಂದಿದೀಯಾ ಅಮ್ಮಿ. ಇನ್ನೆಲ್ಲಿಗೂ ಹೋಗ

ಬೇಡಮ್ಮ : ಸಾಕು ನೀನು ಅನುಭವಿಸಿದ್ದು. ಹತ್ತು ಜನ್ಮಕ್ಕೆ ಸಾಕಾಗುವಷ್ಟಾಯಿತು. . . ."

ಅವರಿಬ್ಬರೂ ನಡುವಯಸ್ಸಿನ ಹೆಂಗಸರಾಗಿರಲಿಲ್ಲ. . . . . .ಅದೇ ಆಗ ಸೀರೆಯುಡಲು ಕಲಿತಿದ್ದ ಹುಡುಗಿಯರಾಗಿದ್ದರು. . .ಅಂತಹ ಹುಡುಗಿಯರಿಬ್ಬರ ಗೆಳೆತನ. . .ಮುಗಿಯದಷ್ಟು ಮಾತು...

○ ○ ○ ○

...... ಮರುದಿನ ಆ ಹುಡುಗ, ದೊಡ್ಡದೊಂದು ಭಾರ ಕಳೆಯಿತೆಂದು ಬೆಂಗಳೂರಿಗೆ ಹಿಂತಿರುಗಿ ಹೋದ.

ಅಮ್ಮಿ ಅಲ್ಲಿಯೇ ಉಳಿದಳು. ಅಣ್ಣನ ನೆನಪು. . .ಅಜ್ಜಿ ಮಾರಿದ ಹೊಲ.

ಅದು ಬೇಸಗೆ. ಹಸುರು ಕಂದು ಬಣ್ಣಕ್ಕೆ ಮಾರ್ಪಟ್ಟು ಗಿಡಮರಗಳು ಬಾಡಿದ್ದುವು. ನೆಲ ಒಣಗಿತ್ತು.

ಅಂಥದರಲ್ಲೂ ಅಮ್ಮಿ ಹಸನ್ಮುಖಿಯಾದಳು.

ದಿನಗಳು ಕ್ಷಣಗಳ ಹಾಗೆ ಕಳೆದ ಮತ್ತೊಂದು ಅಪೂರ್ವ ಅನುಭವ.

...ಆದರೆ ಸದಾ ಕಾಲವೂ ಆ ಅನುಭವ ತನ್ನ ಸೊತ್ತಾಗುವ ಭಾಗ್ಯವಿರಲಿಲ್ಲ ಅಮ್ಮಿ

ಮತ್ತೆ ಯಾತನೆಗಳು ತಲೆದೋರಿದುವು—ಮನಸ್ಸಿನ, ದೇಹದ ಯಾತನೆಗಳು.... ಬಾರದ ರಾತ್ರೆಗಳು...ಮಗನ-ಮಗಳ ನೆನಪು......ಯಾರೊ ಬೆದರಿಸಿದ ಹಾಗಾಗುತ್ತಿತ್ತು

ಮಕ್ಕಳ್ನ ಹಾಗೇ ಬಿಟ್ಟಿದೀಯಾ ? ಯಾರಾದರೂ ಆ ಒಡವೆ ಎತ್ತಿಕೊಂಡು ಹೋ ಯಾರು ಗತಿ ನಿಂಗೆ ? '

ಕನಸಿನಲ್ಲಿ ಅಮ್ಮಿ, ' ರಾಜಾ ! ಸುಶೀ ! ' ಎಂದು ಹೆಸರು ಹಿಡಿದು ಕೂಗುತ್ತಿದ್ದಳು.

ಕಾವೇರಿ ಏನೇನೋ ಔಷಧಿ ಮಾಡಿಸಿದಳು. ಪ್ರಯೋಜನವಾಗಲಿಲ್ಲ.

ಜ್ವರವೂ ಅಮ್ಮಿಯನ್ನು ಹುಡುಕಿ ಬಂದು ಕಾಡಿಸಿತು. ಮಲಗಿದ್ದಲ್ಲಿಂದ ಏಳಲಾಗಲಿಲ್ಲ ಆ ಜೀವಕ್ಕೆ.

" ಅಂತೂ ನಿಮಗೆಲ್ಲಾ ತೊಂದರೆ ಕೊಡ್ತಿದೀನಿ ಕಾವೇರಿ."

" ಸುಮ್ನಿರು ಅಮ್ಮಿ. . .ಏನಾದರೂ ಅನ್ಬೇಡ. . ."

" ರಾಜಣ್ಣಂಗೊಂದು ಕಾಗದ ಬರೆಸು ಕಾವೇರಿ. . .ಪರೀಕ್ಷೆ ಮುಗಿಸ್ಕೊಂಡು ತಂಗೀ ಜತೇಲಿ ಬೇಗ್ನೆ ಬಾಂತ."

" ಹೂಂ. ಬರೆಸ್ತೀನಿ. . . . . ."

" ಮುಂದಿನ ವಾರವೇ ಆತನಿಗೆ ಪರೀಕ್ಷೆ. . .ನಾನು ಕಾಹಿಲೆ ಬಿದ್ದಿದೀನೀಂತ ಬರೀ ಬೇಡೀಪ್ಪಾ."

" ಇಲ್ಲ ಕಣೆ. ಅಷ್ಟೂ ಗೊತ್ತಾಗಲ್ವೆ ? "

ಜ್ವರ ಹೆಚ್ಚಿತು. . .ಸ್ಮೃತಿ ತಪ್ಪುತ್ತಿತ್ತು ಒಮ್ಮೊಮ್ಮೆ. . .

ಎಚ್ಚರವಿದ್ದಾಗ ಅಮ್ಮಿ ಹೇಳುತ್ತಿದ್ದಳು :

" ಸುಶೀನ್ನೂ ಕರಕೊಂಡೇ ಬರ್ಲಿ . . . ಯಾಕೊ, ಈ ಸಾರೆ ನಾನು ಉಳಿಯೋಲ್ಲ ಕಾವೇರಿ."

" ಹಾಗನ್ಬಾರದೇ. . .ನಿಂಗೇನೂ ಆಗಲ್ಲ. ಹೆದರ್ಕೊಬೇಡ."

"ಹೆದರ್ಕೆ ಒಂದೂ ಇಲ್ಲ ಕಾವೇರಿ. ರಾಜಣ್ಣನ್ನೂ ಸುಶೀನ್ನೂ ನೋಡ್ಬೇಕೂಂತ ಆಸೆ...ಮಕ್ಕಳು ಪಕ್ಕದ್ಲೇ ಇದ್ದಾಗ...ಸಾಯೋದು .... ಮುತ್ತೈದೆ ಸಾವಿನಷ್ಟೇ ಸುಖ ಅಲ್ಲ?..."

ಅಧೀರಳಾದರೂ ಕಾವೇರಿ ತಾನು ಅತ್ತು ಅಮ್ಮಿಯ ದುಃಖ ಹೆಚ್ಚಿಸಬಾರದೆಂದು, ತುಟಿ ಬಿಗಿಹಿಡಿದು ತನ್ನೊಳಗಿನ ನೋವಿಗೆಲ್ಲ ಬೀಗ ಹಾಕಿದಳು.

ಕಾವೇರಿಯ ಯಜಮಾನರು ಅವಸರದ ಕಾಗದ ಬರೆದರು:

"ಜೀವ ಉಳಿಯೋ ಪ್ರಶ್ನೆ...ಕಾಗದ ಕಂಡ ತಕ್ಷಣ ಹೊರಟು ಬಾ...ಸುಶೀಲೇನೂ ಬರಬೇಕಂತೆ. ಬರುವುದು ಸಾಧ್ಯವೆ? ನೋಡು... ನೀನಂತೂ ತಡ ಮಾಡ್ಬೇಡ."

ಎರಡು ದಿನ ಬಿಟ್ಟು ಚಿಕ್ಕಮಗಳೂರಿಗೆ ಜನ ಕಳುಹಿಸಿ, ಅಲ್ಲಿಂದ ಬೆಂಗಳೂರಿಗೆ ಅದೇ ಅರ್ಥದ ತಂತಿಯನ್ನೂ ಅವರು ಕೊಡಿಸಿದರು.

## ೨೦

ರಾಜಣ್ಣ ಪರೀಕ್ಷೆಗೆ ಓದುತ್ತ ಮನೆಯಲ್ಲೇ ಇದ್ದುದರಿಂದ ಕಾಗದ ತಂತಿಗಳೆರಡೂ ...ದಲ್ಲಿ ಏಕಕಾಲದಲ್ಲಿ ದೊರೆತುವು. ಅವುಗಳನ್ನೋದಿ ರಾಜಣ್ಣ ತಬ್ಬಿಬ್ಬಾದ. ಎರಡೇ ...ಳಿದ್ದುವು ಪರೀಕ್ಷೆಗೆ. ಪರೀಕ್ಷೆ ಮುಗಿಸಿ ಹೋಗುವುದೆಂದರೆ ಎರಡು ವಾರಗಳಾದರೂ ...ಬಹುದು; ಹೆಚ್ಚೂ ಆಗಬಹುದು. ಆದರೆ ಕಾಗದ—ತಂತಿಯ ಪ್ರತಿ ಪದದಲ್ಲೂ ...ತರ ತುಂಬಿತ್ತಲ್ಲ? ತನ್ನ ಅಮ್ಮಿ ಮರಣಶಯ್ಯೆಯಲ್ಲಿರುವಳೆಂಬೀ ಆ ಸಂದೇಶದ ಅರ್ಥ.

ಆ ಕಂಗಾಲ ಪರಿಸ್ಥಿತಿಯಲ್ಲಿ ಸುಮ್ಮನೆ ಕುಳಿತು ರಾಜಣ್ಣ ಹೊತ್ತು ಕಳೆಯುವ ಹಾಗಿರ...ಲ್ಲ. ಆಗಲೆ ಮಧ್ಯಾಹ್ನ ದಾಟಿತ್ತು.

ರಾಜಣ್ಣ ಬಿಸಿಯುಸಿರು ಬಿಟ್ಟು ತಾಯಿಯನ್ನು ನೋಡಲು ಹೊರಡುವ ತೀರ್ಮಾನ ...ಮಾಡಿದ.

ಪರೀಕ್ಷೆ ದೊಡ್ಡದಲ್ಲ. ಆಮೇಲೂ ಪಾಸಾಗಬಹುದು. ಈ ಭೂಮಿಯ ಮೇಲೆ ತನ್ನ ಇರುವಿಕೆಯನ್ನೇ ಸಾಧ್ಯಗೊಳಿಸಿದ ತಾಯಿಯ ಕೊನೇ ಘಳಿಗೆಯಲ್ಲಿ ಆಕೆಯ ಬಳಿಯಲ್ಲಿರದೆ, ಪರೀಕ್ಷೆಯ ಪ್ರಶ್ನೆಗಳನ್ನು ಉತ್ತರಿಸುವುದು ಸರಿಯಾಗಿರಲಿಲ್ಲ—ಸಾಧ್ಯವಿರಲಿಲ್ಲ.

ತಂಗಿಯನ್ನೂ ಕರೆದುಕೊಂಡು ಬರಬೇಕೆಂಬುದು ತಾಯಿಯ ಬಯಕೆಯಾಗಿತ್ತು. ತಂಗಿ ತುಂಬು ಗರ್ಭಿಣಿ. ಹಾಗೆಲ್ಲ ಹೊರಟು ಬರಲು ಮಾಧವನಿಗೆ ರಜವಾದರೂ ಎಲ್ಲಿ ದೊರೆಯಬೇಕು?

ಹೊರಡುವ ಸಿದ್ಧತೆ ಮಾಡಿ, ರಮೆಗೆ ತಿಳಿಸಿ ಬರಬೇಕೆಂದು ರಾಜಣ್ಣ ಬಾಡಿಗೆಯ ಸೈಕಲನ್ನೇರಿ ಅವರ ಮನೆಗೆ ಹೋದ.

ತನ್ನ ಪರೀಕ್ಷೆ ಮುಗಿಸಿದ್ದ ರಮಾ ಹೊತ್ತು ಕಳೆಯಲೆಂದು ಗಾತ್ರದ ಯಾವುದೋ ಪುಸ್ತಕ ಓದುತ್ತ ಕುಳಿತಿದ್ದಳು. ಓದುವುದನ್ನು ಬಿಟ್ಟು ಉರಿಬಿಸಿಲಲ್ಲಿ ಬಂದ ರಾಜಣ್ಣನನ್ನು ಕಂಡು ಆಕೆಗೆ ಆಶ್ಚರ್ಯವಾಯಿತು.

"ಬಾ ರಾಜ. ಬಿಸಿಲಲ್ಲಿ ಸೈಕಲ್ ಸವಾರಿ ತುಂಬ ಇಷ್ಟವೇನು ನಿಂಗೆ ?"

"ರಮಾ, ಅಮ್ಮಿಗೆ ಸಕತ್ ಕಾಯಿಲೆ, ಕಾಗದ ಬಂತು. ತಂತಿ ಬಂತು. ತುಂಬಾ ಸೀರಿಯಸ್ಸೇ ಆಗಿರ್ಬೇಕು."

"ಹೋಗ್ತೀಯೇನು ?"

"ಹಗಲೂ ರಾತ್ರೆ ನಮ್ಮ ಹೆಸರು ಹಿಡಿದು ಹಂಬಲಿಸ್ತಾಳಂತೆ. ರಾಜ—ಸುಶೀಂತ. ತಂಗಿಯಂತೂ ಬರೋಹಾಗಿಲ್ಲ. ನಾನಾದರೂ ಹೋಗ್ತೀನಿ, ಆಗ್ದೆ ?"

"ಈ ಸಾರೆ ಪರೀಕ್ಷೆ—"

"ಈ ಪರಿಸ್ಥಿತೀಲಿ ಕರ್ತವ್ಯ ಯಾವುದು ಹೇಳು."

"ತಾಯಿೂನ ನೋಡೋದು."

"ಹೌದು ರಮಾ. ಆಕೆಗೆ ಬೇರೆ ಯಾರಿದ್ದಾರೆ ಹೇಳು ?"

ರಮಾ, ಮುಖ ಬಾಗಿಸಿ ಕ್ಷಣಕಾಲ ಕುಳಿತವಳು ತಲೆ ಎತ್ತಿ ಕೇಳಿದಳು :

"ನಾನೂ ಬರಲೇ ರಾಜ ?"

"ನೀನು ?"

"ಹೂಂ...ನಂಗೆ ನಿಮ್ಮಮ್ಮನ ಆಶೀರ್ವಾದ ಬೇಕು."

ರಾಜಣ್ಣ ಒಂದು ಕ್ಷಣ ಹಿಂದುಮುಂದು ನೋಡಿದ.

"ಸರಿ ರಮಾ, ಹೊರಡೋಣ. ನಿಮ್ಮ ತಾಯಿೂನ ಕೇಳು."

"ಒಳಗಿದಾಳೆ. ನಾನು ಕೇಳ್ತೀನಿ. ಆ ಯೋಚ್ನೆ ಬೇಡ. ಹೊರಡೋದು ಎಷ್ಟು ಗಂಟೆಗೆ ?"

"ರಾತ್ರೆ ರೈಲು. ಕಡೂರ್ನಲ್ಲಿಳಿದು ಬಸ್ ಹತ್ತಿ ಹೋಗೋಣ...ಇಲ್ಲಿಗೆ ಎಂಟು ಗಂಟೆಗೆ ಬರ್‍ತೀನಿ."

"ದುಡ್ಡೆಷ್ಟು ಬೇಕು ?"

"ನನ್ಹತ್ರ ಇದೆ ಸಾಕಷ್ಟು..."

... ರೈಲು-ಮೋಟಾರುಗಳು ರಾಜಣ್ಣನನ್ನೂ ರಮೆಯನ್ನೂ ಜೀವನಹಳ್ಳಿಗೆ ತಂದು ಮುಟ್ಟಿಸಿದುವು.

ಅವರು ಶಾನುಭೋಗರ ಮನೆ ತಲಪಿದ್ದು ಮರುದಿನ ಮಧ್ಯಾಹ್ನದ ಅನಂತರ. ರಾತ್ರೆಯೆಲ್ಲ ನಿದ್ದೆಯಿಲ್ಲದೆ ಸಂಕಟ ಪಡುತ್ತಿದ್ದ ಅಮ್ಮಿಗೆ ಅದೇ ಆಗ ಜೋಂಪು ಹತ್ತಿತ್ತು. ಒಂದು ಮಂಚದ ಮೇಲೆ ಮೆತ್ತನೆಯ ಹಾಸಿಗೆ ಹಾಸಿ ಮಲಗಿಸಿದ್ದರು ಆಕೆಯನ್ನು. ಕಾವೇರಮ್ಮ ಬದಿಯಲ್ಲಿ ಕುಳಿತು ಕೈಲಿ ಬೀಸಣಿಗೆ ಹಿಡಿದು ಗಾಳಿ ಬೀಸುತ್ತಿದ್ದಳು.

ರಾಜಣ್ಣನನ್ನು ನೋಡಿ ಕಾವೇರಮ್ಮನ ಮುಖ ಅರಳಿತು.

ತುದಿಗಾಲ ಮೇಲೆ ನಡೆಯುತ್ತ ಹೊರಬಂದು ಆಕೆಯೆಂದಳು :

"ಅಂತೂ ಬಂದೆಯಲ್ಲಪ್ಪ, ಬಾ...ಮೋಟಾರು ಶಬ್ದ ಕೇಳಿದಾಗಲೇ, ನೀನೀಗ ಬರ ಬಹುದೂಂತಿದ್ದೆ."

"ಹ್ಯಾಗಿದೆ ಈಗ ?"

"ಹಾಗೇ ಇದೆ ರಾಜಣ್ಣ. ನಿದ್ದೆ ಹೋಗಿದಾಳೆ."

ಅಮ್ಮಿ ಕಣ್ಣಸನ್ನೆಯಿಂದ ರಾಜನನ್ನು ಹತ್ತಿರಕ್ಕೆ ಕರೆದಳು. ರಮೆಯ ಕೈ ಮತ್ತು ಆತನ ಕೈ...ನಿಶ್ಶಕ್ತಳಾದ ಆಮ್ಮಿ ಬಲು ಪ್ರಯಾಸದಿಂದ ಅವುಗಳನ್ನು ಒಂದುಗೂಡಿಸಿದಳು...

"ಗಂಡ . . . ಹೆಂಡತಿಯಾಗಿ . . . ಸುಖವಾಗಿ ಬಾಳಿ."

ಅದು ಅಮ್ಮಿ ಕೊಟ್ಟ ಅಶೀರ್ವಾದ.

"ರಾಜಣ್ಣ . . . ಶುದ್ಧ ಮಗು . . . ಸರಿಯಾಗಿ . . . ನೋಡ್ಕೊ ರಮಾ . . ."

ಅದು ರಮೆಗೆ ಹಿತವಚನ.

"ಉಳಿದಿದ್ದ ಕೊನೇ ಆಸೆಯೂ ಈಡೇರಿತು . . . ಕಾವೇರಿ . . ."

ಕಾವೇರಮ್ಮನಿಗೆ ಈ ಘಟನೆಯ ಹಿನ್ನೆಲೆ ತಿಳಿದಿರಲಿಲ್ಲ . . . ಆದರೂ ಆ ದೃಶ್ಯ ನೋಡುತ್ತ ಆಕೆ ಮೌನವಾಗಿ ಕಂಬನಿ ಮಿಡಿದಳು.

. . . ಸಂಜೆಯ ಹೊತ್ತಿಗೆ ಅಮ್ಮಿ ಬಹಳ ಸುಧಾರಿಸಿದಂತೆ ಕಂಡಿತು.

ಅದು ಬಿರುಗಾಳಿಗೆ ಪೂರ್ವದ ಶಾಂತಿ. ಕತ್ತಲಾಗುತ್ತಲೆ ಅಮ್ಮಿಯ ಸ್ವರ ಉಡುಗಿತು. ಆಯಾಸವಾಗದಿರಲೆಂದು ಅವಳನ್ನು ಮಲಗಿಸಿದರು.

ಭುಜಕ್ಕೆ ಭುಜ ತಗಲಿಸಿ ನಿಂತಿದ್ದ ರಾಜನನ್ನೂ ರಮೆಯನ್ನೂ ನೋಡುತ್ತಲೇ ಇದ್ದಳು ಅಮ್ಮಿ. ಎಷ್ಟೊಂದು ಅರ್ಥವಿತ್ತೋ ಆ ನೋಟದಲ್ಲಿ! ಎಷ್ಟೊಂದು ಸಂದೇಶಗಳಿದ್ದುವೊ!

ನಡುವಿರುಳಿನ ಹೊತ್ತಿಗೆ ಅಮ್ಮಿ ಒಂದು ಕ್ಷಣ ಚಡಪಡಿಸಿದಳು. ಹತ್ತಿರ ಬಂದುದೇನನ್ನೋ ಓಡಿಸುವಂತೆ ಕೈ ಬೀಸಿದಳು. ಅದು ಸಾವಿಗೆ ಆಕೆ ನೀಡಿದ ಕೊನೆಯ ಪ್ರತಿಭಟನೆ.

ಸೋತೆ—ಎನ್ನುವಂತೆ ತಲೆ ಒಂದು ಕಡೆಗೆ ವಾಲಿತು. ಕಣ್ಣುಗಳು ಮುಚ್ಚಿಕೊಂಡುವು. ಅಮ್ಮಿಯ ಅವಸಾನವಾಯಿತು.

o o o o

ಮರುದಿನ ಬೆಳಿಗ್ಗೆ ಹಳ್ಳಿಯ ಜನರೆಲ್ಲ ಬಂದರು. ತಮ್ಮ ಮಣ್ಣಿನ ಕೂಸಾಗಿದ್ದ ಬನಶಂಕರಿಯನ್ನು ಅವರು ಒಯ್ದರು—ಮಸಣಕ್ಕೆ.

ಬದುಕಿದ್ದಾಗಲೇ ಸಾವಿರ ಸಾರೆ ಬೆಂದಿದ್ದ ಜೀವ, ಸತ್ತಾಗ ಒಣಗಿದ ತರಗೆಲೆಯ ಹಾಗೆ ಉರಿದುಹೋಯಿತು.

o o o o

ಆ ಒಂದು ಸಂಜೆ—ರಾತ್ರೆ ಅಲ್ಲಿದ್ದು ಮಾರನೆಯ ದಿನ ರಾಜಣ್ಣನೂ ರಮೆಯೂ ಬೆಂಗಳೂರಿಗೆ ಹೊರಟರು.

ಹಾದಿಯಲ್ಲಿ, ರಮೆಯ ಅಂಗೈಯನ್ನು ಭದ್ರವಾಗಿ ಹಿಡಿಯುತ್ತ ರಾಜಣ್ಣ ಹೇಳಿದ:

"ಅಮ್ಮಿ ಕೊನೆಗೂ ಹೋಗಿಯೇ ಬಿಟ್ಟಳು ರಮಾ: ಅಂತೂ ಒಂದು ಕತೆ ಮುಗಿಯಿತು, ಎಂಥ ರುದ್ರ ಕತೆ!"

ವಾತ್ಸಲ್ಯಮಯಿಯಾಗಿ ರಮಾ ರಾಜಣ್ಣನನ್ನು ನೋಡಿದಳು.

"ದೇವಿ ಅಂತಾರೆ . . . ದೇವಿ ಅಂದರೇನೋ ನನಗೆ ತಿಳೀದು ರಮಾ . . . ಆದರೆ ಯಾವುದೇ ಭವ್ಯ ದೇವಿಯ ಕಲ್ಪನೆ ಈ ವಾಸ್ತವತೆಗಿಂತ ಯಾವತ್ತೂ ಹೆಚ್ಚಿನದಾಗದು."

"ಹೌದು ರಾಜ. ಆಕೆ ದೇವಿ."

---

The Cnn.
30-3-94.

# ನಿರಂಜನ ಕಾದಂಬರಿಗಳು

ಕಥಾ ಸಾಹಿತ್ಯದ
ಈ ಸರಣಿಯಲ್ಲಿ

ಪುನರ್ಮುದ್ರಣ

ವಿಮೋಚನೆ
ರಂಗಮ್ಮನ ವಠಾರ
ನೋವು
ನಂದಗೋಕುಲ
ಅಭಯ
ಕಲ್ಯಾಣಸ್ವಾಮಿ
ಬನಶಂಕರಿ
ಬಂಗಾರದ ಜಿಂಕೆ
ಸ್ವಾಮಿ ಅಪರಂಪಾರ

ಹೊಸದು



ಬನಶಂಕರಿ ಅಮ್ಮಿಯ ಆಕಾಶದಲ್ಲಿ
ಸೂರ್ಯ ಚಂದ್ರ ನಕ್ಷತ್ರಗಳಿಲ್ಲ
ಕೌಟುಂಬಿಕ ಜೀವನದ ಸುಖದಿಂದ
ಆಕೆ ವಂಚಿತಳು

ಕಮರಿದ ಆಸೆಯ ಚಿಗುರನ್ನು
ವಿವಾಹದ ಹೊರಗೆ ಕಂಡಳು

* *

ಸಮಾಜದ ಅಗ್ನಿಕುಂಡದಲ್ಲಿ
ಬನಶಂಕರಿ ಬೆಂದಳು ಬೂದಿಯಾದಳು

* * *

**ಹಲವು ಸಹಸ್ರ ಓದುಗರ**
**ಮೆಚ್ಚುಗೆ ಗಳಿಸಿರುವ**
**ನಿರಂಜನ ಕಾದಂಬರಿ : ' ಬನಶಂಕರಿ '**